# ಅವಳ ಕತೆ

ಕಾದಂಬರಿ

ದೇವುಡು

ವಾಹಿನಿ ಪ್ರಕಾಶನ, ಬೆಂಗಳೂರು ೨.

# ಮುನ್ನುಡಿ

ಇದು ವಿಜಯನಗರದ ಹಿನ್ನೆಲೆಯಲ್ಲಿ ರಚಿತವಾಗಿರುವ ಒಂದು ಸ್ವತಂತ್ರ ಕಾದಂಬರಿ. ರಾಮರಾಯನೊಬ್ಬ ಐತಿಹಾಸಿಕ ವ್ಯಕ್ತಿ. ಆತನೇ ವಿಜಯನಗರದ ಕೊನೆಯ ಸಮ್ರಾಟ್. ಕೃಷ್ಣದೇವರಾಯನು ರಾಮರಾಯನ ಹಿಂದಿನ ಸಮ್ರಾಟ್. ಆತನ ಕಾಲದಲ್ಲಿ ಕುಹೂಯೋಗ ಬಂದಿದ್ದಾಗ ಶ್ರೀವ್ಯಾಸರಾಯರು ಅದನ್ನು ಪರಿಹರಿಸಿದರೆಂಬ ಐತಿಹಾಸಿಕ ಘಟನೆ. ವಿಜಯ ನಗರದಲ್ಲಿ ಸಂಗೀತವು ಬಹಳ ಮುಂದುವರಿದಿತ್ತು ಎಂದು ಚರಿತ್ರೆಯು ಹೇಳಿರುವ ವಿಷಯ. ಹಿಂದೂ ಸಾಮ್ರಾಜ್ಯವಾದ ವಿಜಯನಗರದಲ್ಲಿ ಜಯದೇವ, ಕಾಲಿದಾಸ, ಇವರಿಗೆ ಅಪೂರ್ವವಾದ ಗೌರವವಿದ್ದೇ ಇರಬೇಕು ಎಂಬ ಸಂಭಾವನೆ. ಇವೆಲ್ಲ ಸೇರಿ, ಈ ಕಾದಂಬರಿಯು ಹುಟ್ಟಿದೆ. ಗೆದ್ದಿರುವುದು ಎಷ್ಟು? ಸೋತಿರುವುದು ಎಷ್ಟು? ಎಂಬ ವಿಮರ್ಶೆಯು ಕೆಲಸ ನನಗಲ್ಲ; ನನ್ನದಲ್ಲ. ಆದರೂ ಒಂದು ಮಾತು. ಇದು “**ಅವಳ ಕತೆ**”. ವಿಜಯನಗರದ ಕಥೆಯಲ್ಲ.

ಪವಾಡಗಳ ವಿಚಾರವಾಗಿ ಒಂದು ಮಾತು ಆಡಬೇಕು. ಹಿಂದೂ ಸಂಸ್ಕೃತಿ, “ತಾನು, ತನ್ನವರು, ತನಗಿಂತ ಮೇಲಿನದೊಂದು, ತನಗಿಂತ ಕೀಳೊಂದು, ಎಂದರೆ, ವ್ಯಕ್ತಿ, ಅವನ ಕುಲ, ಮೇಲು, ಕೀಳು ಎಂದು ಒಪ್ಪಿಕೊಂಡಿದೆ. ದೇವರು ಎಲ್ಲಿಯೋ ಸ್ವರ್ಗದಲ್ಲಿಲ್ಲ. ಇಲ್ಲಿ, ಈಗ, ಹೊರಗೆ, ಒಳಗೆ, ಎಲ್ಲಾ ಇದ್ದಾನೆ; ವಿಶ್ವಮಾವೃತ್ಯ ತಿಷ್ಠತಿ; ಎಲ್ಲವನ್ನೂ ಆವರಿಸಿಕೊಂಡು ಇದ್ದಾನೆ” ಎಂದು ಅಂಗೀಕರಿಸಿದೆ. ಇದಕ್ಕೆ ವಿರುದ್ಧವಾದ ಭಾವನೆ ಇಂದಿನ ಜನಾಂಗದಲ್ಲಿ ಮೂಡಿದೆ. ಅದರಿಂದ ಈ ಹಿಂದೂ ಸಂಸ್ಕೃತಿಯ ತಾನು, ತನ್ನ ಸಮಾಜ, ತನ್ನ ದೇವರು, ತನ್ನ ಲೋಕ, ಇವುಗಳನ್ನು ಹೇಳುವುದು ಹೊಸಬರಿಗೆ ಸೋಜಿಗವಾಗಿ ತೋರಿದರೂ, ಹಳೆಯವಾಸನೆ ಬಿಟ್ಟಿಲ್ಲ. ಬಿಡುವುದಿಲ್ಲ. ಬಿಡುವುದಕ್ಕಾಗುವುದಿಲ್ಲ ಎಂದು ಬಲ್ಲವರಿಗೆ ಹೊಸತೇನೂ ಇಲ್ಲ.

“ಜಗತ್ತು ಮುಂದುವರಿದಿದೆ; ಹೊತ್ತು ಹೊತ್ತಿಗೆ ಹೊಸ ಶೃಂಗಾರ ಬೇಕು; ಈಗಲೂ ಈ ಹಳೆಯ ವಾಸನೆಯೇಕೆ?” ಎನ್ನುವವರಿಗೂ ಒಂದು ಮಾತು ಹೇಳಬೇಕು. ದೇವರು ಬರುವುದು ಮೊದಲಾದವಕ್ಕೆ ಶಾಸನಗಳ

ಆಧಾರವನ್ನು ಕರ್ನಾಟಕ ಸಂಸ್ಕೃತಿಯಲ್ಲಿ ಕೊಡಲಾಗಿದೆ. ಅದರ ಜೊತೆಗೆ "ಈಗ ಪಾಶ್ಚಾತ್ಯ ದೇಶಗಳಲ್ಲಿ ಅತೀಂದ್ರಿಯ ವಿಷಯಗಳ ಪರಿಶೋಧನಕ್ಕೆಂದು ಹಲವಾರು ಸಂಸ್ಥೆಗಳು ಹೊರಟು ತಮ್ಮ ತಮ್ಮ ವರದಿಯನ್ನು ಪ್ರಕಟಿಸುತ್ತಿವೆ. ಅವುಗಳನ್ನು ನೋಡಿ" ಎಂದು ಹೇಳಿ, "ಇದು ನಿಜ. ಸುಳ್ಳಲ್ಲ. ಸುಳ್ಳು ಎನ್ನುವವರು ಹುಡುಕಿನೋಡಿ" ಎಂದು ಮಾತ್ರ ಹೇಳುತ್ತೇನೆ. ಅಂಥವರಿಗಾಗಿ ಆರಂಭದಲ್ಲಿ ಶ್ರೀ ಹಕ್ಸ್ಲಿಯವರ ಮಾತು ಹೇಳಿರುವುದು.

ನನ್ನ ಜೀವನದಲ್ಲಿಯೇ ಆವೇಶ ಬಂದು ಹಲವಾರು ಅದ್ಭುತಗಳನ್ನು ನಡೆಸಿರುವವರನ್ನು ನೋಡಿದ್ದೇನೆ. ಅದರಿಂದ, ಬುದ್ಧಿಗೆ, ಮನಸ್ಸಿಗೆ, ಇಂದ್ರಿಯಗಳಿಗೆ ಅರಿವಾಗದ ಎಷ್ಟೋ ವಿಷಯಗಳುಂಟು ಎಂಬ ಭಾವನೆ ನನಗೆ ದೃಢವಾಗಿದೆ. ಬುದ್ಧಿಯನ್ನು ಪ್ರೇರಿಸುವ ಶ್ರದ್ಧೆಯೊಂದಿದೆ. ಅದು ಬುದ್ಧಿಯನ್ನು ಪ್ರಚೋದಿಸುತ್ತದೆ ಎಂದು ಧೈರ್ಯವಾಗಿ ಹೇಳಬಹುದು.

ಆ ಶ್ರದ್ಧೆ ಹಿಂದೂ ಸಮಾಜದಲ್ಲಿ ಈಗ ಲೋಪವಾಗುತ್ತಿದೆ. ಶ್ರದ್ಧೆ ಜಾಡ್ಯವಲ್ಲ; ಶ್ರದ್ಧೆ ಅಲೌಕಿಕ ಬಲ ಎಂಬುದನ್ನು ತೋರಿಸಿದವರು ನಮ್ಮಲ್ಲಿ ಹಲವರಿದ್ದಾರೆ. ನರೇಂದ್ರನು ಕಲ್ಕತ್ತಾ ವಿಶ್ವವಿದ್ಯಾನಿಲಯದ ಅತಿಶ್ರೇಷ್ಠ ಬುದ್ಧಿವಂತ; ವಿದ್ಯಾವಂತ. ಅವನನ್ನು ವಿವೇಕಾನಂದನಾಗಿ ಮಾಡಿದ ಮಹಾಪುರುಷ ಶ್ರದ್ಧಾವಂತ. ಅದರಿಂದಲೇ ಹಿಂದಿನ ಪ್ರಾರ್ಥನೆ "ಶ್ರದ್ಧಾಂ ಮೇಧಾಂ, .... ವಿದ್ಯಾಂ ಬುದ್ಧಿಂ .... ದೇಹಿ" ಎಂದು ಎಲ್ಲಕ್ಕೂ ಮೊದಲು ಶ್ರದ್ಧೆಯನ್ನು ಅಪೇಕ್ಷಿಸಿದುದು.

ಈ ಕಥೆಯನ್ನು ಪ್ರಕಟಿಸಿದ 'ವಾಹಿನಿ ಪ್ರಕಾಶನದ' ಗೆಳೆಯ ಚಿಂತಾಮಣಿಯವರಿಗೆ ನಾನು ಕೃತಜ್ಞತೆಯ ವಂದನೆಗಳನ್ನು ಒಪ್ಪಿಸುತ್ತೇನೆ.

ಬೆಂಗಳೂರು,
10—4—52

ದೇವುಡ

Outside the body matter can be influenced by the mind in two ways—first, by means of the body & second by a "supernormal" process recently studied under laboratory conditions described as the "PK effect."............

............ occurrences "supernormally" strange, but nevertheless attested by masses of evidence which it is hard to discount completely. Precisely how faith cures diseases or how St. Joseph of Cupertino was able to ignore the laws of gravitation, we do not know. In the same way we are unable to form any idea of the *modus operandi* of what Professor Rhine has called PK effect. Nevertheless the fact that the fall of dice can be influenced by the mental states of certain individuals seems now to have been established beyond the possibility of doubt........ The same is true of extra-sensory-perception. Apparent examples of it are constantly turning up in ordinary life. But science is almost impotent to cope with the particular case, the isolated instance. Promoting their methodological ineptitude to the rank of a criterion of truth, dogmatic scientists have often branded everything beyond the pale of their limited competence as unreal and even impossible. But when tests for ESP can be repeated under standardized conditions, the subject comes under the jurisdiction of the law of probabilities and achieves a measure of scientific respectability.

—ALDONS HUXLEY: *THE PERENNIAL PHILOSOPHY*.
(Pages: 34 & 35-6)

Vijayanagar came to include both the Andhra & the Karnataka provinces, for which reason the empire was knownas the **Andhra Karnataka Samrajya** or simply **Karnataka Samrajya**, the word Karnataka being applied to the Telugu region as well. The Tamil & Kannada provinces were held in subjection by the Viceroys and thus Krishna Devaraya was able to assume the proud title of Purva Paschima Dakshina Samudradhiswara and hold a famous Court, stories about which are current even today in popular accounts......The Telugu people refer to him as the Andhra Bhoja.

Foreign witnesses have described the City of Vijayanagar, as fourteen miles in length & twelve miles in breadth, full of palaces & gardens, extensive fortifications & teeming with untold wealth. In fact Vijayanagar was the centre of all trade, inland and foreign and was full of visitors, merchants & travellers.

—K. P. C. C.'s : *THE KARNATAKA HAND-BOOK.* pp. 81-82.

# ಅವಳ ಕಥೆ

## ಅಧ್ಯಾಯ ಒಂದು

೧

ವಿಜಯ ವಿಠ್ಠಲ ದೇವಸ್ಥಾನದಲ್ಲಿ ಇಂದು ಗದ್ದಲವೋ ಗದ್ದಲ. ಕಾರ್ತಿಕ ಶುದ್ಧ ದ್ವಾದಶಿ. ಸ್ವಾಮಿಗೆ ಇಂದು ಬೃಂದಾವನೋತ್ಸವ. ಚಿನ್ನದ ಬೃಂದಾವನದಲ್ಲಿ ಸ್ವಾಮಿಯನ್ನು ಬಿಜಮಾಡಿಸಿದ್ದಾರೆ. ರಂಗಮುಂಟಪದಲ್ಲಿ ಇಂದು ಸ್ವಾಮಿಯ ಸನ್ನಿಧಾನದಲ್ಲಿ ವಿದ್ಯಾನಗರದ ಪ್ರಸಿದ್ಧ ನರ್ತಕಿ ಚಿನ್ನಾಸಾನಿಯ ಅಭಿನಯ.

ಚಿನ್ನಾಸಾನಿಯು ಚಕ್ರವರ್ತಿಗಳ ಆಸ್ಥಾನದಲ್ಲಿ ನರ್ತಕಿಯರಿಂಗೆಲ್ಲ ಶಿರೋಮಣಿಯಂತಿದ್ದಳು. ಅವಳನ್ನು ಕಂಡವರು "ಎಲ್ಲೋ ಅಪ್ಸರಸೆ ಶಾಪದಿಂದ ಬಂದಿದ್ದಾಳೆ. ಇಲ್ಲದಿದ್ದರೆ ಈ ರೂಪ ಮಾನವಿಯರ ಗರ್ಭದಲ್ಲಿ ಬರುವುದೂ ಉಂಟೆ ?" ಎನ್ನುವರು. ಅವಳ ಗಾನವನ್ನು ಕೇಳಿದವರು "ಇವಳು ಮಾನವಿಯಲ್ಲ. ನಿಜವಾಗಿಯೂ ಯಾವಳೋ ಗಂಧರ್ವಾಂಗನೆ ಮಾನವಿಯ ವೇಷದಲ್ಲಿ ವಿದ್ಯಾನಗರದ ಚಕ್ರವರ್ತಿಗಳ ಅದೃಷ್ಟದ ರೂಪವಾಗಿ ಬಂದಿದ್ದಾಳೆ." ಎನ್ನುವರು. ಅವಳ ನರ್ತನವನ್ನು ಕಂಡವರು "ಇವಳು ಮಾನವಿಯಲ್ಲ, ಗಂಧರ್ವಳೂ ಅಲ್ಲ. ಯಾವಳೋ ವಿದ್ಯಾಧರಿಯಿರಬೇಕು ; ನರ್ತನ ವಿದ್ಯಾದೇವಿಯಿರಬೇಕು. ಅವಳು ಸೂಳೆಯ ಜಾತಿ. ಇಲ್ಲದಿದ್ದರೆ ಅವಳ ವಿದ್ಯೆಗೆ ಅವಳಿಗೆ ಪಾದಪೂಜೆ ಮಾಡಬೇಕು" ಎನ್ನುವರು. ಅವಳು ಹಾಡುವುದು ಚಕ್ರವರ್ತಿಯ ಆಸ್ಥಾನದಲ್ಲಿ ದೇವಸ್ಥಾನಗಳಲ್ಲಿ. ಅಂಗಡಿಗಳಲ್ಲಿ ರತ್ನಗಳನ್ನು ರಾಶಿರಾಶಿಯಾಗಿ ಸುರಿದುಕೊಂಡು ವ್ಯಾಪಾರ ಮಾಡುವ ಧನಿಕ ರಾಜರು, ಹಡಗು ವ್ಯಾಪಾರ ಮಾಡುವ ವಣಿಗ್ರತ್ನಗಳು, ಸಾಮಂತ ರಾಜರು, ಕೂಡ

ಅವಳ ಸಂಗೀತ ತಾಫೆ ಮಾಡಿಸಬೇಕು ಎಂದು ಎಷ್ಟೋ ಪ್ರಯತ್ನಪಟ್ಟಿದ್ದರು. ಹತ್ತು ಸಾವಿರ ಕೊಡುತ್ತೇವೆಂದರೂ ಅವಳು ಒಪ್ಪಲಿಲ್ಲ. ಜನದ ಮಾತು ನಿಜವಾದರೆ ಅವಳ ಆ ಮೂರು ಮಹಡಿಯ ಮನೆಯ ಕೆಳಗೆ ಇರುವ ನೆಲ ಮಾಳಿಗೆಯಲ್ಲಿ ಪೆಟ್ಟಿಗೆ ಪೆಟ್ಟಿಗೆ ಚಿನ್ನ ರನ್ನ ತುಂಬಿರುವಾಗ, ಅವಳಿಗೆ ಈ ಹಣದಿಂದ ಆಗಬೇಕಾದುದೇನು ?

ಚಿನ್ನಾಸಾನಿ ತಂಗಿ ರನ್ನಾಸಾನಿ. ಆ ಅಕ್ಕತಂಗಿಯರು ಎದುರಿಗೆ ಬಂದು ನಿಂತುಕೊಂಡರೆ ಹೆತ್ತ ತಾಯಿಗೂ ಕೂಡ ಅಕ್ಕ ಯಾರು ? ತಂಗಿ ಯಾರು ? ಎಂದು ಗೊತ್ತುಮಾಡುವುದು ಸಾಧ್ಯವಾಗುತ್ತಿರಲಿಲ್ಲ. ಅಷ್ಟೇನು ? ಅವರೇ ಕನ್ನಡಿಯ ಎದುರು ನಿಂತಾಗ ಅಕ್ಕತಂಗಿಯರಲ್ಲೇ ಅವರೇ ಅಕ್ಕ ಯಾರು ? ತಂಗಿ ಯಾರು ? ಎಂದು ಹೇಳಲು ಸಾಧ್ಯವಾಗುತ್ತಿರಲಿಲ್ಲ.

ಅಕ್ಕತಂಗಿಯರಿಬ್ಬರೂ ವಿದ್ಯಾವತಿಯರು. ಭರತ ಶಾಸ್ತ್ರದಲ್ಲಿ ಅದ್ವಿತೀಯರು. ಮಾರ್ಗದೇಶಿಗಳೆರಡರಲ್ಲೂ ಪ್ರವೀಣೆಯರು. ವೀಣೆ ಹಿಡಿದು ಕುಳಿತರೆ, ಅಕ್ಕನಿಗೆ ತಂಗಿ, ತಂಗಿಗೆ ಅಕ್ಕ ಜೋಡಿಯೇ ಹೊರತು ಇನ್ನೊಬ್ಬರು ಅವರ ಸಮ ಎನ್ನುವುದಿರಲಿ, ಅವರ ಹತ್ತಿರ ಹತ್ತಿರವೂ ಸುಳಿಯುವಂತಿಲ್ಲ. ಅದರಿಂದಲೇ ಹಂಪೆಗೆ ಹಂಪೆಯೇ ಅವಳ ಸಂಗೀತ ನರ್ತನಗಳೆಂದರೆ ಪ್ರಾಣ ಬಿಡುತ್ತಿದ್ದುದು. ಅವಳ ಕಚೇರಿಯೆಂದರೆ ಬಿಜಾಪುರ ಬಿದರೆ ಚಂದ್ರಗಿರಿಗಳಿಂದ ಕೂಡ ಜನ ಬಂದುಬಿಡುವರು.

ನರ್ತನದಲ್ಲಂತೂ ಇನ್ನೊಂದು ವಿಶೇಷ. ಅಕ್ಕನು ನರ್ತನಮಾಡುವಾಗ ತಂಗಿಯು ಹಿಮ್ಮೇಳದಲ್ಲಿ ಕೊಳಲು ಊದುವಳು. ಒಮ್ಮೊಮ್ಮೆ ಅಕ್ಕನು ರಾಧೆಯಾಗಿ ತಂಗಿಯು ಕೃಷ್ಣನಾಗಿ ಜಯದೇವ ಮಹಾಕವಿಯ ಅಷ್ಟಪದಿಗಳನ್ನು ಅಭಿನಯಿಸುವರು. ಆ ಅಭಿನಯವನ್ನು ಕಂಡವರು " ಜಯದೇವನೇನಾದರೂ ಇದನ್ನು ಕಂಡಿದ್ದರೆ, ತಾನು ಅಷ್ಟಪದಿಗಳನ್ನು ಬರೆದುದು ಸಾರ್ಥಕವಾಯಿತು ಎಂದು ಪರಮಾನಂದಪಡುತ್ತಿದ್ದನು " ಎನ್ನುವರು. ಪಾಮರರಿರಲಿ, ಪಂಡಿತರಾದವರು ಕೂಡ ಆ ಅಭಿನಯವನ್ನು ಕಂಡು ತಲ್ಲೀನರಾಗಿ ಮೈಮರೆಯುವರು. ಒಮ್ಮೆ ಅಭಿನಯವನ್ನು ಕಂಡವರು ಇನ್ನೊಮ್ಮೆ ಕಾಣುವುದಕ್ಕೆ ಅವಕಾಶ ಸಿಕ್ಕೀತೆ ಎಂದು ತಪಸ್ಸುಮಾಡುವರು.

ಆ ಚಿನ್ನಳ ಗುಣವೂ ಚಿನ್ನ ಎಂದು ರಾಜಧಾನಿಯೆಲ್ಲಾ ಬಲ್ಲುದು.

ಮಾಘ ಮಾಸವು ಬಂತೆಂದರೆ ಶಿವರಾತ್ರಿಯ ದಿನ ವಿರೂಪಾಕ್ಷನಿಗೆ ರುದ್ರಾಕ್ಷಿಯ ಮಂಟಪದ ಉತ್ಸವ. ಶಿವರಾತ್ರಿಯ ಉತ್ಸವಕ್ಕೆ ಹದಿನೈದು ದಿನ ಮೊದಲಿಂದ ರುದ್ರಯಾಗಗಳು. ಶಿವರಾತ್ರಿಯ ದಿನ ಪೂರ್ಣಾಹುತಿ. ಮರುದಿನ ತುಂಗಾತೀರದಲ್ಲಿ ಭಾರಿಯ ಸಮಾರಾಧನೆ. ಏನು ಮಹಾ ಎಂದು ಕರುಬುವವರೂ ಕೂಡ ಹೀಗೆ ಮಾಡಲು ಇತರರಿಂದ ಸಾಧ್ಯವಿಲ್ಲ ಎನ್ನುವರು. ಫಾಲ್ಗುಣಮಾಸದಲ್ಲಿ ಕಾಮದೇವೋತ್ಸವ. ಚಿನ್ನಳ ಕಾಮದೇವನು ಮೆರವಣಿಗೆ ಹೊರಟರೆ ಉತ್ಸವ ಒಂದು ಗಾವುದ. ಮೈತುಂಬ ಒಡವೆ ಇಟ್ಟು ಕೊಂಡು, ಕೆಂಪು ನಿರಾಜಿಯ ಸೀರೆ ಉಟ್ಟುಕೊಂಡು ಅವಳು ಮುಂದೆ ಆರು ಚಕ್ರದ ಗಾಡಿಯಲ್ಲಿ ಕುಳಿತು ಕಾಮದೇವನ ಧ್ವಜವೋ ಎಂಬಂತೆ ಹೊರಡುವಳು. ಹಿಂದೆ ಹೆಣ್ಣು ಬೊಂಬೆಗಳಿಂದ ಮಾಡಿರುವ ಕುದುರೆಯ ಮೇಲೆ ಕಾಮದೇವನು ಕಬ್ಬಿನ ಬಿಲ್ಲನ್ನು ಹಿಡಿದು ಕುಳಿತಿದ್ದರೆ ಅವನೆದುರಿಗೆ ಅಂತಹುದೇ ಬೊಂಬೆಗಳಿಂದ ಆದ ಮದ್ದಾನೆಯ ಮೇಲೆ ರತಿಯು ಕಬ್ಬಿನ ಬಿಲ್ಲು ಹಿಡಿದು ಕುಳಿತಿರುವಳು. ಆ ರತೀಮನ್ಮಥರ ಅಲಂಕಾರಕ್ಕೆ ಇಟ್ಟದ್ದ ಒಡವೆಗಳೆಲ್ಲ ಕಳ್ಳನ ಕೈಗೆ ಕೊಟ್ಟರೆ ಲಕ್ಷರೂಪಾಯಿಗೆ ಮೋಸವಿಲ್ಲ. ಅಂತೂ ಆ ಉತ್ಸವ ನೋಡುವುದಕ್ಕೆ, ರತೀಮನ್ಮಥರ ದರ್ಶನಕ್ಕಿಂತ ಹೆಚ್ಚಾಗಿ ಚಿನ್ನರನ್ನರ ದರ್ಶನಕ್ಕಾಗಿ ಜನ ಮೊಗಚುವುದು. ದಶಮಿಯಿಂದ ಹುಣ್ಣಿಮೆಯ ವರೆಗೆ ಉತ್ಸವವೋ ಉತ್ಸವ. ಗೋಲ್ಕಂಡ ಬಿಜಾಪುರಗಳ ಸುಲ್ತಾನರೂ ಕೂಡ ವೇಷ ಮರೆಸಿಕೊಂಡು ಬಂದು ಆ ಉತ್ಸವವು ಮುಗಿಯುವವರೆಗೂ ಅಲ್ಲಿ ಇದ್ದು ಹೋಗುವರು ಎಂದು ವದಂತಿ.

ಚೈತ್ರಮಾಸದಲ್ಲಿ ರಾಮೋತ್ಸವವೂ ಹಾಗೆಯೇ ಅದ್ಭುತವಾಗಿ ನಡೆಯುವುದು. ಚೋಳಮಂಡಲದ ವಿದ್ವಾಂಸರು ಬಂದು ಶ್ರೀರಾಮನ ಮುಂದೆ ಹಾಡುವರು. ಆದರೆ ಅವರು ನಿಜವಾಗಿಯೂ ಬಯಸುತ್ತಿದ್ದುದು ಚಿನ್ನರನ್ನರ ಅನುಗ್ರಹವನ್ನೇ ಹೊರತು ಶ್ರೀರಾಮನ ಅನುಗ್ರಹವನ್ನಲ್ಲ. ಆಂಧ್ರ ಕರ್ನಾಟ ಚೋಳ ಕೇರಳ ಮಹಾರಾಷ್ಟ್ರ ಪ್ರಾಂತಗಳ ಹಿಂದೂ ವಿದ್ವಾಂಸರಿರಲಿ, ಷಾಹಿ ಅರಸರ ಮೆಚ್ಚಿನ ಗವಾಯಿಗಳೂ ಕೂಡ ಚಿನ್ನಾಸಾನಿಯ ರಾಮೋತ್ಸವಕ್ಕೆ ಆಹ್ವಾನ ಬಂದರೆ ಅದೊಂದು ಅನುಗ್ರಹವೆಂದು ಭಾವಿಸುವರು. ಚಕ್ರವರ್ತಿಗಳ ಆಹ್ವಾನವನ್ನು ತಿರಸ್ಕರಿಸಿದ ಕೊಬ್ಬಿದ ವಿದ್ವಾಂಸರೂ ಚಿನ್ನಾಸಾನಿಯ

ಆಹ್ವಾನವನ್ನು ತಿರಸ್ಕರಿಸುತ್ತಿರಲಿಲ್ಲ. ಅವರನ್ನೇ ಕೇಳಿದರೆ, "ಚಕ್ರವರ್ತಿಗಳು ಜಂಭಕ್ಕೆ ಮಾಡಿಸುತ್ತಾರೆ. ಅವರ ಮುಂದೆ ಹಾಡಿದರೆ ಕೀರ್ತಿ. ಚಿನ್ನಾಸಾನಿಯಂತಹ ವಿದ್ಯಾವಂತೆಯ ಮುಂದೆ ಹಾಡಿದರೆ ವಿದ್ಯಾದೇವತೆ ಒಪ್ಪುತ್ತಾಳೆ" ಎನ್ನುವರು.

ಷಾಹಿ ನವಾಬರು ಚಿನ್ನಾ ಸೋದರಿಯರ ಗಾನನರ್ತನಗಳಿಂದ ಸಂತೋಷಿಸಬೇಕೆಂದು ಆಹ್ವಾನವನ್ನು ನೀಡಿದರು. ಐದು ದಿನಕ್ಕೆ ಒಂದು ಲಕ್ಷ ರೂಪಾಯಿ ಬಹುಮಾನ ಕೊಡುವುದಾಗಿ ಹೇಳಿ ಕಳುಹಿಸಿದರು. ಅವಳು ಒಪ್ಪಲಿಲ್ಲ. ಚಕ್ರವರ್ತಿಗಳಿಗೇ ಮನವಿ ಕಳುಹಿಸಿದರು. ಅವರೂ ಆಕೆಯನ್ನು ಕರೆಸಿಕೊಂಡು "ಹೋಗಿಬಾ ಚಿನ್ನ, ನಮ್ಮ ಆಸ್ಥಾನದ ಕೀರ್ತಿ ಬೆಳೆಯಲಿ" ಎಂದರು. ಚಿನ್ನಳು ಚೊಕ್ಕವಾಗಿ ಕೈಮುಗಿದು "ಮಹಾಪ್ರಭು. ವಿಜಯನಗರದ ಚಕ್ರವರ್ತಿಗಳಿಗೆ ಜಯವಾಗಲಿ ಎಂದು ಮುಗಿದ ಕೈ ಮತ್ತೊಬ್ಬರಿಗೆ ಮುಗಿಯುವುದು ಸಾಧ್ಯವಿಲ್ಲ" ಎಂದಳು. ಅವಳ ಅಭಿಮಾನ, ಆ ಬಿಂಕ ಆಗತ್ತು, ಎಲ್ಲವೂ ಚಕ್ರವರ್ತಿಗಳಿಗೆ ಬಹುಮೆಚ್ಚಾಗಿ "ಹುಚ್ಚಿ, ಇದು ವಿದ್ಯಾಸ್ಥಾನ. ಗೋಲ್ಕಂಡ ಲಕ್ಷ್ಮಿಸ್ಥಾನ ಎನ್ನುತ್ತಾರೆ. ಗೋಲ್ಕಂಡದ ನವಾಬನಿಗೆ ವಜ್ರದ ಗಣಿಯಿದೆ. ನಿನಗೂ ವಜ್ರದ ಅಂಗಿ ತೊಡಿಸಿ ಕಳುಹಿಸುತ್ತಾನೆ. ಹೋಗಿ ಬಾ" ಎಂದರು. ಚಿನ್ನಳು ನಗುನಗುತ್ತಾ ಎಲ್ಲರನ್ನೂ ಕಳುಹಿಸುವಂತೆ ಅರಸನಿಗೆ ಸನ್ನೆಮಾಡಿ ಏಕಾಂತದಲ್ಲಿ ಕುಳಿತ ಅರಸನ ಬಳಿ ಸಾರಿ, "ಹುಚ್ಚು ದೊರೆ, ಆ ತುರುಕನಿಗೆ ಬೇಕಾದ್ದು ನನ್ನ ಸಂಗೀತವಲ್ಲ, ನಿನ್ನ ಚಿನ್ನ." ಎಂದು ಸೋಟೆ ತಿವಿದಳು. ಅಂದಿನಿಂದ ಚಕ್ರವರ್ತಿಗಳು ಆ ಸುದ್ದಿ ಮತ್ತೆ ಎತ್ತಲಿಲ್ಲ. ಅಂತೂ ರಾಜಧಾನಿಯಲ್ಲೆಲ್ಲಾ ಈ ಸುದ್ದಿ ಹರಡಿ ಚಿನ್ನಳ ಕೀರ್ತಿ ತೆಂಗಿನಮರದಷ್ಟು ಎತ್ತರ ಇದ್ದುದು ಮುಗಿಲು ಮುಟ್ಟಿತ್ತು.

೨

ದೇವಸ್ಥಾನದಲ್ಲಿ ಜನ ಕಿಕ್ಕಿರಿದು ತುಂಬಿದೆ. ಕಲ್ಯಾಣ ಮಂಟಪವೆಲ್ಲ ಅಲಂಕಾರವಾಗಿದೆ. ಕಂಭಕಂಭಕ್ಕೂ ಹೂವಿನ ಶೃಂಗಾರವಾಗಿ ಸ್ವಾಮಿಯನ್ನು

ಇದಿರುಗೊಳ್ಳುವುದಕ್ಕೆ ನಿಂತಿರುವ ದೇವಪುರುಷರಂತಿವೆ. ಹೂವಿನ ತೋರಣಗಳು ಹೂವಿನ ಹಂಜರ, ಎಲ್ಲವೂ ಸೇರಿ, ಪುಷ್ಪಸಮುದ್ರದಂತಿದೆ. ಸಣ್ಣ ಗಾಳಿಯಾಡಿ ಆ ಹೂವು ಅಲೆದರೆ ಕ್ಷೀರಸಾಗರದಲ್ಲಿ ಏಳುವ ಅಲೆಗಳಂತೆ ತೋರುತ್ತದೆ. ಅದರ ನಡುವೆ ಒಂದು ಹೂವಿನ ಮಂಟಪ. ಏಳೆಡೆಯ ಹಾವು ಹೆಡೆಯನ್ನು ಬಿಚ್ಚಿಕೊಂಡು ತೆಕ್ಕೆಯನ್ನು ಹಾಕಿಕೊಂಡು ಕುಳಿತಿರುವ ಆಕಾರದಲ್ಲಿ ಮಾಡಿದೆ. ಕೊಂಚದೂರದಲ್ಲಿ ನಿಂತುಕೊಂಡು ನೋಡಿದರೆ, ಆ ಹೂವಿನ ಹಾವು ಪುರಾಣಗಳಲ್ಲಿ ಹೇಳುವ ಶೇಷನಂತೆ ಕಂಡು, ಕಲ್ಯಾಣಮಂಟಪವೇ ಕ್ಷೀರಸಾಗರ, ಆ ಹಾವೇ ಶೇಷ, ಎಂಬ ನಂಬಿಕೆಯನ್ನು ಹುಟ್ಟಿಸುವಂತಿವೆ. ಅಲಂಕಾರವೆಲ್ಲ ಆಗಿರುವುದು ಜಾಜಿಯ ಹೂವಿನಿಂದ. ಜಾಜಿಯ ಹೂವಿನ ಆ ಸುವಾಸನೆ ಅಲ್ಲೆಲ್ಲಾ ಹಬ್ಬಿಹೋಗಿದೆ. ಅಷ್ಟೇನು? ಹೂವಿನ ಪರಿಮಳ ಅಲ್ಲಿ ಕೆನೆ ಕಟ್ಟಿರುವಂತೆಯೂ, ಆ ಮಂಟಪದಲ್ಲಿ ಒಂದು ಸಲ ಹೋಗಿ ಸುತ್ತಿಕೊಂಡು ಬಂದರೆ ಮೈಗೆಲ್ಲಾ ಹತ್ತಿಕೊಳ್ಳುವಂತೆಯೂ ಇದೆ.

ಜೊತೆಗೆ ಮುದ್ದಾದ ಊದು ಕಡ್ಡಿಗಳು ಕಂಭಕಂಭದಲ್ಲಿಯೂ ಇದ್ದು ಸಜ್ಜನರ ಮನಸ್ಸಿನಿಂದ ಹೊರಡುತ್ತಿರುವ ಶುಭಾಶಯಗಳ ಮಾಲೆಯಂತೆ ಸಣ್ಣ ಬಿಳಿಯ ಧೂಮವನ್ನು ಚೆಲ್ಲುತ್ತಾ ಆ ಹೂವಿವ ವಾಸನೆಗೆ ಇನ್ನೊಂದು ಸುವಾಸನೆಯನ್ನು ಬೆರಸಿವೆ. ಅಲ್ಲಲ್ಲಿ ಪಚ್ಚೆತೆನೆಯ ವಾಸನೆ, ಪಾರಿಜಾತದ ಪರಿಮಳ, ಸಂಪಗೆಯ ಸೊಗಡು, ತಾಳೆಯ ಗಂಧ, ತಾವರೆಯ ಆಮೋದ ಗಳನ್ನು ತೆರೆತೆರೆಯಾಗಿ ಚೆಲ್ಲುತ್ತಾ ಮನೋಹರವಾದ ಸುಗಂಧದ ಮೋಡಗಳನ್ನೆಬ್ಬಿಸುತ್ತಿವೆ. ಇದರ ಜೊತೆಗೆ ಶ್ರೀಗಂಧದ ನೀರು ಚುಮುಕಿಸಿ ನೆಲವೆಲ್ಲಾ ಗಂಧಮಯವಾಗಿದೆ. ಅಲ್ಲಿ ಸ್ವಾಮಿಯು ಬಿಜಮಾಡಿಸುವೆಡೆಯಲ್ಲಿ ನೆಲವೆಲ್ಲ ಗಂಧದಿಂದ ಸಾರಣೆಯಾಗಿ ಕುಂಕುಮಕೇಸರಿ, ಪಚ್ಚಕರ್ಪೂರ, ಪುನುಗು, ಕಸ್ತೂರಿಗಳ, ರಂಗವಲ್ಲಿಯಿಂದ ಶೋಭಿತವಾಗಿ, ತಾವು ಇರುವೆಡೆಯಿಂದಲೇ ದೂರಕ್ಕೆ ತಮ್ಮ ಇರುವಿಕೆಯನ್ನು ತಿಳಿಸುವ ದೂತನೆಂಬಂತೆ ತಮ್ಮ ಪರಿಮಳವನ್ನು ಬೀಸುತ್ತಿವೆ. ಒಟ್ಟಿನಲ್ಲಿ ಒಂದು ಸ್ವರ್ಗವಿರುವಾದರೆ ಅದಿಂದು ಆ ಕಲ್ಯಾಣಮಂಟಪಕ್ಕಿಳಿದು ಬಂದಿದೆ.

ಮಂಟಪದಲ್ಲಿ ಸ್ವಾಮಿಯ ಸ್ಥಾನದ ಎಡಗಡೆ ರಾಜ ಸ್ತ್ರೀಯರೇ ಮೊದಲಾದ ಗಣ್ಯರಾದ ಮಹಿಳಾ ವರ್ಗವು ಮಂಡಿಸಿದೆ. ಬಲಗಡೆ, ರಾಜ

ಪುರುಷರು, ವಿದ್ವಾಂಸರು, ಸೆಟ್ಟಿಗಳು, ಮೊದಲಾದವರೆಲ್ಲ ಕುಳಿತಿದ್ದಾರೆ. ಸ್ತ್ರೀಯರು ತೊಟ್ಟಿರುವ ಭೂಷಣಗಳ ಕಾಂತಿಯು ಆ ತುಪ್ಪದ ದೀಪಗಳ ಮಂದ ಪ್ರಭೆಯಲ್ಲಿ ಸಣ್ಣ ಸಣ್ಣ ಕಾಮನ ಬಿಲ್ಲುಗಳನ್ನು ಚೆಲ್ಲುತ್ತಿದೆ. ಇತ್ತಕಡೆ ಪುರುಷರು ಧರಿಸಿರುವ ಆಭರಣಗಳ ಕಾಂತಿಯು ಆ ಸ್ತ್ರೀ ಮಂಡಲದ ಕಡೆಯಿಂದ ಎದ್ದಿರುವ ಕಾಮನಬಿಲ್ಲುಗಳು ಇತ್ತಲೂ ಪ್ರತಿಫಲಿಸಿ ಒಂದರೊಳಗೊಂದು ಬೆರೆದುಹೋದಂತೆ ತೋರುತ್ತಿವೆ. ಮಂಟಪದ ಈಚೆ ಸಾವಿರಾರು ಜನರು ನಿರೀಕ್ಷೆಯಿಂದ ಕಾದಿದ್ದಾರೆ.

ಸುಮಾರು ಒಂದು ಪ್ರಹರವಾಗಿರಬಹುದು. ದೇವರು ನಗರೋತ್ಸವವನ್ನು ಮುಗಿಸಿಕೊಂಡು ಹಿಂತಿರುಗಿದ್ದಾರೆ. ಚಿನ್ನದ ಬೃಂದಾವನವನ್ನು ಹೂವಿನ ಮಂಟಪದಲ್ಲಿಟ್ಟು ಅದರ ಮುಂದೆ ಸ್ವಾಮಿಯನ್ನು ಕುಳ್ಳಿರಿಸಿದ್ದಾರೆ. ಚಿನ್ನದ ಕಡ್ಡಿಗಳು ಪಚ್ಚೆಯ ಎಲೆಗಳೂ ತೆನೆಗಳೂ ಉಳ್ಳ ತುಲಸಿಯ ಗಿಡವು ಒಂದು ಮೊಳ ಎತ್ತರವಾಗಿ ಹರಡಿ, ಸುಮಾರು ಎರಡು ಮೊಳ ಎತ್ತರವಾಗಿರುವ ಬೆಳ್ಳಿಯ ಬೃಂದಾವನದಲ್ಲಿ ಮೆರೆಯುತ್ತಾ ಸ್ವಾಮಿಯ ಮೇಲೆ ಬಾಗಿದೆ. ಸುತ್ತಲಿನ ದೀಪಗಳ ಕಾಂತಿಯಲ್ಲಿ ಪಚ್ಚೆಯ ಎಲೆಗಳೂ ತೆನೆಗಳೂ ತಮ್ಮ ಹಸುರು ಕಾಂತಿಯನ್ನು ಕಕ್ಕುತ್ತಾ ಶ್ಯಾಮಸುಂದರನನ್ನು ಕರೆಯುವಂತಿವೆ. ಜಿಗಿಜಿಗಿಸುವ ವಸ್ತ್ರಭೂಷಣಗಳ ಕಾಂತಿಯು ದೇವರ ಪ್ರತಿಮೆಯ ಸುತ್ತಲೂ ಆವರಿಸಿಕೊಂಡಿದ್ದು ಮಹಾವಿಷ್ಣುವಿನ ಸುತ್ತಲೂ ಸಹಜವಾಗಿ ವ್ಯಾಪ್ತವಾಗಿರುವ ಯೋಗಮಾಯೆಯಿದ್ದಂತಿದೆ. ಹತ್ತಿರದಿಂದ ನೋಡಿದರೂ ಇದು ವಿಗ್ರಹ, ಇದು ಒಡವೆ, ಇದು ವಸ್ತ್ರ, ಇದು ಹೂ ಎಂದು ಹೇಳುವಂತಿಲ್ಲ. ಆದರೂ ಭಕ್ತಜನ ಆ ತೇಜೋರಾಶಿಯನ್ನು ಕಂಡು ಪರಮಾನಂದದಿಂದ ಮೈಮರೆಯುತ್ತಾರೆ.

ಸ್ವಾಮಿಯು ಒಳಗೆ ಬಿಜಮಾಡಿ ಬಂದು ಕಲ್ಯಾಣ ಮಂಟಪದಲ್ಲಿ ಶೇಷಾಸನದಲ್ಲಿ ಮುಹೂರ್ತ ಮಾಡಿದರು. ನಿವಾಳಿಕೆಯ ಆರತಿಯಾಗಿ ಆಗಬೇಕಾದ ಉಪಚಾರಗಳೆಲ್ಲ ಆದಮೇಲೆ ಅಭಿನಯದ ಆರಂಭವಾಯಿತು. ಮೃದಂಗದವನು ಛಾಪು ಹೊಡೆದು ಮಂದ್ರಧ್ವನಿಯಿಂದ ಮಂಟಪವನ್ನು ತುಂಬಿದನು. ತಂಬೂರಿಯವನು ಶ್ರುತಿಯನ್ನು ಮೀಟಿ ಝೇಂಕಾರ ಮಾಡಿ ಎಲ್ಲರನ್ನೂ ಮೆಚ್ಚಿಸಿದನು. ಗೋಟು ವಾದ್ಯದವನು ಒಂದು ವರಸೆ ಎಳೆದು ಎಲ್ಲರನ್ನೂ ತಲೆದೂಗಿಸಿದನು. ಅಭಿನಯಕಾರ್ತಿಯರು ಹಿಮ್ಮೇಳದವರೊಡನೆ

ಬಂದು ಸ್ವಾಮಿಯ ಎದುರು ನಿಂತರು. ಮಂಗಳಾರತಿಯಾಗಿ ಮೇಳದವರಿಗೆ ಆರತಿಯನ್ನು ಕೊಟ್ಟದ್ದಾಯಿತು. ಚಿನ್ನೆರನ್ನೆಯರು ನಾಟೀ ರಾಗದಲ್ಲಿ ನಾಂದಿಯನ್ನು ಮಾಡಿ ಸಭಾಪತಿಗಳಿಗೆ ಕೈಮುಗಿದು, ಸಭೆಗೆ ಪುಷ್ಪಾಂಜಲಿ ಯನ್ನೆತ್ತಿ ಸಭಾ ಪೂಜೆಯನ್ನು ನೆರವೇರಿಸಿದರು. ಚಿನ್ನೆಯು ರಾಧೆಯ ವೇಷವನ್ನು ಧರಿಸಿದ್ದಾಳೆ. ನೀಲವಸನವನ್ನುಟ್ಟು ನೀಲರತ್ನದ ಒಡವೆಗಳನ್ನು ಧರಿಸಿ, ನೀಲ ಕಬರೀಧಾಮವನ್ನು ಗೊಲ್ಲತಿಯ ಹಾಗೆ ತುರುಬು ಕಟ್ಟಿ, ನೀಲ ಮಣಿಯ ಬೈತಲೆಯ ಬಟ್ಟು ಹಣೆಯ ಮೇಲೆ ಮೆರೆಯುತ್ತಿರಲು, ಎಣ್ಣೆಗೆಂಪಿನ ಜರತಾರಿಯ ಕತ್ತರಿ ಬೆನ್ನಿನ ಕುಪ್ಪಸವನ್ನು ತೊಟ್ಟಿದ್ದಾಳೆ. ಹಸುರು ಬಣ್ಣದ ಪಟ್ಟಿಗಳ ಜರತಾರಿಯ ಷರಾಯಿ ಅಂದವಾಗಿ ಕಡೆದಿಟ್ಟಿರುವಂತಿರುವ ಕಾಲು ಗಳನ್ನು ಮೆರೆಯುತ್ತಿರಲು, ಪಾದದಲ್ಲಿ ಅಂದುಗೆಗಗ್ಗರ ಗೆಜ್ಜೆಪಿಲ್ಲಿಗಳು ಒಂದರೊಡನೊಂದು ಮಾತನಾಡುವಂತೆ ಜಲಿಜಲಿಯೆನ್ನುತ್ತಿರಲು, ಬಿಗಿಯಾಗಿ ಕಟ್ಟಿರುವ ಚಲ್ಲಣವೂ ಕಾಂಚೀದಾಮವೂ ರವಕೆಯೂ ದೇಹದಲ್ಲಿ ಉಬ್ಬಿರುವ ಭಾಗಗಳನ್ನು ಇನ್ನಷ್ಟು ಉಬ್ಬಿಸಿ, ಹಳ್ಳದಲ್ಲಿರುವ ಭಾಗಗಳನ್ನು ಇನ್ನಷ್ಟು ಮುಚ್ಚಿ ಮೆರೆಯುತ್ತಿರಲು ಅಭಿನಯ ಶಾಸ್ತ್ರದ ಅಧಿದೇವಿಯೆಂಬಂತೆ ನಿಂತಿದ್ದಾಳೆ. ರನ್ನೆಯು ಪುರುಷ ವೇಷವನ್ನು ಧರಿಸಿ ಕೃಷ್ಣನಾಗಿ ಕೊಳಲು ಕೈಯಲ್ಲಿ ಹಿಡಿದು, ತಲೆಯ ಮೇಲೆ ನವಿಲುಗರಿಯನ್ನು ಸೆಕ್ಕಿಸಿಕೊಂಡು ವಿಟಶೇಖರನಾದ ತರುಣನಂತೆ ನಿಂತಿದ್ದಾಳೆ. ಆ ಕಾಶಿಯ ಪೀತಾಂಬರ, ಆ ಹೊದೆದಿರುವ ಜರತಾರಿಯ ಉತ್ತರೀಯ, ತೊಟ್ಟಿರುವ ಆ ಕವಚ, ಆ ನಡುವಿಗೆ ಸುತ್ತಿರುವ ಪಟ್ಟಾಕತ್ತಿ, ಇವು ನೋಟಕರ ಕಣ್ಮನಗಳನ್ನು ಸೆಳೆಯುತ್ತಿವೆ. ನೀಲಿಯ ಬೆಳಕಿನಲ್ಲಿ ಕೃಷ್ಣನು ನಿಂತಿದ್ದಾನೆ.

ಆತನ ಮುರಳಿಯು ಒಮ್ಮೆ ನುಡಿಯಿತು. ಒಂದು ತಾನ ನುಡಿದು ಸೇರಿದ್ದವರನ್ನು ತನ್ನ ಕರೆಯಿಂದ ಮೈ ಜುಮ್ಮೆನ್ನಿಸಿತು. ಆ ರಾತ್ರಿಯಲ್ಲಿ, ಜನರೆಲ್ಲ ಗಟ್ಟಿಯಾಗಿ ಉಸಿರು ಬಿಟ್ಟರೆ ಸಭಾ ಮರ್ಯಾದೆಯು ಕೆಟ್ಟೀತು ಕೇಳಬೇಕಾಗಿದ್ದುದು ಕೇಳಿಸದೆ ಹೋದೀತು ಎಂದು ನಿಶ್ಯಬ್ದವಾಗಿರುವ ಸಮಯದಲ್ಲಿ, ಕೊಳಲಿನ ಆ ಕರೆ ವ್ಯರ್ಥವಾಗಲಿಲ್ಲ. ಕೃಷ್ಣನ ಕೊಳಲು ಸುಮ್ಮನಾಗುತ್ತಿದ್ದ ಹಾಗೆಯೇ ಅವನ ಮೇಲೆ ಬಿದ್ದಿದ್ದ ನೀಲಿಯ ಬೆಳಕು ಮಾಯವಾಯಿತು. ನೀಲಿಯ, ತೆಳ್ಳನೆಯ ಪೊರೆಯಂತಿರುವ, ಒಂದು

ಪರದೆಯು ಮೇಲಿನಿಂದ ಇಳಿಯುವ ಮೋಡದಂತೆ ಇಳಿದು ಆ ಕಳ್ಳ ಕೃಷ್ಣನನ್ನು ಮರೆಮಾಡಿತು.

ಬೆಳಕು ರಾಧೆಯ ಕಡೆಗೆ ತಿರುಗಿತು. ಕೊಳಲನ್ನು ಕೇಳಿದ ರಾಧೆಯು ಒಮ್ಮೆ ಪುಳುಕಿತಳಾದಳು. ಏನೋ ಧ್ಯಾನದಲ್ಲಿದ್ದು ಎಚ್ಚೆತ್ತವಳಂತೆ ದೊಡ್ಡದಾಗಿ ಕಣ್ಣು ಬಿಟ್ಟು ನೋಡಿದಳು. ಪ್ರಿಯವಸ್ತುವನ್ನು ಹುಡುಕುವವಳಂತೆ ಕಣ್ಣನ್ನು ಅತ್ತ ಇತ್ತ ತಿರುಗಿಸಿ ಹುಡುಕಿ ನೋಡಿದಳು. ಇಷ್ಟು ಹೊತ್ತು ಒಂದೊಂದು ಸ್ವರವನ್ನು ಮುಟ್ಟುತ್ತಾ ಅಲ್ಲೊಂದು ಇಲ್ಲೊಂದು ಸ್ವರ ಅನುಸ್ವರಗಳನ್ನು ನುಡಿಯುತ್ತಾ ಇದೆ ಇಲ್ಲ ಎಂಬಂತಿದ್ದ ಗೋಟುವಾದ್ಯವು ಮೊಳಗಿತು. ಮೃದಂಗವು ನುಡಿಯಿತು. ಎರಡೂ ಮಸಲತ್ತು ಮಾಡಿವೆಯೆಂಬಂತೆ ಆ ದೊಡ್ಡ ತಂಬೂರಿಯ ದೊಡ್ಡ ಶ್ರುತಿಯನ್ನೂ ಮುಳುಗಿಸಿ ಆ ಸಭಾಂಗಣದಲ್ಲೆಲ್ಲಾ ತಾವೇ ತಾವಾಗಿ ನುಡಿದುವು. ರಾಧೆಯು ಹಾಡಿದಳು:–

ಕಣ್ಮರೆಯಾದನೆ ಕೃಷ್ಣಾ
ಕಣ್ಣಿಗೆ ಕಾಣದೆ ಕಾಡುವನೇ ॥ಪ॥
ಎಲ್ಲಿ ಹುಡುಕುವೆನೋ ?
ಯಾರ ಕೇಳುವೆನೋ ? ––॥ಅ. ಪ॥
ಕೃಷ್ಣನು ಪೂಸಿದ ಮೈಗಂಧದ
ವಾಸನೆಗಾಶಿಸಿ ಓಡೋಡಿ ಬರುವ ॥
ಗಂದಿಗ ಗಾಳಿಯ ಕೇಳಲೇ ॥ ೧ ॥
ಆತನ ಮುದ್ದಿನ ಮುಖವನು ನೋಡಲು
ಅಲ್ಲಿಂ ಕದ್ದೋಡಿ ಬರುವ ತಂಗದಿರನ।
ಕಿರಣ ಕನ್ನೆಯ ಕೇಳಲೇ ॥ ೨ ॥

ವಿಹ್ವಲೆಯಾದ ರಾಧೆಯು ಒದ್ದಾಡುತ್ತಿದ್ದಾಳೆ. ಆಕೆಯ ಮನಸ್ಸಿನ ಚಾಂಚಲ್ಯವನ್ನು ಕಣ್ಣು, ಮೊಕ, ಮೈ, ದನಿ ಎಲ್ಲವೂ ತೋರಿಸಿ, ಆ ಚಾಂಚಲ್ಯವನ್ನು ಎಲ್ಲರ ಹೃದಯದಲ್ಲೂ ಬಿತ್ತಿದೆ. ಎಲ್ಲರೂ ಹೌದು ಕೃಷ್ಣನ ಕೊಳಲು ಕೇಳಿಸಿತು, ಇಲ್ಲಿಯೋ ಎಲ್ಲಿಯೋ ಮರೆಸಿಕೊಂಡು ಆಟವಾಡುತ್ತಿದ್ದಾನೆ ಆ ಕಳ್ಳ ಎನ್ನುವ ಹಾಗೆ ಆಗುತ್ತಿದೆ. ಆಯಿತು.

ರಾಧೆಯು ಒಂದು ಗಳಿಗೆ ಮೌನವಾಗಿದ್ದು, ರೆಪ್ಪೆ ಹೊಡೆಯುವಷ್ಟು ಕಾಲ ಸೊಪ್ಪಗೆ, ಹಾಗೆ ನಿಂತಿದ್ದು, ಮತ್ತೆ ಸಂಭ್ರಮದಿಂದ ಹೊರಟಳು.

ಮತ್ತೆ ವಾದ್ಯಗಳು ಮೊಳಗಿದುವು. ರಾಧೆಯು ಸುತ್ತಮುತ್ತಲಿನವರನ್ನೆಲ್ಲ ಕೇಳಿದಳು: "ನಮ್ಮ ಕೃಷ್ಣನ ಕಂಡಿರೇನಮ್ಮ!" ಎಂದು ಕೇಳುವ ಆಕೆಯ ಪ್ರಶ್ನೆಯನ್ನು ಕೇಳಿದವರೆಲ್ಲ ನಾವು ಕೃಷ್ಣನನ್ನು ಕಂಡಿದ್ದೆವು. ಅಲ್ಲವೆ? ಅವನ ಕೊಳಲು ಕೇಳಿಸಿತಲ್ಲಾ! ಎಂದು ಅತ್ತಿತ್ತ ನೋಡುವಂತಾಯಿತು. ಕಪ್ಪನೆ ಕುರುಳಿನ ಶ್ಯಾಮಸುಂದರನನ್ನು ಕಂಡಿರಾ ಎಂದಾಗ ಎಲ್ಲರೂ ಹೌದು ಹೌದು ಎಲ್ಲಿಯೋ ನೋಡಿದ್ದೆವು. ತಡೆ. ಎಲ್ಲಿ ಎಂದು ತಲೆ ಕೆರೆದುಕೊಳ್ಳುವಂತಾಯಿತು. ಕೊನೆಗೆ ಹೀಗೆಯೇ ಕುರುಳು, ಹಣೆ, ಕಣ್ಣು, ಮೂಗು, ಕೆನ್ನೆ, ಮೊಕಗಳನ್ನು ವರ್ಣಿಸಿ ವರ್ಣಿಸಿ ಕೇಳಿ, ಅತ್ತ ಇತ್ತ ಎತ್ತೆತ್ತಲೂ ಬೇಕಾದ ಹಾಗೆ ಸುತ್ತಿ ರಾಧೆಯು ಬಳಲಿ ಬೆಂಡಾದಳು. ಮೊಕದಲ್ಲಿ ಬೆವರು ಮೋಡದಿಂದ ಇಳಿಯುವ ಮಳೆಯಂತೆ ಹನಿಹನಿಯಾಗಿ ಇಳಿಯಿತು. ಕೈಕಾಲುಗಳು ಬಳಲಿ ಸೊಪ್ಪಾದುವು. ಅಲ್ಲಿಯೇ, ಮುಂದೆ ಹೋಗಲಾರದೆ, ಮಗ್ಗುಲಲ್ಲಿಯೇ ಇದ್ದ ಮರವನ್ನು ಆಶ್ರಯಿಸಿ, ಅವಲಂಬಿಸಿ, ನಿಂತು ಆಯಾಸದಿಂದ ಕಣ್ಣು ಮುಚ್ಚಿದಳು. ಸಭೆಗೆ ಸಭೆಯೇ ಅವಳ ದೇಹಮನಸ್ಸುಗಳ ಆಯಾಸವನ್ನು ಅನುಭವಿಸಿತು.

ಕೃಷ್ಣನು ತಿರಸ್ಕರಿಣಿಯನ್ನು ಕಿತ್ತೆಸೆದು ಬಂದು ರಾಧೆಯನ್ನು ಮೃದುವಾಗಿ ಭುಜದ ಮೇಲೆ ಕೈಯಿಟ್ಟು ಮುಟ್ಟಿದನು. ಆ ಸ್ಪರ್ಶದಿಂದ ಆಕೆಯು ಸಜೀವಳಾದಂತೆ, ವ್ಯಾಪಾರೋನ್ಮುಖಳಾಗಿ, ನಿದಾನವಾಗಿ ಕಣ್ಣು ಬಿಟ್ಟು ತನ್ನ ಹಿಂದೆ ನಿಂತಿರುವ ನಲ್ಲನನ್ನು ನೋಡಿ, ಏನೋ ಬಹು ಕಷ್ಟದಿಂದ ಗುರುತಿಸಿದವಳಂತೆ, ನಿದಾನವಾಗಿ ಗುರುತಿಸಿ, ಗುರತು ಸಿಕ್ಕುತ್ತಲೂ ಥಟ್ಟನೆ ಹಿಂತಿರುಗಿ ಆತನನ್ನು ಆಲಿಂಗಿಸಿದಂತೆ ಮಾಡಿ, ಕೃಷ್ಣನ ಎದೆಯ ಮೇಲೆ ತಲೆಯನ್ನಿಕ್ಕಿಕೊಂಡು, ಆ ಸುಖವನ್ನು ಒಂದು ಗಳಿಗೆ ಅನುಭವಿಸಿ, ತಲೆಯೆತ್ತಿ ನೋಡಿ, ಪರಮಾನಂದದಿಂದ "ಬಂದೆಯಾ ಕೃಷ್ಣ, ಬಂದೆಯಾ? ಹೋದ ಜೀವವ ತಂದೆಯಾ?" ಎಂದು ಮುದ್ದಾಗಿ ಒಂದು ನುಡಿ ಹಾಡಿದಳು. ಆ ವಸಂತ ರಾಗವು ವಸಂತದಂತೆಯೇ ಭೂಮಿಗೆ ಎಲ್ಲವನ್ನೂ ಹೊಸದಾಗಿ ತಂದಂತಾಗುತ್ತಿರಲು, "ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿಹನಲ್ಲೇ!" ಎಂದು ಕಾಂಬೋಧಿಯಲ್ಲಿ ಆರಂಭಿಸಿದಳು. ಸಭೆಯವರು ನಿಜವಾಗಿಯೂ ಶ್ರೀ ಕೃಷ್ಣನು ಎದುರು ಬಂದನೆಂದು ಭ್ರಮಿಸಿದರು. ಸಂಭ್ರಮಿಸಿದರು.

ರಾಧೆಯು ಕೃಷ್ಣನನ್ನು ಕಂಡು ಆನಂದದಿಂದ ಭ್ರಮರಿಯಂತೆ ಆಡಿದಳು. ಆತನ ಸಿರಿಗುರುಳನ್ನೊಮ್ಮೆ ಸವರುವಳು. ಆತನ ಕಿರೀಟವನ್ನು ಸರಿಮಾಡಿ, ಚೆಲ್ಲಿರುವ ಕುರುಳು ತಿದ್ದುವಳು. ಆತನ ಮುಖದ ಮೇಲಿರುವ ಕಿರುಬೆವರನ್ನು ಒರೆಸುವಳು. ಎಷ್ಟೋದೂರದಿಂದ ಬಂದನೆಂದು ಕಾಲು ತೊಳೆದು ಒರೆಸುವಳು. ಕೈಹಿಡಿದು ಕರೆದೊಯ್ದು ಕುಳ್ಳಿರಿಸಲು ಹೋಗುತ್ತಿರುವಾಗ, ಪರಮ ವಿಶ್ವಾಸದಿಂದ ಕೃಷ್ಣಾ ಎಂದು ಮೊಕದಲ್ಲಿ ಮೊಕವಿಡುವಾಗ, ಆತನ ಕಣ್ಣ ಕೆಂಪು ಕಾಣಿಸಿತು. ಅವನ ಕಣ್ಣು ಇವಳ ಕಣ್ಣಿಗೆ ಕೆಂಪು ಸಾಲ ಕೊಟ್ಟಂತಾಗಿ, ಆ ಕೆಂಪು ಪರಡಿ ಮೊಕವನ್ನೆಲ್ಲಾ ವ್ಯಾಪಿಸಲು, ಆತನನ್ನು ಹಾಗೆಯೇ ಬಿಟ್ಟು ಗಂಭೀರಳಾಗಿ ನಿಂತಳು. ಕೋಪದ ಮೂರ್ತಿಯು ತಾನಾಗಿ ಮಾನಭಂಗದಿಂದ ನೊಂದ ಮನವು ದಾವಾಗ್ನಿಯಂತೆ ಸುಡುತ್ತಿರುವುದನ್ನು ಸಹಿಸಲಾರದವಳಂತೆ ತಲೆಯನ್ನು ಕೊಡಹಿಕೊಂಡು, ಆ ಕೃಷ್ಣನ ದರ್ಶನವನ್ನೂ ಸಹಿಸಲಾರದವಳಂತೆ, ತಲೆಯನ್ನು ಅತ್ತ ತಿರುಗಿಸಿ, ಕೊಂಡು, "ದುರುಳ ಮಾಧವಾ! ತೊಲಗು ಯಾದವಾ!" ಎಂದು ಚೀರಿದಳು.

ರಾಧೆಯ ಕಣ್ಣಿನಲ್ಲಿ ನೀರು ಸುರಿಯಿತು. ಗಂಟಲು ಕಟ್ಟಿಕೊಂಡಿತು. ಮೊಕವು ದುಃಖ ದೈನ್ಯಗಳಿಂದ ಹಿಂಡಿಕೊಂಡು ಕಾಸಿನಗಲವಾಯಿತು. ಒಂದು ಕಣ್ಣು ದೊಡ್ಡದಾಗಿಬಿಟ್ಟು ಇನ್ನೊಂದು ಕಣ್ಣು ಕೊಂಕಿ, ಹುಬ್ಬು ಇಳಿದು ಬಂದು ಕಣ್ಣು ಮುಚ್ಚುತ್ತಿರಲು, ತನ್ನ ಹೃದಯದ ದುಃಖವನ್ನು ಕಣ್ಣಿನ ಕವಣೆಯಲ್ಲಿಟ್ಟು ಹೊಡೆಯುವವಳಂತೆ ಕೃಷ್ಣನನ್ನು ನೋಡುತ್ತಾ, ಬಿಕ್ಕಿಬಿಕ್ಕಿ ಬರುವ ಅಳುವನ್ನು ಬಹು ಕಷ್ಟದಿಂದ ತಡೆದುಕೊಳ್ಳುತ್ತ, ಸಣ್ಣ ದನಿಯಲ್ಲಿ "ಆವಳ ತೋಳಿನ ತೆಕ್ಕೆಯೊಳಿರುಳನು ಕಳೆದೆಯೋ ನಡೆಯಲ್ಲಿಗೆ ನಡೆ" ಎಂದು, ತನ್ನ ಹೃದಯಮಂದಿರದಲ್ಲಿ ಬಹುದಿವಸದಿಂದ ಆರಾಧಿಸುತ್ತಿರುವ ಮೂರ್ತಿಯನ್ನು ವಿಸರ್ಜಿಸುವವಳಂತೆ ಕೈಯಿಂದ ನೂಕಿದಳು.

ಕೃಷ್ಣನು ಅಷ್ಟು ಹೊತ್ತು ಅವಳ ಪುನರಾಗಮನವನ್ನು ನಿರೀಕ್ಷಿಸುತ್ತಿದ್ದು ತಾನೇ ಕೈಚಾಚಿ ಪ್ರಾರ್ಥಿಸುತ್ತಾ ಅವಳ ಬಳಿ ಸಾರಿದನು. ಮತ್ತೆಯೂ ರಾಧೆಯು ನೂಕಿದಳು. ಕೃಷ್ಣನು ಭಾರದಿಂದ ಮುಳುಗುವ ದೋಣಿಯು ಪ್ರವಾಹಕ್ಕೆ ಸಿಕ್ಕಿ ಹೋಗಲಾರದೆ ಹೋಗಲಾರದೆ ಮುಂದೆ ಹೋಗುವಂತೆ,

ಎರಡು ಅಡಿಯಿಟ್ಟನು. ರಾಧೆಯು ಹಿಂತಿರುಗಿ ನೋಡಿದಳು. ಅವಳ ಪ್ರೇಮವು ಮತ್ತೆ ಮರುಕಳಿಸಿತು. ಹೊಡೆದ ಚೆಂಡು ನೆಲಕ್ಕೆ ತಾಗಿ ಮತ್ತೆ ಚಿಮ್ಮಿ ಮೇಲಕ್ಕೆ ನೆಗೆಯುವಂತೆ, ಮತ್ತೆ ಮೋಹಪರವಶಳಾಗಿ ಓಡಿಹೋಗಿ ಕೃಷ್ಣನ ಕಾಲು ಕಟ್ಟಿಕೊಂಡು "ಮರಳು ಮಾಧವ, ತಣಿಸು ಜೀವವ ಮನ್ನಿಸೆನ್ನಪರಾಧವ" ಎಂದು ಮೋಹನದಲ್ಲಿ ಹಾಡುತ್ತ ಆತನನ್ನು ತಡೆದಳು. ಸಭೆಯು ರಾಧೆಯ ಮನಸ್ಸಿನ ಕಾತರತೆಯನ್ನೆಲ್ಲ ವಹಿಸಿಕೊಂಡು, ಕೃಷ್ಣನೇ ನೆನ್ನುವನೋ ? ಎಂದು ಆತುರದಿಂದ ಬಗ್ಗಿ ನೋಡಿತು ಕೃಷ್ಣನೂ ರಾಧೆಯ ಅನುನಯವನ್ನು ತಿರಸ್ಕರಿಸದೆ ಅವಳನ್ನು ಹಿಡಿದೆತ್ತಿ ತಕ್ಕೈಸಿ ತಬ್ಬಿಕೊಂಡಾಗ ಸಭೆಯು ಸಂತೋಷದಿಂದ ಚಪ್ಪಾಳೆಯನ್ನಿಕ್ಕಿತು. ಮಂಗಳದೊಡನೆ ಅಭಿನಯವು ಮುಗಿಯಿತು.

೩

ಆ ವೇಳೆಗೇ ಅರ್ಧರಾತ್ರಿಯಾಗಿತ್ತು. ದೇವರ ಮಂಗಳಾರತಿ ಪ್ರಸಾದ ಗಳನ್ನು ತೆಗೆದುಕೊಂಡು ಸಭಿಕರೆಲ್ಲರೂ ಹಿಂತಿರುಗಿದರು. ಸ್ವರ್ಗದ ಬಾಗಿಲಲ್ಲಿ ಭೂರಿದಕ್ಷಿಣೆ. ಚಿನ್ನಾಸಾನಿಯ ತಾಯಿ ಕಮಲಾಸಾನಿಯು ಒಂದು ಗಾಡಿಯ ತುಂಬಾ ಚಿಲ್ಲರೆ ದುಡ್ಡು, ತಾಮ್ರ ಬೆಳ್ಳಿಯ ನಾಣ್ಯಗಳನ್ನು ತಂದಿದ್ದಾಳೆ. ಅದನ್ನೆಲ್ಲ ವಿನಿಯೋಗ ಮಾಡಿಬರುವುದಾಗಿ ಮಕ್ಕಳನ್ನು ಹೋಗಿಬನ್ನಿರೆಂದಳು. ತಂಗಿಯು ಅಕ್ಕನನ್ನು ಒಂದು ಗಾಡಿಯಲ್ಲಿ ಕುಳ್ಳಿರಿಸಿ, ಅವಳಿಗೆ ಒರಗಿಕೊಳ್ಳು ವುದಕ್ಕೆ ದಿಂಬುಗಳನ್ನೆಲ್ಲಾ ಜೋಡಿಸಿ, "ರಾಯರು ಬಂದಿದ್ದಾರೆ. ನಿನಗೆ ಕೋಪವಿಲ್ಲವೆಂದರೆ ನಾನಿನ್ನೊಂದು ಗಾಡಿಯಲ್ಲಿ ಬರುತ್ತೇನೆ" ಎಂದಳು.

ಚಿನ್ನಳಿಗೆ ಆಶ್ಚರ್ಯವಾಯಿತು. ರಾಯರು ಅಪ್ರಾರ್ಥಿತವಾಗಿ ಗಾಡಿಯ ಬಳಿ ಬರುವುದೂ ಉಂಟೆ ಎನ್ನಿಸಿ "ಎಲ್ಲಿ ?" ಎಂದಳು. ರಾಯರೇ ಮುಂದೆ ಬಂದು "ಇದೋ ಇಲ್ಲಿ. ಆಗಬಹುದು ಎಂದರೆ ನಾನೂ ಗಾಡಿಯಲ್ಲಿ ಬರುತ್ತೇನೆ. ನಮ್ಮ ಗಾಡಿ ರನ್ನಳನ್ನು ಕರೆದುತರುತ್ತದೆ. ಏನಪ್ಪಣೆ ?" ಎಂದರು. ಅವಳು ಮೃದುವಾದ ನಗೆ ನಕ್ಕು, ಅದಕ್ಕಿಂತ ಮೃದುವಾದ

ನೋಟದಿಂದ, ಮೂಕವಾಗಿ ದಯಮಾಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತ, ಆತನಿಗೆ ಎಡೆಗೊಟ್ಟು ಮಗ್ಗುಲಿಗೆ ಸರಿದಳು. ರಾಯನೂ ಗಾಡಿ ಹತ್ತಿದನು.

ಜೋಡು ಕುದುರೆಯ ಬಂಡಿಯು ಒಳಗಿದ್ದವರಿಗೆ ಆಯಾಸವಾಗದಷ್ಟು, ಪ್ರಿಯವಾಗುವಷ್ಟು, ವೇಗದಿಂದ ಓಡಿ ಮನೆಗೆ ಬಂತು. ರನ್ನಳೂ ಜೊತೆಯಲ್ಲಿಯೇ ಬಂದಳು. ಆಳುಗಳು ಬಂದು ಅಕ್ಕತಂಗಿಯರನ್ನು ಗಾಡಿಗಳಿಂದ ಇಳಿಸಿಕೊಂಡರು. ಚಿನ್ನಳು ರಾಯನನ್ನು ಕರೆದುಕೊಂಡು ಮಹಡಿಯ ಮೆಟ್ಟಿಲು ಹತ್ತಿದಳು. ದಾಸಿಯು ಒಡೆತಿಯ ಚಿತ್ತವನ್ನು ಅರಿತು, ದೀಪವನ್ನು ಹಿಡಿದುಕೊಂಡು ಅವರಿಬ್ಬರನ್ನೂ ಮದನಮಂದಿರಕ್ಕೆ ಕರೆದುತಂದಳು.

ಚಿನ್ನಳಿಗೆ ನಿಜವಾಗಿಯೂ ಆಯಾಸವಾಗಿತ್ತು. ಹೋದವಳೇ ನೇಪಥ್ಯಗಳನ್ನು ತೆಗೆದಳು. ಅಂಗಮರ್ದನಾದಿ ಉಪಚಾರಗಳನ್ನು ಸ್ವೀಕರಿಸುತ್ತಾ ಸುಖಾಸನದಲ್ಲಿ ಹಾಗೆಯೇ ಒರಗಿಕೊಂಡಳು. ರಾಯನು ಅವಳ ಆ ಭಂಗಿಯನ್ನು ಕಂಡು, ಆನಂದಪರವಶನಾಗಿ ಅವಳ ಮುಖವನ್ನು ಕಂಡು ಕಣ್ಣುಸನ್ನೆಮಾಡಿ ನಕ್ಕನು. ಚಿನ್ನಳು ದಾಸಿಯನ್ನು "ಮೈಯೊತ್ತಿದುದು ಸಾಕು. ಬಿಸಿನೀರು ನೋಡು. ಮಜ್ಜನಕ್ಕೆ ಹೋಗೋಣ" ಎಂದಳು. ದಾಸಿಯು ಎದ್ದುಹೋದಳು.

ರಾಯನು ಮಗ್ಗುಲಲ್ಲಿ ಬಂದು ಕುಳಿತು, ಮೃದುವಾಗಿ ಅವಳ ಮೈ ಹಿಸುಕುತ್ತಾ, "ಈ ದಿನ ಏನು ನಿನಗೆ ಆವೇಶ ಬಂದಿತ್ತು?" ಎಂದನು. ಚಿನ್ನಳು "ಹೌದು ಈ ದಿನ ನಾನು ಬೇಕಾದ ಹಾಗೆ ಮಧುಪಾನ ಮಾಡಿದ್ದೆ" ಎಂದಳು.

"ಸುಮ್ಮನಿರು. ಪಾನ ಮಾಡಿದ್ದೆಯೋ? ನಾಲಗೆ ಗಂಟೆಯ ಹಾಗೆ ನುಡಿಯುತ್ತಿತ್ತು?"

"ನಾನು ಅಲ್ಲಿಗೇ ಮಧು ಕುಂಭವನ್ನೇ ತಂದಿದ್ದೆ. ನನ್ನ ಎದುರಿಗೇ ಆ ಕಂಭದ ನೆರಳಲ್ಲಿ ಇಟ್ಟಿದ್ದೆ. ಬೇಕೆಂದಾಗ ತಿರುಗಿ ನೋಡಿದರೆ ಸಾಕು, ಕಣ್ಣುಗಳಿಂದಲೇ ಬೇಕಾದಷ್ಟು ಹೀರಿಬಿಡುತ್ತಿದ್ದೆ."

"ಎಲೆಲಾ! ನೋಡಿದೆಯಾ? ಸೋತೆನಲ್ಲ. ಆದರೆ, ಚಿನ್ನ, ಇವೊತ್ತು ದೇವೇಂದ್ರನೇ ಸಭೆಗೆ ಬಂದಿದ್ದರೆ ಅವನು ಕೂಡ ನಿನ್ನ ಅಭಿನಯಕ್ಕೆ

ಮೆಚ್ಚಿಬಿಡುತ್ತಿದ್ದ. ಭರತ ಮಹರ್ಷಿಗಳು ನೋಡಿದ್ದರೆ, ಊರ್ವಶಿಗೆ ಪಾಠ ಹೇಳುವುದಕ್ಕಿಂತ ನಿನಗೇ ಹೇಳಿದ್ದರೆ ಚೆನ್ನಾಗಿತ್ತು ಎನ್ನುತ್ತಿದ್ದರು."

"ನಾನು ಅಭಿನಯ ಹಿಡಿದುದು ಉಪೇಂದ್ರನ ಸನ್ನಿಧಿಯಲ್ಲಿ. ನನ್ನ ಮಾಧವನ ತೃಪ್ತಿಗಾಗಿ. ನನ್ನ ಪ್ರಭು ಅಲ್ಲಿ ಇರುವಾಗ ನನ್ನ ನೈಪುಣ್ಯವನ್ನೆಲ್ಲ ತೋರಿಸದಿದ್ದರೆ ಆದೀತೆ? ಆಯಿತು. ನನ್ನ ಅಭಿನಯ ಎಲ್ಲಿ ನಡೆದರೂ ಹೀಗೇ ಆಗಬೇಕು ಎಂದು ನಿನಗೆ ಆಸೆಯಿದೆಯೇನು? ಹೇಳು."

"ಹೌದು."

"ಹಾಗಿದ್ದರೆ, ನೀನು ಎದುರಿಗೆ ಬಂದು ಕುಳಿತುಬಿಡು. ನೋಡು ನನಗೆ ರೆಕ್ಕೆ ಹುಟ್ಟುತ್ತದೆಯೋ ಇಲ್ಲವೋ?"

"ಆಯಿತು. ನಾನು ತಲೆ ಮರೆಸಿಕೊಂಡು ಎರಡನೆಯ ಕಂಭದ ನೆರಳಿನಲ್ಲಿ ಸೊಟ್ಟ ರುಮಾಲು ಸುತ್ತಿಕೊಂಡು ಕುಳಿತಿದ್ದೆನಲ್ಲ. ನಿನಗೆ ಗುರುತು ಹೇಗೆ ಸಿಕ್ಕಿತು?"

"ನೀನೂ ಪಂಚದಶಿ ಓದಿದ್ದೀಯಲ್ಲ. ಅದರಲ್ಲಿ ವಿದ್ಯಾರಣ್ಯ ಸ್ವಾಮಿಗಳು ಹತ್ತು ಜನ ಅಧ್ಯಯನ ಮಾಡುತ್ತಿದ್ದರೆ, ಆ ಕಂಠಧ್ವನಿಗಳಲ್ಲಿ ಮಗನ ಧ್ವನಿ ಯಾವುದು ಎಂದು ತಂದೆಗೆ ತಿಳಿಯುತ್ತದೆ ಎಂದು ಬರೆದಿದ್ದಾರೆ. ಅವರು ಸನ್ಯಾಸಿಗಳು ಅದರಿಂದ ಹಾಗೆಂದರು. ಕಾಮಿಯು ಅದೇ ವಿಷಯಕ್ಕೆ ಉದಾಹರಣ ಕೊಡುತ್ತಿದ್ದರೆ, ಕಾಮಿನಿಯ ಹೃದಯ ತನ್ನ ನಾಯಕನು ಸಾವಿರ ಜನರ ನಡುವೆ ಇದ್ದರೂ ಅನಿರ್ವಚನೀಯವಾದ ರೀತಿಯಲ್ಲಿ ತಿಳಿದುಕೊಳ್ಳುತ್ತದೆ ಎಂದು ಹೇಳುತ್ತಿದ್ದ. ನೀನು ಸಭೆಯಲ್ಲಿ ಇದ್ದೆ ಎನ್ನುವುದು, ನೀನು ಅಲ್ಲಿಗೆ ಬರುವುದು ಎನ್ನುವುದು ಇವೊತ್ತು ನನಗೆ ತಿಳಿದಿತ್ತು. ಮನೆಯಿಂದ ಹೊರಡುವಾಗಲೇ ಎಡಗಣ್ಣು ಅದುರಿತು. ಸುವಾಸಿನಿಯರು ಎದುರಿಗೆ ಬಂದರು. ಸಭೆಯಲ್ಲಿ ಬಂದು ಕುಳಿತಿದ್ದ ಹಾಗೆಯೇ ಪ್ರಣಿಧಾನ ಮಾಡಿ ನೋಡಿದೆ. ನೀನಿರುವೆಡೆ ಕಂಡುಹೋಯಿತು. ಆಮೇಲೆ ಆಳು ಬಂದು ನಿನ್ನ ಗಾಡಿ ಬಂದಿರುವುದನ್ನು ಹೇಳಿದ. ಅಭಿನಯಕ್ಕೆ ಹದಿನಾರು ಬಣ್ಣ ಬಂತು."

"ಆಯಿತು. ಆಗಲಿ. ನಿನ್ನ ಅಭಿನಯ ಗೆಲ್ಲುವುದೂ ಸೋಲುವುದೂ ನನ್ನ ಕೈಯಲ್ಲಿದೆ ಎಂದುಕೊಳ್ಳೋಣ. ನಿನ್ನ ಆಯಾಸ ಪರಿಹಾರವಾಯಿತೋ?"

"ಏನು ಆಗಲೇ ಮನೆ ಕಡೆ ಯೋಚನೆಯೋ?"

"ಚಿನ್ನಾ, ನನಗೆ ಸಾಧ್ಯವಾಗಿದ್ದರೆ, ನಿನ್ನ ತಾಳಿಯ ಗೂಡಿನೊಳಗೆ ಇದ್ದು ಯಾವಾಗಲೂ ನಿನ್ನ ಎದೆಯ ಮೇಲೆ ಆಡಿಕೊಂಡು ಇದ್ದುಬಿಡುತ್ತಿದ್ದೆ. ಏನು ಮಾಡಲಿ? ಮದುವೆಯಾದವಳು. ಬಿಡುವುದು ಹೇಗೆ? ಅವಳೂ ನಿನಗಿಂತ ಹೆಚ್ಚಾಗಿ ಅಳುತ್ತಾಳೆ. ಅದೇ ನನಗೆ ಬಂದಿರುವ ಕಷ್ಟ! ದೇವರು ನನ್ನನ್ನು ವೀಣೆತಂತಿ ಮಾಡಿ ಈ ಕೊನೆ ಆ ಕೊನೆ ಎರಡೂ ಕಟ್ಟಿಬಿಟ್ಟ. ಏನು ಮಾಡಲಿ ಹೇಳು."

"ಗೋಪು. ದೇವರು ಅಪರಾಧ ಮಾಡಿರುವುದು ನಿನಗಲ್ಲ, ನನಗೆ. ನನ್ನ ನಿನಗಾಗಿ ಸೃಷ್ಟಿಮಾಡಿ, ನಿನ್ನನ್ನು ನಿನ್ನ ಹೆಂಡತಿಗಾಗಿ ಮಾಡಿ, ನನಗೆ ಅನ್ಯಾಯ ಮಾಡಿಬಿಟ್ಟ." ಅವಳಿಗೆ ಮುಂದಕ್ಕೆ ಮಾತನಾಡಲಾಗಲಿಲ್ಲ. ಕಣ್ಣಿನಲ್ಲಿ ನೀರು ಬಂದುಬಿಟ್ಟಿತು. ಮೊಕ ಮುಚ್ಚಿಕೊಂಡು ಅತ್ತಳು.

"ಅಯ್ಯೋ! ಪುಣ್ಯಾತ್ಮಗಿತ್ತಿ. ನೀನು ಅಳಬೇಡ. ಇಕೋ, ಇವೊತ್ತಿನ ಹಾಗೆ ನಿನ್ನ ಮೈ, ಕೈಕಾಲು ಒತ್ತಿಕೊಂಡು ಬಿದ್ದಿರುತ್ತೇನೆ. ನಿನ್ನ ಕಣ್ಣು ಮಾತ್ರ ಒದ್ದೆ ಮಾಡಬೇಡ."

"ಹೂಂ, ಕೈಕಾಲು ಒತ್ತಿಕೊಂಡು ಬಿದ್ದಿರುತ್ತೀಯೆ! ಮಂಚದ ಮೇಲೆ ಕುಳಿತುಕೊಂಡು ಕೈಕಾಲು ಒತ್ತಿಸಿಕೊಳ್ಳುತ್ತಿರು ಎಂದರೆ ಕೈಗೆ ಸಿಕ್ಕುವುದಿಲ್ಲ. ಇವೊತ್ತು ಅದೇನು ನಿನ್ನ ಗ್ರಹಚಾರವೋ? ನನ್ನ ಅದೃಷ್ಟವೋ? ಕೈಗೆ ಸಿಕ್ಕಿದ್ದೀಯೆ. ಅಷ್ಟೇ ಅಲ್ಲ. ಇಲ್ಲಿ ನೋಡು." ಎಂದು ಸಣ್ಣ ಬೀಗದ ಕೈಯ್ಯನ್ನು ತೋರಿಸಿದಳು.

"ನೀನು ಮನೆಗೆ ಬಂದ ಮೊದಲು ನಾನು ಜೊತೆಯಲ್ಲಿಯೇ ಇದ್ದೇನಲ್ಲ. ಅದು ಯಾವ ಮಾಯದಲ್ಲಿ ಬಾಗಿಲು ಬೀಗ ಹಾಕಿಕೊಂಡು ಬಂದೆ."

"ಅದು ನಮ್ಮ ಗುಟ್ಟು. ನಾವು ಮೋಸ ಮಾಡಬೇಕು ಎಂದರೆ ಕಣ್ಕಟ್ಟು ಮಾಡಬಲ್ಲೆವು. ರಾಯರೇ! ಆದರೇನು ಮಾಡುವುದು ಆ ಹಾಳು ಮನಸ್ಸು ನಮಗೆ ಮೋಸಮಾಡಿ 'ಅಸುಲಭವಸ್ತು ಪ್ರಾರ್ಥನಾದುರ್ನಿವಾರಂ' ಆಗಿ ಹೋಗುತ್ತೆ."

"ಆಗ 'ಅಸ್ಯಾಸ್ಸಖೇ ಚರಣಯೋಃ' ಆಗಿಹೋಗುವುದು ನಮಗೂ ಮೋಸವಲ್ಲವೇನೋ?"

“ ಆಯಿತು. ಸ್ವಾಮಿ ಏನು ಹೊರಟು ಬಿಡುವುದೋ? ಇಲ್ಲೇ ಇರುವುದೋ ? ”

“ ಕಣ್ಣು ಚುಚ್ಚಿ ನೀರು ಬಂತೇ ಎನ್ನುವ ಹಾಗೆ ಇದು. ಬಾಗಿಲಿಗೆ ಬೀಗ ಹಾಕಿಸಿ ಬಂದಿಮಾಡಿ ಹೊರಟುಹೋಗುತ್ತೀಯಾ ಎಂದು ಕೇಳುವ ಚಾತುರ್ಯ ನೋಡಿದೆಯಾ ? ಹಾಗೂ ಹೊರಡೋಣ ಎಂದರೂ ಆ ಕಣ್ಣೀರಲ್ಲಿ ಮನಸ್ಸೂ ಕರಗಿಹೋಯಿತು. ಈಗ ನಾನು ಬೇರೆಯಾಗಿ ಇದ್ದೇನೆಯೋ ಅಥವಾ ಚಿನ್ನದಲ್ಲಿ ಬೆರೆದು ಹೋಗಿದ್ದೇನೋ ಎಂದು ನನಗೆ ಅನುಮಾನವಾಗಿ ಹೋಗಿದೆ ”

“ ಗೋಪು, ತಪ್ತೇನ ತಪ್ತಮಯಸಾ ಘಟನಾಯ ಯೋಗ್ಯಂ. ಅಲ್ಲವೇ ?”

“ ನೀನು ಪಾಪ, ಯದ್ವಾತದ್ವಾ ಆಯಾಸ ಪಟ್ಟಿದ್ದೀಯೆ ! ”

“ ರಾಧೆ ಕೃಷ್ಣನನ್ನು ತಡೆದಾಗ ನೀನು ಕಣ್ಣಲ್ಲಿ ಒಂದು ತೊಟ್ಟು ನೀರು ಬರೆಸಿಕೊಂಡು ತಲೆದೂಗಿದೆಯಲ್ಲ ಆಗಲೇ ನನ್ನ ಆಯಾಸ ಪರಿಹಾರವಾಯಿತು. ಮಂಗಳವನ್ನು ಹಾಡುತ್ತಿದ್ದಾಗಲೇ ನಿನ್ನ ತಲೆ ಹಾಗೆಂದು ನಾನೂ ಬರುವೆನೆಂದು ಸೂಚಿಸಿದಾಗಲೇ ಆಯಾಸ ಪರಿಹಾರವಾಯಿತು. ನೀನು ಗಾಡಿಯಲ್ಲಿ ಬಂದು ಕುಳಿತಾಗಲೇ, ನಿನ್ನನ್ನು ಒರಗಿಕೊಂಡಾಗಲೇ ಆಯಾಸ ಪರಿಹಾರವಾಯಿತು. ಆಮೇಲೆ ನೀನು ಮಾಡಿರುವ ಉಪಚಾರಗಳು ಒಂದೊಂದೂ ಒಂದೊಂದು ರಸಾಯನ ಪಾನವಾಯಿತು. ಸಾಕೇ ? ಇನ್ನೂ ಮಾನ ಬಿಟ್ಟು ಹೇಳಬೇಕೋ ? ”

“ ಆಯಿತು. ದೇವಿಯರ ಅಪ್ಪಣೆ ಹೇಗಾದರೆ ಹಾಗೆ ಈ ದಾಸನು ಸಿದ್ಧವಾಗಿದ್ದಾನೆ. ”

“ ಈ ದೇವರು ಈ ದಾಸಿಯು ಒಪ್ಪಿಸುವ ಸರ್ವೋಪಚಾರ ಪೂಜೆಯನ್ನು ಈ ರಾತ್ರಿ ಸ್ವೀಕರಿಸಿ, ನಾಳೆ ಬೆಳಗ್ಗೆ ಸ್ನಾನಾದಿಗಳಿಂದ ಸಮರ್ಚಿತರಾಗಿ ಊಟದ ಹೊತ್ತಿಗೆ ಮನೆಗೆ ಹೋಗುವುದು. ”

# ಎರಡನೆಯ ಅಧ್ಯಾಯ

ಯಜಮಾನ್ ವೀರಪ್ಪಸೆಟ್ಟರು ಇಲ್ಲದಿದ್ದರೆ ವಿಜಯನಗರದಲ್ಲಿ ಯಾವದೊಂದು ಮಹಾಜನಕಾರ್ಯವೂ ನಡೆಯುವಂತಿಲ್ಲ. ವಂಶಪಾರಂಪರ್ಯವಾಗಿ ನಡೆದು ಬಂದ ದಾನ ಧರ್ಮಗಳ ಪ್ರಭಾವ ಇರಬೇಕು ಅವರ ಮನೆಯಲ್ಲಿ ಮಹಾಲಕ್ಷ್ಮಿ ನೆಲಸಿದ್ದಳು. ಇತ್ತ ಅಂಗಡಿಯಲ್ಲಿ ನೋಡಿದರೆ, ವಜ್ರ, ವೈಢೂರ್ಯ, ಮುತ್ತು, ಹವಳ, ಕೆಂಪು, ಏನು ಬೇಕು ಅದೆಲ್ಲ ಸೇರಿನಲ್ಲಿ ಇರಲಿ, ಕೊಳಗದಲ್ಲಿ ಅಳೆಯುವಷ್ಟು ರಾಶಿ, ರಾಶಿ. ಚಿಲ್ಲರೆ ವರ್ತಕರು ಒಂದು ಸಾವಿರ ಜನವಾದರೂ ಅವರ ಆಶ್ರಯದಿಂದ ಬದುಕಿದ್ದರು. ವರ್ಷಕ್ಕೆ ಒಂದು ಸಲ ಗೋಲ್ಕಂಡದಲ್ಲಿ ವಜ್ರಗಳನ್ನು ಮಾರುವರು. ಯಜಮಾನ್ ಸೆಟ್ಟರು ಬಂದಿದ್ದಾರೆ ಎಂದರೆ ಮುಗಿಯಿತು. ಇನ್ನೊಬ್ಬರು ಬಾಯಿಹಾಕುತ್ತಿರಲಿಲ್ಲ. ನವಾಬರೇನೆ ಯಜಮಾನ್ ಸೆಟ್ಟರನ್ನು ಕರೆಸಿಕೊಂಡು "ಒಳ್ಳೆಯವು ಆರಿಸಿ ನಮಗೆ ಅಷ್ಟು ಕೊಡಿ. ನೀವಷ್ಟು ಇಟ್ಟುಕೊಳ್ಳಿ, ಉಳಿದವುಗಳನ್ನು ನಿಮಗೆ ತೋರಿದಂತೆ ಹಂಚಿಬಿಡಿ" ಎನ್ನುವರು. ಅಂದಿನಿಂದ ಹಾಗೆಯೇ ನಡೆದಿತ್ತು.

ಇತ್ತ ನಾಗಪಟ್ಟಣದ ಮುತ್ತಿನ ವ್ಯಾಪಾರವೂ ಹಾಗೆಯೇ! ಚಕ್ರವರ್ತಿಗಳ ಅಪ್ಪಣೆಯಾಗಿತ್ತು. ಅದರಂತೆ ಅಧಿಕಾರಿಗಳು ಸಮುದ್ರದಿಂದ ತೆಗೆದ ಸರಕೆಲ್ಲವನ್ನೂ ಅರಮನೆಗೆ ಕಳುಹಿಸುವರು. ಭಂಡಾರಿಯು ಯಜಮಾನರನ್ನು ಕರೆಸಿಕೊಂಡು ಶ್ರೇಷ್ಠವಾದವುಗಳನ್ನು ಅರಮನೆಗೆ ಇಟ್ಟುಕೊಳ್ಳುವನು. ಉಳಿದುದನ್ನೆಲ್ಲ ಅವರಿಗೇ ವಹಿಸಿಬಿಡುವನು. ಅವರು ಮಿಕ್ಕವರಿಗೆ ಹಂಚಿದರುಂಟು. ಇಲ್ಲದಿದ್ದರೆ ಇಲ್ಲ. ಗೋವಾದ ಹವಳದ ವ್ಯಾಪಾರವೂ ಹೀಗೇ! ಧಾರಾಪುರದ ಪಚ್ಚೆಗಳ ವ್ಯಾಪಾರವೂ ಹೀಗೇ! ಅಷ್ಟೇನು, ಎಲ್ಲಾ ವ್ಯಾಪಾರವೂ, ವಿಜಯನಗರದ ರತ್ನಪಡಿ ವ್ಯಾಪಾರವೆಲ್ಲವೂ ಅಷ್ಟೇ! ಹೊರಗಿನಿಂದ ಬಂದ ವರ್ತಕರು ಕೊಳ್ಳುವುದಕ್ಕೆ ಬರಲಿ, ಮಾರುವುದಕ್ಕೆ ಬರಲಿ, ನೇರವಾಗಿ ಯಜಮಾನರ ಬಳಿ ಹೋದರೆ ಸರಿ, ಇಲ್ಲದಿದ್ದರೆ, ಅದು ಅವರ ಗ್ರಹಚಾರ.

ಹೀಗೆ ಅಂಗಡಿ, ವ್ಯಾಪಾರಗಳಲ್ಲಿ ಅವರಿಗೆ ಒಲಿದಿದ್ದ ಮಹಾಲಕ್ಷ್ಮಿಯೇ ಮನೆಯಲ್ಲಿ ಸ್ತ್ರೀ ರೂಪದಿಂದ ಅವರನ್ನು ಸೇವಿಸುತ್ತಿದ್ದಳು. ಸೆಟ್ಟರ ಕುಟುಂಬ

ಗೌರಮ್ಮನು ರೂಪಗುಣ ಎಲ್ಲದರಲ್ಲಿಯೂ ಅಸಮಾನಳು. ಮನೆಗೆ ಬಂದವರನ್ನು ಆದರಿಸುವುದರಲ್ಲಂತೂ ಆಕೆಯ ಸರಿದೊರೆ ಇನ್ನಿಲ್ಲ. ಬಂಧುಬಳಗದಲ್ಲಂತು ಆಕೆಗೆ ಅದೆಷ್ಟೋ ಆದರ. ತನ್ನ ಬಳಗದವರಿರಲಿ: ತನ್ನ ಗಂಡನ ಕಡೆಯವರ ಮೇಲೂ ಅಷ್ಟೇ ಆದರ. ಎಲ್ಲರಿಗೂ ಆಶ್ಚರ್ಯವೆಂದರೆ, ಆಕೆ ಅದು ಹೇಗೆ ಆ ಮನೆಯ ಕೆಲಸಗಳನ್ನೂ ನೋಡಿಕೊಂಡು, ಒಂದು ಧ್ಯಾನದ ಹೊತ್ತು ಶಿವಪೂಜೆಯನ್ನೂ ಮಾಡಿ, ಬಂದು ಹೋದವರನ್ನೆಲ್ಲ ವಿಚಾರಿಸಿಕೊಳ್ಳುತ್ತಿದ್ದಳು ಎಂದು. ಸೆಟ್ಟರ ಮನೆಗೆ ಹೋಗಿದ್ದು ಆಕೆಯನ್ನು ಕಂಡವರೆಲ್ಲ "ಸೆಟ್ಟರ ಭಾಗ್ಯದೇವತೆ ಆಕೆ. ಸಂದೇಹವಿಲ್ಲ." ಎನ್ನುವರು. ಆಕೆಯನ್ನು ಕಂಡವರು ಯಾರೇ ಆಗಲಿ ಆಕೆಗೆ ಕೈಮುಗಿಯುವರು. ಅದು ಆಕೆಯ ಹಣೆಯ ಬರೆಹ. ಆಕೆಯ ಗಂಡನಿಗಂತೂ ಆಕೆಯ ವಿಚಾರದಲ್ಲಿ ಬಹು ಗೌರವ. ಆದರೆ ಒಂದು ವಿಚಾರದಲ್ಲಿ ಮಾತ್ರ ಆತನಿಗೊಂದು ಪರಮ ಸಂಕಟ. ಆದರದನ್ನು ಯಾರ ಕೈಯಲ್ಲೂ ಹೇಳಿಕೊಳ್ಳುವಂತಿಲ್ಲ. ಹಾಗೆಂದು ಅದನ್ನು ಮನಸ್ಸಿನಿಂದ ದೂರಮಾಡಿಯೂ ಇರಲಿಲ್ಲ. ಅದೊಂದು ಕುಟ್ಟೆಯ ಹುಳುವಿನ ಹಾಗೆ ಒಳಗೇ ಕೊರೆಯುತ್ತಿತ್ತು.

ಆತನಿಗೆ ಮದುವೆಯಾದಾಗ ಒಬ್ಬ ಜೋಯಿಸ ಬಂದಿದ್ದ. ಎಲ್ಲರೂ ಆತನನ್ನು ಬಿಟ್ಟರೆ ಇನ್ನಿಲ್ಲ ಎನ್ನುವವರೇ ! ಆತನಿಗೆ ಸೆಟ್ಟರು ತಮ್ಮ ಜಾತಕ ತೋರಿಸಬೇಕೆಂದು ಹೋದರು. ಹಾಗೆಯೇ ಇದೊಂದು ಜಾತಕ ನೋಡಿ ಎಂದು ತಮ್ಮ ಹೆಂಡತಿಯ ಜಾತಕವನ್ನೂ ಎದುರಿಗಿಟ್ಟರು. ಆತನು ಅದನ್ನು ನೋಡಿ, "ಎಲ್ಲಾ ಚೆನ್ನದ ಹಾಗೆ ಇದೆ. ಆದರೇನು ಸಪ್ತಮಶುದ್ಧಿಯಿಲ್ಲ. ಇಲ್ಲಿ ಕುಜ ಕೇತುಗಳಿರುವುದರಿಂದ ಇವಳು ಹಾದರಗಿತ್ತಿಯಾಗಬೇಕು. ಹಾಗಾದರೆ ಗಂಡ ಉಳಿಯುತ್ತಾನೆ. ಆಗ ಗಂಡನಿಗೆ ಬೇಕಾದ ಐಶ್ವರ್ಯ. ಹಾಗಿಲ್ಲದೆ ಪತಿವ್ರತೆಯಾದರೆ ಅವನಿಗೆ ತಪ್ಪದೆ ಮೃತ್ಯು" ಎಂದು ಹೇಳಿಬಿಟ್ಟ. ಆಮೇಲೆ ತಡೆಯಲಾರದೆ ಇದು ತಮ್ಮ ಹೆಂಡತಿಯದು ಎಂದು ಸಾಹುಕಾರ್ರು ಹೇಳಿಬಿಟ್ಟರು. ಆಮೇಲೆ ಏನೇನೋ ಲೆಕ್ಕ ಮಾಡಿ, "ಆ ವ್ಯಭಿಚಾರಯೋಗ ತಪ್ಪಿಹೋಗುತ್ತೆ. ದಿಗಿಲಿಲ್ಲ. ಒಂದು ಶಾಂತಿ ಮಾಡಿಸಿ. ಜ್ಯೋತಿಶ್ಶಾಸ್ತ್ರ ಇರುವುದೇ ಅದಕ್ಕೆ. ಜಾತಕದಲ್ಲಿರುವ ದೋಷಗಳನ್ನೆಲ್ಲ ತೋರಿಸಿ ಅವು

ಶಾಂತವಾಗುವುದು ಹೇಗೆ ಎಂಬುದನ್ನು ಹೇಳುವುದಕ್ಕೆ" ಎಂದು ಏನೇನೋ ಹೇಳಿ, ಒಂದು ಸಾವಿರ ರೂಪಾಯಿ ಕಕ್ಕಿಸಿದ್ದ.

ಸಾಲದ್ದಕ್ಕೆ ಗೌರಮ್ಮ ಪಳ್ಳಿಯ ಸಾಹುಕಾರರ ಮನೆಯ ಹೆಣ್ಣು. ಆ ಊರಿನ ಪಟೇಲರ ಮಗ ಸಾಹುಕಾರರ ಮನೆಯಲ್ಲಿ ಬಹಳ ಸಲಿಗೆ. ಅವನ ನಡತೆ ಅಷ್ಟು ನೇರವಾಗಿರಲಿಲ್ಲ ಎಂದು ಎಲ್ಲರ ಬಾಯ ಮಾತು ಸೆಟ್ಟರ ಕಿವಿಗೂ ಬಿದ್ದಿತ್ತು. ಅಂತೂ ಜೋಯಿಸನ ಶಾಂತಿಯ ಬಲವೋ, ಅಥವಾ ಇನ್ನೇನೋ ಅಂತೂ ಸೆಟ್ಟರೂ ಬದುಕಿದ್ದರು. ಐಶ್ವರ್ಯವಂತರೂ ಆಗಿದ್ದರು. ಆದ್ದರಿಂದಲೇ ಅವರ ಮನಸ್ಸಿನಲ್ಲಿ ಕರೆಕರೆ.

ಈಚೆಗೆ ಅರಮನೆಯಲ್ಲಿ ಒಟ್ಟಿಗೆ ಐದು ನಾಟಕ ಆದಂದಿನಿಂದ ಅವರ ಕರೆಕರೆಗೆ ಬಣ್ಣ ಹೆಚ್ಚಿ ಅವರ ಮನಸ್ಸು ಕೆಡುವಷ್ಟು ಮಟ್ಟಿಗೂ ಆಗಿತ್ತು. ಸೆಟ್ಟರು ಕುಟುಂಬ ಸಮೇತರಾಗಿ ನಾಟಕಕ್ಕೆ ಬರಬೇಕೆಂದು ಅರಮನೆಯಿಂದ ಕರೆಯೋಲೆ ಬಂದಿತ್ತು. ಇಬ್ಬರೂ ಹೋಗಿದ್ದರು. ದಾರಿಯಲ್ಲಿ ಬರುವಾಗ ಗೌರಮ್ಮ ಸಹಜವಾಗಿ ಆ ನಾಟಕಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸಿದ್ದ ಗೋಪಾಲರಾಯನ ವಿಚಾರವಾಗಿ ಅಭಿಮಾನವಾಗಿ ಮಾತನಾಡಿದ್ದುದು ಸೆಟ್ಟರಿಗೆ ಅಸಹ್ಯವಾಗಿತ್ತು. ಆದರೆ, ಯಾರ ಕೈಯಲ್ಲೂ ಹೇಳುವಂತಿಲ್ಲ. ಅಂತೂ ಅದುವರೆಗೆ ಅಸಮಾಧಾನ ಯಾವ ಗುರಿಯನ್ನೂ ಕಾಣದೆ ಇದ್ದುದು, ಆಗ ಒಂದು ಗುರಿಯನ್ನು ಕಂಡಂತಾಯಿತು. ಹೌದು ಎನ್ನುವುದಕ್ಕೆ ಯಾವ ಕಾರಣವೂ ಇಲ್ಲದಿದ್ದರೂ ಗೋಪಾಲರಾಯ ನಾಟಕದವನು, ಅವನನ್ನು ರಂಗದಲ್ಲಿ ಕಂಡ ಹೆಂಗುಸು ಅಭಿಮಾನಪಡುವಳು ಎನ್ನುವುದಷ್ಟೇ ಸೆಟ್ಟರಿಗೆ ಸಾಕಾಗಿತ್ತು ಅವನು ಅವರ ಕಣ್ಣಲ್ಲಿ ಅಪರಾಧಿಯಾಗುವುದಕ್ಕೆ.

ಜೊತೆಗೆ ಅವನು ಅಪರಾಧಿಯಾಗಲು ಅವನು ಚಿನ್ನಳಿಗೆ ಬೇಕಾದವನಾಗಿರುವುದೂ ತಕ್ಕಷ್ಟು ಸಾಕ್ಷ್ಯವಾಗಿತ್ತು. "ಇಬ್ಬರೂ ವಿದ್ಯಾವಂತರು. ಇಬ್ಬರಿಗೂ ಜೊತೆ ಬಹಳ ಚೆನ್ನಾಗಿದೆ. ಹಾಗೆಂದು, ಆ ಚಿನ್ನಾಸಾನಿಗೆ ಐದು ಯೋಜನ ಉದ್ದ, ಮೂರೂವರೆ ಯೋಜನದಗಲದ ರಾಜಧಾನಿಯಲ್ಲಿ ಇನ್ನಾರೂ ಇಲ್ಲದೆ ಇವನೇ ಗಂಟು ಬೀಳಬೇಕೇ ?" ಎಂದು ಏನೇನೋ ಕಾರಣಗಳನ್ನು ಕಲ್ಪಿಸಿಕೊಂಡು, ಸೆಟ್ಟರ ಮನಸ್ಸು ಯಾವುದೋ ನೆರಳು ಕಂಡು, ಅದು

ಮನುಷ್ಯನದೇ ಇರಬೇಕು: ಆ ಮನುಷ್ಯನು ಕಳ್ಳನೇ ಇರಬೇಕು ಎಂದು ಕೊಂಡು ಒದ್ದಾಡುವಂತೆ ಆಗಿಹೋಗಿತ್ತು.

ಅವರ ಮನಸ್ಸು ಹೀಗೆ ಹೇಳಿಕೊಳ್ಳಲಾರದ ದುಃಖದಲ್ಲಿ ಒದ್ದಾಡುತ್ತಿರುವಾಗ ರಾಜಧಾನಿಯ ಪೌರ ಮುಖಂಡರ ಗುಂಪೊಂದು ಅವರ ಬಳಿ ಬಂತು. ಆ ಗುಂಪಿನಲ್ಲಿ ಸೆಟ್ಟರು ಗೌರವಿಸುವ ಅನೇಕರು ಇದ್ದರು. ಜವಳಿ ರಂಗಪ್ಪನವರು, ಪಾತ್ರೆ ಅಂಗಡಿ ಜಿನದತ್ತಪ್ಪನವರು, ಸರಾಫ್ ಕಟ್ಟೆ ಅಮೃತಯ್ಯ ಸೆಟ್ಟರು, ಮುಂತಾಗಿ ಹಲವು ಜನ ಆಪ್ತರೂ ಇದ್ದಾರೆ. ಆ ಗುಂಪಿನವರ ಇಷ್ಟ ಗೋಪಾಲರಾಯನಿಗೆ ಒಂದು ಅಭಿನಂದನೋತ್ಸವ ಮಾಡಬೇಕು ಎಂದು. ಚಕ್ರವರ್ತಿಗಳು ಅವನ ಐದು ನಾಟಕ ನೋಡಿ ಸಂತೋಷಪಟ್ಟು, ಅವನಿಗೆ ನಟರಾಜ ಕಂಠೀರವ ಎಂಬ ಬಿರುದು ಕೊಟ್ಟಿದ್ದಾರೆ. ಅದಕ್ಕಾಗಿ ರಾಜಧಾನಿಯವರೆಲ್ಲ ಸೇರಿ ಅವನಿಗೆ ಭುಜ ತಟ್ಟಬೇಕು. ಸಾಹಿತ್ಯಕ್ಕೆ ಅಷ್ಟು ಗೌರವ ಕೊಟ್ಟುದಕ್ಕಾಗಿ ಚಕ್ರವರ್ತಿಗಳಿಗೆ ಕೃತಜ್ಞತೆ ಸಲ್ಲಿಸಬೇಕು. ಎಲ್ಲದಕ್ಕಿಂತ ಹೆಚ್ಚಾಗಿ ಕೃಷ್ಣದೇವರಾಯರ ಕಾಲದಿಂದ ರಾಜಮರ್ಯಾದೆಯೆಲ್ಲ ಆಂಧ್ರರ ಪಾಲಾಗಿ ಹೋಗಿದ್ದುದು ಈಗ ಏನೋ ಅಪ್ಪಿ ತಪ್ಪಿ ಕನ್ನಡದವರಿಗೆ ಒಂದು ಗೌರವ ಸಿಕ್ಕಿದೆ. ಇದು ಕನ್ನಡದ ಗೌರವ, ಕನ್ನಡ ಸಾಹಿತ್ಯಕ್ಕೆ ಲಭಿಸಿರುವ ಗೌರವ. ಅದರಿಂದ ಕನ್ನಡಿಗರು ತಪ್ಪದೆ ಈ ಉತ್ಸವ ನಡೆಸಬೇಕೆಂಬುದು ಆ ಸಮಿತಿಯವರ ಉದ್ದೇಶ.

ಸೆಟ್ಟರಿಗೆ ಇಂತಹ ಕಾರ್ಯಗಳಲ್ಲಿ ಬಹಳ ಉತ್ಸಾಹ. ಅವರಿಗೆ ಹತ್ತು ಜನದ ಜೊತೆ ಸೇರಬೇಕು. ಆ ಹತ್ತು ಜನವೂ ತಮ್ಮನ್ನು ಮುಂದುಮಾಡಬೇಕು. ಅವರೆಲ್ಲ ಈ ಕಾರ್ಯ ಇಷ್ಟು ಯಶಸ್ವಿಯಾಗಿ ನಡೆಯಲು ಸೆಟ್ಟರು ಮುಂದಾಳಾಗಿ ನಿಂತುಕೊಂಡದ್ದೇ ಕಾರಣ ಎನ್ನಬೇಕು. ತಾವು ಬಹಳ ದೊಡ್ಡ ವೇದಾಂತಿಗಳಂತೆ "ಉಂಟೆ? ಎಲ್ಲ ಶಿವನ ಚಿತ್ತ. ಮಹಾಜನರ ಇಷ್ಟ. ಏನೋ ಮಿತ್ರರು ನನಗೆ ಕೀರ್ತಿ ಬರಲಿ ಎಂದು ಮುಂದೆ ನಿಲ್ಲಿಸಿದರು" ಎನ್ನಬೇಕು.

ಇಂತಹ ಕಾರ್ಯಗಳನ್ನು ಮಾಡುವುದಕ್ಕೆ ನಿಲ್ಲುವ ಮುಂದಾಳುಗಳಿಗೂ ಗೊತ್ತು, ಸೆಟ್ಟರನ್ನು ಮುಂದಾಳು ಮಾಡದಿದ್ದರೆ ಯಾವುದೂ ನಡೆಯುವುದಿಲ್ಲವೆಂದು. ಅನೇಕ ವೇಳೆ ಮಿಕ್ಕವರೆಲ್ಲ ನೂರು ರೂಪಾಯಿ ಚಂದಾ

ಕೊಡುವುದಕ್ಕೂ ಹಿಂದೆಗೆಯುವಂತಹ ಕಾಲದಲ್ಲಿ, ಸೆಟ್ಟರು ಒಂದು ಸಾವಿರ ರೂಪಾಯಿ ಕೊಟ್ಟು ಪಟ್ಟಿ ಆರಂಭಿಸುತ್ತಿದ್ದುದೂ ಉಂಟು. ಒಂದೊಂದು ವೇಳೆ ಚಂದಾ ಬಂದುದಕ್ಕಿಂತ ಖರ್ಚು ಹೆಚ್ಚಾದಾಗ, ಅಯ್ಯೋ ಪಾಪ, ನೀವೆಲ್ಲ ಎಷ್ಟು ಕಷ್ಟಪಟ್ಟಿದ್ದೀರಿ! ದುಡ್ಡಿನ ಭಾರವೂ ನಿಮ್ಮ ಮೇಲೇ ಬಿದ್ದರೆ ಉಂಟೆ? ಎಂದು ತಮ್ಮ ಕೈಯ್ಯಿಂದ ಕೊಟ್ಟುಬಿಡುವರು. ಈ ಎಲ್ಲ ಕಾರಣಗಳಿಂದ ಮುಖ್ಯವಾಗಿ ಇಂತಹ ಮಹಾಜನ ಕಾರ್ಯಗಳಿಗೆ ಸೆಟ್ಟರ ಚೀಲಕ್ಕೆ ಕೈಯಿಟ್ಟು ತೆಗೆದುಕೊಳ್ಳುವಂತಹ ಸ್ವಾತಂತ್ರ್ಯ ಮಹಾಜನಕ್ಕೆ ಸಹಜವಾಗಿ ಉಂಟು ಎಂದು ಅವರು ಒಪ್ಪಿಕೊಂಡಿದ್ದುದರಿಂದ ಯಾವ ಕೆಲಸವೇ ಆಗಲಿ ಸೆಟ್ಟರನ್ನು ಬಿಟ್ಟು ನಡೆಯುತ್ತಿರಲಿಲ್ಲ.

ಈ ಸಲವೂ ಸೆಟ್ಟರು ಮುಂದೆ ನಿಂತು ಎಲ್ಲವನ್ನೂ ಮಾಡಬೇಕೆಂದು ಮಹಾಜನರ ಪ್ರತಿನಿಧಿಗಳು ಅಪೇಕ್ಷಿಸಿದರು. ಚಕ್ರವರ್ತಿಗಳು ಮಾಡಿರುವ ಅನುಗ್ರಹ ಸಾಮಾನ್ಯವಾದುದಲ್ಲ. ಐದು ಸಾವಿರ ರೂಪಾಯಿ ನಗದು, ಒಂದು ಚಂದ್ರಹಾರ, ಆದವಾನಿಯ ಹತ್ತಿರ ಎರಡು ಗ್ರಾಮಗಳ ಜಹಗೀರು, ಬಿಟ್ಟಿಯಾಯಿತೆ? ಈಗ ಮಹಾಜನರೂ ಅದಕ್ಕೆ ತಕ್ಕಂತೆ ಗೌರವ ಮಾಡಬೇಕು. ಐದು ಸಾವಿರ ರೂಪಾಯಿ ನಗದು, ಒಂದು ಸಾವಿರ ರೂಪಾಯಿನದು ಒಂದು ವಜ್ರದುಂಗುರ, ಇಷ್ಟೂ ಕೊಡಬೇಕು ಎಂದು ಅವರ ಸಂಕಲ್ಪ.

ಸೆಟ್ಟರೂ ಬಂದವರನ್ನು ಬಹಳ ವಿಶ್ವಾಸದಿಂದ ಕಂಡು ಉಪಚಾರ ಮಾಡಿದರು. "ಗೋಪಾಲರಾಯರು ಸರ್ವಪ್ರಕಾರದಿಂದಲೂ ಗೌರವಕ್ಕೆ ಅರ್ಹರು. ಮೊನ್ನೆ ಅರಮನೆಯಲ್ಲಿ ನಾಟಕ ಆದಾಗಲೂ ಆಹಾ! ಆ ಅರ್ಜುನನ ಪಾತ್ರ, ಶಬರಶಂಕರದಲ್ಲಿ, ಉದ್ಯೋಗಪರ್ವದಲ್ಲಿ ಆ ಕೃಷ್ಣ ಎರಡೂ ನನ್ನ ಕಣ್ಣಿಗೆ ಕಟ್ಟಿದಂತಿವೆ. ಅದೆಲ್ಲ ಸರಿಯೇ! ಆದರೂ ನೋಡಿ, ನಾಟಕ ಹೆಂಗುಸರು ನೋಡಬಾರದು. ನಾವು ಗಂಡಸರು, ನಾವೇ ಈ ವೇಷಗಳನ್ನು ನೋಡಿ ಭಲೇ ಭಲೇ ಎಂದುಬಿಡುತ್ತೇವೆ. ಹೀಗಿರುವಾಗ ಹೆಂಗಸರು ನೋಡಿದರೆ ಕೇಳಬೇಕೆ? ಆದರೆ, ಈ ರಾಜಧಾನಿಯಲ್ಲಿ ನಮಗೆ ತೋರಿದಂತೆ ಮಾತನಾಡುವುದಕ್ಕಾದೀತೇ? ಅದೆಲ್ಲ ಇರಲಿ. ಈಗ ನಮ್ಮಿಂದ ಆಗಬೇಕಾದ ಕೆಲಸ ಏನು? ಚಂದಾಪಟ್ಟಿತಾನೇ? ಏನು ನಿಮ್ಮದೆಲ್ಲ ಒಂದು ಹತ್ತು ಸಾವಿರದ

ಖರ್ಚಾದರೆ ಬೇಕಾದಷ್ಟು ಆಯಿತು. ಆಗಲಿ. ನೀವೆಲ್ಲ ಏನೇನು ಹಾಕ ಬೇಕೆಂದಿದ್ದೀರಿ. ಸರಿ. ಪಟ್ಟಿ ಒಂದು ಸಲ ಹಾಗೇ ಸುತ್ತಿಕೊಂಡು ಬರಲಿ. ನಾವು ಇದ್ದೇ ಇದ್ದೇವೆ. ಪತ್ತು ಜನ ಹೆಂಗೆ ಹೋದರೆ ಅದೇ ಹಾದಿ. ಅದಕ್ಕೇನು ?" ಎಂದರು.

ಬಂದವರು ಹಾಗೂ ಹೀಗೂ ಮಾಡಿ ಸೆಟ್ಟರಿಂದ ಇನ್ನೂರಯಿವತ್ತು ಚಂದಾ ಹಾಕಿಸಿಕೊಂಡು, ನೀವೇ ಅವೊತ್ತು ಅಧ್ಯಕ್ಷರಾಗಿರಬೇಕು ಎಂದು ಅವರನ್ನೊಪ್ಪಿಸಿದರು. ಸೆಟ್ಟರಿಗೆ ಒಂದು ತುಂಟ ಯೋಚನೆ ಬಂತು. "ನೀವೇನೋ ನಮ್ಮನ್ನು ಅಧ್ಯಕ್ಷರಾಗಬೇಕು ಎಂದು ಕೇಳಿದ್ದೀರಿ. ನೀವು ಕೇಳಿದ ಮೇಲೆ ನಾವೂ ಇಲ್ಲ ಎನ್ನುವುದಕ್ಕಿಲ್ಲ. ಆದರೆ ಒಂದು ಷರತ್ತು. ನೀವು ಆ ದಿನ ಆ ಚಿನ್ನಾಸಾನಿ ಸಂಗೀತ ಇಡಿಸಬೇಕು." ಎಂದರು. ಎಲ್ಲರಿಗೂ ಸೆಟ್ಟರು ಏಕೆ ಆ ಮಾತನಾಡಿದರು ಎನ್ನುವುದು ತಿಳಿಯಿತು. ಎಲ್ಲರೂ ಕಿಲಕಿಲನೆ ನಕ್ಕರು. ಸೆಟ್ಟರು ತಮಗೂ ಬಂದಿರುವ ನಗು ತಡೆದುಕೊಳ್ಳುತ್ತಾ, ನಡುನಡುವೆ ನಗುವಿನಲ್ಲಿ ಸೇರುತ್ತಾ, "ಅಲ್ರೀ, ಇವರು ಅದೇನಪ್ಪಾ ಬಿರುದು ? ನಟರಾಜ ಭಯಂಕರನೋ ? ಅಲ್ಲ, ಇನ್ನೇನು—ನಡುವೆ ಯಾರೋ ನಟರಾಜ ಕಂಠೀರವ—ಎಂದು ತಿದ್ದಿದರು. ಹುಂ, ನಟರಾಜ ಕಂಠೀರವರಿಗೆ ಮಹಾ ಜನರು ಅಭಿನಂದನ ಮಾಡುವಾಗ ಹಾಡುವುದಕ್ಕೆ ರಾಜಧಾನಿಯ ಪ್ರಸಿದ್ಧ ಸಂಗೀತಗಾರರೇ ಆಗಬೇಕೋ ಬೇಡವೋ ತಪ್ಪೇನಪ್ಪ ?" ಎಂದು ವಿನ್ಯಾಸ ಮಾಡಿದರು. ಸೆಟ್ಟರ ಒಳಮನಸ್ಸಿನಲ್ಲಿ "ಅವಳು ಒಪ್ಪುವುದಿಲ್ಲ. ಈ ಸಭೆ ನಡೆಯುವುದಿಲ್ಲ. ಆಗಲಿ, ಆ ಪ್ರಾರಬ್ಧ ಗೋಪಾಲರಾಯನಿಗೆ ಅವಮಾನ ವಾಗಲಿ." ಎಂದು ಒಂದು ಆಸೆ. ಹಾಗೂ ಹೀಗೂ ಎಷ್ಟು ಎಳೆದಾಡಿದರೂ, ಎಷ್ಟು ಚೌಕಾಶಿ ಮಾಡಿದರೂ ಬಿಡದೆ ಸೆಟ್ಟರು ಪಟ್ಟು ಹಿಡಿದು ಬಂದವರನ್ನೊಪ್ಪಿ ಸಿದರು. ಅವರೂ ದಾಕ್ಷಿಣ್ಯಕ್ಕೆ ಒಪ್ಪಿಕೊಳ್ಳಬೇಕಾಯಿತು. ಎಲ್ಲರಿಗೂ ಗೊತ್ತು. ಸೆಟ್ಟರು ಪಟ್ಟು ಹಿಡಿದರೆ ಜಪ್ಪಯ್ಯಾ ಎಂದರೂ ಬಿಡುವುದಿಲ್ಲ ಎಂದು. ಯತ್ನವಿಲ್ಲವೆಂದು ಒಪ್ಪಿಕೊಂಡರು. ಸೆಟ್ಟರಿಗೆ ಬಹು ದಿನದ ಮಚ್ಚರ ತೀರಿಸಿದಂತೆ ಏನೋ ತೃಪ್ತಿ.

ಸ್ವಾಗತ ಸಮಿತಿಯವರು ಯತ್ನವಿಲ್ಲದೆ, ಇಷ್ಟವಿಲ್ಲದೆ, ನೇರವಾಗಿ ಚಿನ್ನಾ ಸಾನಿ ಮನೆಗೆ ಹೋದರು. ಸೆಟ್ಟರದು ಮೂರು ತೊಟ್ಟಿ ಮನೆ. ಅವಳದು

ನಾಲ್ಕು ತೊಟ್ಟಿ ಮನೆ. ಅವರದು ಮೂರು ಮದಡಿಯ ಮನೆ. ಇವಳದೂ ಮೂರು ಮದಡಿಯ ಮನೆ. ಅವಳಿಗೆ ಇವರಿಷ್ಟು ಜನವೂ ಬಂದಿರುವುದು ಕೇಳಿ ಆಶ್ಚರ್ಯವಾಯಿತು. ಗೋಪಾಲರಾಯನಿಗೆ ಅಭಿನಂದನ ಸಭೆ ಮಾಡುವುದಕ್ಕೆ ಇವರೆಲ್ಲ ಸೇರಿರುವರು. ಇವರೆಲ್ಲ ರಾಯನ ಮಿತ್ರರು ಎಂಬುದು ಅವಳಿಗೆ ಗೊತ್ತು. ರಾಯನ ನಾಟಕ ಎಂದರೆ, ಇವರಿಗೆ ರಂಗದ ಮುಂದುಗಡೆ ಸಾಲು ಸಾಲು ಗುತ್ತಿಗೆ. ಅಲ್ಲದೆ, ರಾಯನಿಗೆ ಸಮಯ ಎಂದರೆ ಇವರೆಲ್ಲ ಸಹಾಯ ಲೆಕ್ಕವಿಲ್ಲದೆ ಮಾಡುವವರು ಎಂಬುದನ್ನು ಅವಳು ಬಲ್ಲಳು. ಇವರಿಷ್ಟು ಮಂದಿ ಈ ಹೊತ್ತಿನಲ್ಲಿ ಬಂದಿರುವುದು ರಾಯನ ಸಂಬಂಧವಾಗಿಯೇ ಎಂಬುದನ್ನು ಅವಳ ಬುದ್ಧಿ ಒಂದು ಕ್ಷಣದಲ್ಲಿ ಗ್ರಹಿಸಿತು. ಇರಲಿ, ಎಂದು ಅವರನ್ನೆಲ್ಲ ಮೂರನೆಯ ತೊಟ್ಟಿಗೆ ಬರಮಾಡಿಕೊಂಡು ತಾನೂ ಬಂದು ಕಾಣಿಸಿಕೊಂಡಳು.

ಅವಳು ವಿನಯವಾಗಿ ಬಂದು ಕೈಮುಗಿದು ಗಂಭೀರವಾಗಿ ಕುಳಿತಿದ್ದರೆ, ಅವಳೆದುರಿಗೆ ಮಾತನಾಡುವುದಕ್ಕೆ ಇವರೊಬ್ಬರಿಗೂ ಧೈರ್ಯವಾಗಲೊಲ್ಲದು. ಅಷ್ಟು ಹೊತ್ತು ಎಲ್ಲರೂ ಮೌನವನ್ನು ಸಾಧಿಸಿದ ಮೇಲೆ, ಅವಳೇ, "ತಾವೆಲ್ಲ ಈ ಊರಿನ ಗಣ್ಯ ಶ್ರೀಮಂತರು. ಸಂಗೀತ ಸಾಹಿತ್ಯಾದಿ ಕುಶಲ ಕಲೆಗಳಲ್ಲಿ ಅಭಿಮಾನ ಉಳ್ಳವರು. ತಾವು ಇಲ್ಲಿಯವರೆಗೂ ದಯಮಾಡಿದ್ದು ನಮ್ಮ ಪುಣ್ಯೋದಯ. ಯಾವ ರೀತಿಯಲ್ಲಿ ಏನು ಮಾಡಿ ತಮ್ಮನ್ನು ಮೆಚ್ಚಿಸಬೇಕು ಅಪ್ಪಣೆಯಾಗಲಿ, ದಾಸಿಯು ಸಿದ್ಧವಾಗಿದ್ದಾಳೆ" ಎಂದಳು. ಸರಾಫ್ ಕಟ್ಟೆ ಅಮೃತಯ್ಯಸೆಟ್ಟರು "ಅಮ್ಮಣ್ಣಿ, ಸೆಟ್ಟರು ವರ್ತಕರು ವಿದ್ವಾಂಸರೂ ಎಲ್ಲರೂ ಸೇರಿ ಒಂದು ಸಭೆ ಮಾಡಬೇಕು ಎಂದಿದ್ದೇವೆ. ನಟರಾಜ ಕಂಠೀರವ ಗೋಪಾಲರಾಯರಿಗೆ ಸನ್ಮಾನ ಮಾಡಬೇಕು ಎಂದು ಉದ್ದೇಶ. ಆ ದಿನ ವಿದ್ವಾಂಸರ ಪರವಾಗಿ ನೀವು ದೊಡ್ಡ ಮನಸ್ಸು ಮಾಡಿ ಸಭೆಯಲ್ಲಿ ಒಂದಷ್ಟು ಸಂಗೀತ ನಡೆಸಿಕೊಡಬೇಕು. ಈಗ ಆಗಿರುವುದು ಏನು ಎಂದರೆ, ನಾವು ಎಲ್ಲ ಸಿದ್ಧಮಾಡಿಕೊಂಡಿದ್ದೇವೆ. ನೀವು ಒಪ್ಪಿದರೆ ಸಭೆ ನಡೆಯುತ್ತೆ ಇಲ್ಲದಿದ್ದರೆ ಇಲ್ಲ ಎನ್ನುವ ಘಟ್ಟಕ್ಕೆ ಬಂದಿದೆ. ನಾವು ಸಭೆ ಮಾಡುವ ವಿಷಯ ರಾಜಧಾನಿಗೆಲ್ಲ ತಿಳಿದು ಹೋಗಿದೆ. ಈಗ ಏನಾದರೂ ಸಭೆ ನಿಂತರೆ, ನಾವು ಮೂರು ಜನವೂ ಪೇಟೆಯಲ್ಲಿ ತಲೆಯೆತ್ತಿಕೊಂಡು ತಿರುಗುವ ಹಾಗಿಲ್ಲ."

ಎಂದರು. ಅವರ ದನಿಯೇ ಅವರಾಡಿದ ಮಾತು ಸತ್ಯ, ಅದರಲ್ಲಿ ಎಳ್ಳಷ್ಟೂ ಕಪಟವಿಲ್ಲ ಎಂಬುದನ್ನು ಹೇಳುತ್ತಿತ್ತು. ಇನ್ನಿಬ್ಬರ ಮೊಕಗಳೂ ನೋಟಗಳೂ ಅವರು ಹೇಳಿದುದನ್ನು ಸತ್ಯವೆಂದು ಸಾಕ್ಷಿ ಕೊಡುತ್ತಿದ್ದುವು.

ಚಿನ್ನಳು ಒಂದು ಗಳಿಗೆಯೊಳಗಾಗಿ ಎಲ್ಲಿಯೋ ತುಂಟುನತ ನಡೆದಿದೆ ಎಂಬುದನ್ನು ಗ್ರಹಿಸಿದಳು. ತನ್ನ ರಾಯನ ಸನ್ಮಾನ ಸಭೆಯಲ್ಲಿ ತಾನು ಹಾಡಿದರೆ ಒಂದು ರೀತಿಯಾಗಿ ಸೋತ ಹಾಗೆ. ಒಪ್ಪದಿದ್ದರೆ ತನ್ನ ರಾಯನಿಗೆ ನಡೆಯುವ ಗೌರವ ನಿಂತು ಹೋಗುತ್ತದೆ. ಏನು ಮಾಡಬೇಕು ? ಅವಳು ಕೇಳಿದಳು: " ಅಧ್ಯಕ್ಷರು ಯಾರು ? "

" ಇನ್ನು ಯಾರು ? ಯಜಮಾನ್ ವೀರಪ್ಪಸೆಟ್ಟರು."

" ನನ್ನ ಸಂಗೀತ ಇಲ್ಲದಿದ್ದರೆ ಅವರು ಆ ದಿನದ ಅಧ್ಯಕ್ಷತೆ ವಹಿಸುವುದಿಲ್ಲವಂತೋ ? "

" ಹಾ. ಹಾಗಲ್ಲ. ಹಾಲಿಗೆ ಸಕ್ಕರೆ ಬೆರೆಸಿದ ಹಾಗೆ. ರಾಯರು ನಾಟಕದಲ್ಲಿ ಅದ್ವಿತೀಯರು ಹೇಗೋ ಹಾಗೆ ನೀವೂ ಸಂಗೀತದಲ್ಲಿ. ಆದರಿಂದ ಎರಡೂ ಸೇರಬೇಕು ಎಂದು ಅವರ ಇಷ್ಟ."

" ಆಗಲಿ. ಆ ದಿನ ನನ್ನ ಸಂಗೀತ ಇಟ್ಟುಕೊಳ್ಳಿ. ಆದರೆ ಒಂದು ಷರತ್ತು."

" ಏನು ? "

" ನೀವು ನನ್ನಿಂದ ಚಂದಾ ತೆಗೆದುಕೊಳ್ಳಬೇಕು. ಅವೊತ್ತು ನನಗೆ ಒಂದು ವೀಳ್ಯ ವಿನಾ ಇನ್ನೇನೂ ಕೊಡಬಾರದು."

ಅನ್ನುತಯ್ಯಸೆಟ್ಟರು ಆವಾಕ್ಕಾದರು. ಅವರು ಇವಳಿಗೆ ಐದುಸಾವಿರವಾದರೂ ಕೊಡಬೇಕಾದೀತು ಎಂದು ಐದರಿಂದ ಪತ್ತರವರೆಗೆ ಸಿದ್ಧವಾಗಿದ್ದರು. ಅವರು ತಾವು ಕಿವಿಯಲ್ಲಿ ಕೇಳಿದ ಮಾತು ನಂಬುವುದು ಕಷ್ಟವಾಯಿತು. ಮಿತ್ರರ ಮುಖ ನೋಡಿ, ತಮ್ಮ ವಿಸ್ಮಯವನ್ನು ತಮ್ಮ ಕಣ್ಣುಗಳೂ ಮುಖಮುದ್ರೆಯೂ ಸ್ಪಷ್ಟವಾಗಿ ತೋರುತ್ತಿರಲು " ನೀವು ಹೇಳಿದುದು ಅರ್ಥವಾಗಲಿಲ್ಲ." ಎಂದರು.

ಚಿನ್ನಳು ನಕ್ಕು ಹೇಳಿದಳು : " ತಾವು ಆದಿನ ಏನೇನು ಮಾಡಬೇಕೆಂದಿದ್ದೀರಿ ? ಒಂದು ಊಟ, ಒಂದು ಸಂಗೀತ, ಒಂದು ಮಾನಪತ್ರ,

ಒಂದು ಅಭಿಮಾನ ಸೂಚಕವಾದ ಗುರುತು. ಇಷ್ಟಕ್ಕೆ ಎಷ್ಟು ಖರ್ಚು ಮಾಡಬೇಕೆಂದಿದ್ದೀರಿ ?"

"ಹೌದು ನೀವು ಹೇಳಿದ್ದಷ್ಟೇ! ಅಭಿಮಾನ ಸೂಚಕವಾಗಿ ಒಂದು ವಜ್ರದುಂಗುರ ಕೊಡಬೇಕು ಎಂದಿದ್ದೇವೆ."

"ವಜ್ರದುಂಗುರ ತಾವು ಕೊಡಿ. ಜೊತೆಗೆ ಒಂದು ಥೋಡಾ ಕೊಡಿ. ಸೆಟ್ಟರು ಏನು ಚಂದಾ ಹಾಕಿದ್ದಾರೆ ?"

"ಇನ್ನೂರೈವತ್ತು."

ಚಿನ್ನಳು ಬಾಗಿಲಕಡೆಗೆ ತಿರುಗಿ ನೋಡಿದಳು. ಆಳು ಓಡಿಬಂದಳು. ಅವಳ ಕಿವಿಯಲ್ಲಿ ಏನೋ ಹೇಳಿ, ತಾನು ಅವರೊಡನೆ ಮಾತನಾಡುತ್ತಾ ಕುಳಿತಳು.

ಜಿನದತ್ತಪ್ಪನವರು ಲೋಕಾಭಿರಾಮವಾಗಿ ಮಾತನಾಡುತ್ತ "ಆ ದಿನ, ಉತ್ಥಾನದ್ವಾದಶಿಯ ದಿನ, ನಿಮ್ಮೆದುರಿಗೆ ಹೇಳುವ ಮಾತಲ್ಲ. ಅಭಿನಯ ಅದ್ಭುತವಾಗಿತ್ತು. ಅವೊತ್ತಿನಿಂದ ಏನಾದರೂ ಮಾಡಿ ನಿಮ್ಮ ಅಷ್ಟಪದಿ ಅಭಿನಯ ನೋಡಬೇಕು ಎನ್ನಿಸಿಬಿಟ್ಟಿದೆ. ಅಬ್ಬಾ, ಅವೊತ್ತಿನ ಅಭಿನಯ ಇನ್ನೂ ಕಣ್ಣಿಗೆ ಕಟ್ಟಿದಹಾಗಿದೆ."

"ಸಾಮುಕಾರರೇ, ತಮ್ಮಂಥಾವರ ಅನುಗ್ರಹದಿಂದ ಅನ್ನ ಬಟ್ಟೆಗೆ ನೇರವಾಗಿದೆ. ನಮಗಿನ್ನೇನು ಕೆಲಸ? ಕಲಿಯುವುದು, ಕಲಿಯುವುದು. ಅವಕಾಶವಾದಾಗ, ನಮಗೆ ಬಂದಿರುವುದನ್ನು ದೇವರಿಗೆ ಒಪ್ಪಿಸುವುದು."

"ಏನು ಮಾಡುವುದು? ನೀವು ಎಲ್ಲೂ ಸಭೆಗಳಿಗೆ ಬರುವುದಿಲ್ಲ. ಇಲ್ಲದಿದ್ದರೆ, ನಿಮ್ಮ ಅಷ್ಟಪದಿ ಅಭಿನಯ ಎಂಟು ದಿನ ಎಲ್ಲಾದರೂ ಇಡಿಸಬಹುದು."

"ಈಗ ಸಂಗೀತ ಕಚೇರಿ ಇಡಿಸಿದ್ದೀರಲ್ಲ. ಹಾಗೆಯೇ ಒಂದವಕಾಶ ಸಿಕ್ಕಿದಾಗ ಅದೂ ಆಗಲಿ."

"ಏನೋ ಎಷ್ಟು ದಿನಕ್ಕೋ? ನಮಗೆ ಅದನ್ನು ನೋಡುವುದು ಹಣೆಯಲ್ಲಿ ಬರೆದಿದೆಯೋ ಇಲ್ಲವೇ ಇಲ್ಲವೋ ?"

"ಈ ದಾಸಿಗೆ ಗರ್ವವಿದೆ. ಆದರೂ ತಮ್ಮಂಥಾ ಮಹನೀಯರು

ದಯುಮಾಡಿಸಿ, ಅಭಿನಯಮಾಡೇ ಎಂದರೆ ಮಾಡುವುದಿಲ್ಲ ಎನ್ನುವುದ ಕ್ಕಾದೀತೆ ?........"

ಅಷ್ಟರಲ್ಲಿ ದಾಸಿಯರು ಐವರು ಹೋಗಿದ್ದ ಆಳಿನ ಹಿಂದೆ ಬಂದರು. ಆಳು ತಟ್ಟೆಯನ್ನು ತಂದು ಚಿನ್ನಳ ಮುಂದಿಟ್ಟಳು. ಅದರಲ್ಲಿ ಐವರು ದಾಸಿಯರೂ ತಾವು ತಂದಿದ್ದ ಒಂದೊಂದು ಹಣದ ಥೈಲಿಯನ್ನೂ ಇಟ್ಟರು. ಚಿನ್ನಳು ಅದನ್ನು ಮುಟ್ಟಿ ವಿನಯದಿಂದ "ಇದು ನನ್ನ ಚಂದ. ದಾಸಿಯ ಚಂದಾ ಎಂದೇ ಬರೆದುಕೊಳ್ಳಬೇಕು–" ಎಂದು ಕೈಮುಗಿದಳು.

ಸಾಹುಕಾರರು ಮೂರು ಜನವೂ ಒಬ್ಬರ ಮುಖ ಒಬ್ಬರು ನೋಡಿದರು. ಏನೋ ಹೇಳುವುದಕ್ಕೆ ಹೊರಟರು. ಚಿನ್ನಳು ನಗುನಗುತ್ತಾ ನಿವಾರಿಸಿ, "ಇದು ನಮ್ಮ ದೇವರ ಪೂಜೆ, ಒಪ್ಪಿಸಿಕೊಳ್ಳಿ. ಇದಿರಲಿ. ಇನ್ನೊಂದು ಅರಿಕೆಯುಂಟು. ಒಂದುವೇಳೆ ಸೆಟ್ಟರೇನಾದರೂ ಕಾರಣಾಂತರದಿಂದ ಅಂದು ಅಧ್ಯಕ್ಷತನವನ್ನು ವಹಿಸದೆ ಹೋದರೆ, ಆ ಅಧ್ಯಕ್ಷತೆಯನ್ನು ನಮ್ಮ ವಿದ್ಯಾಗುರು ಭರತಾಚಾರ್ಯರಿಗೆ ಕೊಡಬೇಕು."

ಅವರಿಗೆ ಏನು ಹೇಳಬೇಕೋ ತೋರದೆ ಆಗಬಹುದು ಆಗಬಹುದು ಎಂದರು. ಅವರಿಗೆ ಏನು ಹೇಳುವುದಕ್ಕೂ ತೋರದೆ ಹೋಗಿತ್ತು. ಬಾಯಿ ಕಟ್ಟಿದಂತಾಗಿತ್ತು. ಅವರು ಹೊರಡುವುವರಲ್ಲಿರುವುದನ್ನು ಕಂಡು ಚಿನ್ನಳು ಚಿನ್ನದ ತಟ್ಟೆಯಲ್ಲಿ ಚಿನ್ನದ ತಗಡಿನಂತಿದ್ದ ವೀಳೆಯದೆಲೆ, ಚಿನ್ನದ ರೇಖು ಒತ್ತಿದ್ದ ಉಜ್ಜು ಅಡಿಕೆ, ಇವುಗಳ ವೀಳೆಯವನ್ನು ತರಿಸಿ ತಾನೇ ಒಂದೊಂದು ತಟ್ಟೆಯಲ್ಲಿ ಒಬ್ಬೊಬ್ಬರಿಗೆ ಕೊಟ್ಟಳು. ಅವರೂ ಮರ್ಯಾದೆಯಾಗಿ ಎರಡೆಲೆ ಎರಡಡಕೆ ತೆಗೆದುಕೊಂಡು, ಅವಳನ್ನು ಬೀಳ್ಕೊಂಡರು. ದಾಸಿಯರು ಹಣದ ಚೀಲಗಳನ್ನು ತಂದು ಗಾಡಿಯಲ್ಲಿಟ್ಟರು. ಚಿನ್ನಳು ಬಾಗಿಲವರೆಗೂ ಬಂದು ಅವರನ್ನು ಕಳುಹಿಸಿಕೊಟ್ಟಳು. ದಾರಿಯಲ್ಲಿ ಹೋಗುತ್ತ ಜಿನದತ್ತಪ್ಪನವರು "ಏನು ಸೆಟ್ಟರೇ ?" ಎಂದರು. ಅವರು "ಈಗ ಸೋತವರು ಯಾರು ಎಂದು ಯೋಚಿಸುತ್ತಿದ್ದೇನೆ" ಎಂದರು. ರಂಗಯ್ಯನವರು "ಸೆಟ್ಟಿ ಏಕೆ ಹೇಳಿದನೋ ? ಸೂಳೆ ಏಕೆ ಒಪ್ಪಿದಳೋ ? ಎರಡೂ ನಾನು ಕಾಣೆ. ಅದೇನಾದರೂ ಆಗಲಿ. ಈ ಸನ್ಮಾನ ಸಭೆ ಅದ್ಭುತವಾಗಿ ನಡೆದುಹೋಗುತ್ತೆ. ಚಿನ್ನಾಸಾನಿ ಸಂಗೀತ.

ಬೇಕು ಎಂದರೆ ಚಕ್ರವರ್ತಿಗಳನ್ನೇ ಕರೆದು ತರಬಹುದು. ಇವೊತ್ತೆಲ್ಲೊ ನರೀ ಮೊಕ ನೋಡಿರಬೇಕು ನಾವು." ಎಂದನು.

ಸನ್ಮಾನ ಸಭೆಗೆ ಎಂಟು ದಿನದಿಂದಲೂ ಬೇಕಾದ ಸಿದ್ಧತೆಗಳು ನಡೆದಿವೆ. ದೊಡ್ಡ ಮಂಟಪ ಅದಕ್ಕಾಗಿ ಸಿದ್ಧವಾಗಿದೆ. ಎಲ್ಲರೂ ಕರೆಯೋಲೆಗಳಿಗೆ ಕೈನೀಡುವವರೇ! ಊರುಊರುಗಳಿಂದ ವಿಜಯದಶಮಿಗೆ ನೊಗಚುವ ಹಾಗೆ ಜನ ನೊಗಚುತ್ತಿದೆ. ನಾಳೆಯ ದಿನ ಸಭೆ ಎನ್ನುವಾಗ ಅಮೃತಯ್ಯ ಸೆಟ್ಟರಿಗೆ ವೀರಪ್ಪ ಸೆಟ್ಟರಿಂದ ಒಂದು ಕಾಗದ ಬಂತು. ಅದರಲ್ಲಿ ವಿವರಗಳೂ ಹೆಚ್ಚಾಗಿಲ್ಲ. ಶ್ರೀಮನ್ಮಹಾರಾಜೇಶ್ವರ ರಾಜಮಾನ್ಯ ಸರಾಫ್ ಶೆಟ್ಟಿ ಅಮೃತಯ್ಯ ಸೆಟ್ಟರಿಗೆ-ಯಜಮಾನ್ ವೀರಪ್ಪ ಸೆಟ್ಟಿಯ ಶರಣಾರ್ತಿಗಳು. ಅದಾಗಿ, ಈ ದಿನ ಗೋಲ್ಕಂಡಕ್ಕೆ ಈ ಕೂಡಲೇ ಹೋಗಬೇಕಾದ ಕಾರ್ಯಗೌರವ ಒದಗಿದೆಯಾಗಿ ನಾನು ಊರು ಬಿಟ್ಟು ಹೊರಟುಬಿಟ್ಟದ್ದೇನೆ. ತಮಗೆ ಮೊದಲೇ ಹೇಳಲಿಲ್ಲ ಎಂದು ಕೋಪಮಾಡಿಕೊಳ್ಳಬೇಡಿ. ಕ್ಷಮಿಸಿ. ಇಂತಿ ಶರಣಾರ್ತಿಗಳು ವೀರಪ್ಪ."

ಅಮೃತಯ್ಯಸೆಟ್ಟರು ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದಂತೆ ಗಾಬರಿಪಟ್ಟು ರಂಗಯ್ಯನವರ ಬಳಿಗೆ ಹೋದರು. ಇಬ್ಬರೂ ಜಿನದತ್ತಪ್ಪನವರ ಬಳಿಗೆ ಹೋದರು. ಇವರಿಬ್ಬರ ಗಾಬರಿ ನೋಡಿ ಅವರಿಗೂ ಗಾಬರಿಯಾಯಿತು. ಕಾಗದವನ್ನು ನೋಡಿ ಒಂದು ರೆಪ್ಪೆ ಹೊಡೆಯುವಷ್ಟು ಹೊತ್ತು ಕಣ್ಣು ಮುಚ್ಚಿಕೊಂಡಿದ್ದು "ಸೆಟ್ಟರೇ, ಅವೊತ್ತು ಸೋತವರು ಯಾರು? ಎಂದು ಕೇಳಿದಿರಿ. ಸೋತವರು ಸೆಟ್ಟರು. ಗೆದ್ದವರು ಚಿನ್ನಾಸಾನಿ." ಎಂದರು.

"ಹಾಗೆಂದರೆ?"

"ಪಾಪ! ನಿಮಗೇನಾದರೂ ಗೊತ್ತಾಗುತ್ತದೆಯೋ? ಸೆಟ್ಟರು ಕೊಟ್ಟ ಚೆಂದಾಕ್ಕೆ ಒಂದು ಪತ್ರರಷ್ಟು ಕೊಟ್ಟಾಗಲೇ ನನಗೆ ಏನೋ ಅನುಮಾನವಾಯಿತು. 'ಸೆಟ್ಟರಿಗೆ ಕೊಟ್ಟಳು ಸೂಳೆ ಬತ್ತಿ' ಎಂದುಕೊಂಡೆ. ನಿಜವಾಯಿತು."

ರಂಗಯ್ಯನವರು "ಒಪ್ಪಿದೆ. ಆ ಸೆಟ್ಟಿ ತನಗೆ ಅವಮಾನವಾಯಿತು ಎಂತಲೇ ಇವೊತ್ತು ಚಕ್ರಕೊಟ್ಟದ್ದು. ಇದಿರಲಿ. ಅವಳು ಹೀಗಾಗುತ್ತದೆ ಎಂದು ಆಗಲೇ ಲಿಕ್ಕಪಾಕಿ ಭರತಾಚಾರ್ಯರನ್ನು ಅಧ್ಯಕ್ಷರನ್ನು ಮಾಡಿ ಎಂದು ಆಗಲೇ ಹೇಳಿದ್ದಾಳಲ್ಲ, ಆ ಬುದ್ಧಿ ನೋಡಿ." ಎಂದನು.

ಮೂವರೂ ನಗುನಗುತ್ತಾ ಗಾಡಿ ಹಾಕಿಕೊಂಡು ಚಿನ್ನಳ ಮನೆಗೆ ಹೋದರು. ಅವರ ಗುರುಗಳು ಭರತಾಚಾರ್ಯರೂ ಅಲ್ಲಿಯೇ ಇದ್ದರು. ಮೂವರೂ ಅವಳ ಬುದ್ಧಿಯನ್ನು ಪ್ರಶಂಸಿಸುತ್ತಾ, ಅವಳ ಮುಖವಾಗಿ ಭರತಾಚಾರ್ಯರನ್ನು ಮರುದಿನ ಅಧ್ಯಕ್ಷತೆ ವಹಿಸಬೇಕೆಂದು ಪ್ರಾರ್ಥಿಸಿದರು. ಅವರು "ಈ ಚೇಷ್ಟೆಗಳೆಲ್ಲ ದುಡ್ಡಿನವರ ಪಾಲಪ್ಪಾ! ನಾವೇನಿದ್ದರೂ ಶಾಸ್ತ್ರದವರು. ಸರಸ್ವತೀ ಕಡೆಯವರಿಗೆ ಯಾವಾಗಲೂ ಕಡೆಯ ಹಾರ. ಮೊದಲನೆಯ ಹಾರ ಲಕ್ಷ್ಮಿ ಕಡೆಯವರಿಗೆ" ಎಂದರು.

ಚಿನ್ನಳು ಮುದ್ದಾಗಿ ಕೈಮುಗಿದು, "ಅಯ್ಯಾ ಅವರೆ, ರಾಜಧಾನಿಯ ವರ್ತಕ ಮಂಡಲಿಯವರು ಮೊದಲನೆಯ ಹಾರ ತಾವು ಹೇಳಿದ ಹಾಗೆ ಲಕ್ಷ್ಮೀ ದೇವಿಯ ಭಕ್ತರಿಗೆ ಮೀಸಲು ಮಾಡಿಕೊಂಡು ಬಂದರು. ಆದರೆ ತಮ್ಮ ಮಗಳು ಒಂದಕ್ಕೆ ಹತ್ತು ಕೊಟ್ಟು ಅದನ್ನು ಕೊಂಡುಕೊಂಡಳು. ತಾವು ಒಪ್ಪಲೇಬೇಕು. ನಾಳೆ ನನ್ನ ಸಂಗೀತ ಸಭೆಯಲ್ಲಿ ಹೇಗಾಗುತ್ತದೆ ಎನ್ನುವುದನ್ನು ನೋಡಬೇಡವೇ?" ಎಂದಳು. ಆಚಾರ್ಯರು ತಲೆದೂಗಿ "ಹಾಗಾದರೆ ಚಿನ್ನಮ್ಮನ ಕೈವಾಡ ಇದು? ಆಗಲಿ. ಇನ್ನೂ ಏನು ಇದೆಯೋ ಯಾರು ಬಲ್ಲರು?" ಎಂದರು.

ಮರುದಿನ ಗೊತ್ತಾದ ಹೊತ್ತಿಗೆ ಸರಿಯಾಗಿ ಸಭೆ ಸೇರಿತು. ಭರತಾಚಾರ್ಯರು ಅಧ್ಯಕ್ಷರಾದರು. ಚಿನ್ನಾಸಾನಿಯು ಅಭೂತಪೂರ್ವವಾಗಿ, ಅದ್ಭುತವಾಗಿ ಹಾಡಿದಳು. ಸಭಿಕರೊಬ್ಬೊಬ್ಬರೂ ತಮ್ಮ ಆನಂದವನ್ನು ಹಿಡಿಯಲಾರದೆ ಬಿದ್ದು ಒದ್ದಾಡಿಹೋದರು. ಆಚಾರ್ಯನಂತೂ ಆನಂದಾಶ್ರುಗಳನ್ನು ಧಾರಾಳವಾಗಿ ಕರೆದನು. ಕೊನೆಗೆ ಸನ್ಮಾನದ ಕಾಲವು ಬಂದಾಗ ಗೋಪಾಲರಾಯನಿಗೆ ಸಭೆಯ ಪರಿತ್ತ ವಜ್ರದುಂಗುರ, ರತ್ನಖಚಿತವಾದ ತೋಡಾ, ಉತ್ತಮ ಶಾಲುಜೋಡಿ, ಇವುಗಳನ್ನು ಆಚಾರ್ಯಮುಖವಾಗಿ ಒಪ್ಪಿಸಿದರು. ರಾಯನು ಒಂದು ಗಳಿಗೆ ಹಾಗೆ ಅವುಗಳನ್ನ ಧರಿಸಿಕೊಂಡು ನಿಂತಿದ್ದು, ಗತ್ತಿನಿಂದ ಸಭೆಯವರಿಗೆ ವಂದನೆ ಮಾಡಿ, "ವಿಜಯನಗರದ ಸತ್ಪ್ರಜೆಗಳೇ, ಸಂಗೀತ ಸಾಹಿತ್ಯ ಕಲಾ ಕೋವಿದರೆ, ನಾಟಕಾಭಿಮಾನಿಗಳೇ, ತಾವೆಲ್ಲರೂ ನನ್ನ ಗುಣಲೇಶವನ್ನೇ ಪರ್ವತ ಪ್ರಾಯವಾಗಿ ಗಣಿಸಿ ಇಷ್ಟು ಅದ್ಭುತವಾದ ಮರ್ಯಾದೆ ಮಾಡಿದ್ದೀರಿ. ಇದು ನನ್ನ ಮೇಲಿನ ಅಭಿಮಾನವೋ? ಅಥವಾ ರಾಜಾನುಗ್ರಹಕ್ಕೆ ಪಾತ್ರ

ನಾದ ನನ್ನನ್ನು ಗೌರವಿಸುವ ನೆಪದಲ್ಲಿ ತಾವು ಪ್ರದರ್ಶಿಸುತ್ತಿರುವ ರಾಜ ಭಕ್ತಿಯೋ ನಾನು ಹೇಳಲಾರೆ. ಅಂತೂ ಈ ಗೌರವದಿಂದ ನಾನು ಬಹು ಮಾನಿತನಾಗಿದ್ದೇನೆ. ಈ ಬಹುಮಾನಕ್ಕೆ ಅರ್ಹನಾಗಲು ನಾನೂ ಪ್ರಯತ್ನ ಮಾಡುತ್ತೇನೆ. ಇದೇ ಸಂದರ್ಭದಲ್ಲಿ ತಮ್ಮ ಅಪ್ಪಣೆ ಪಡೆದು ಒಂದು ಕೆಲಸ ಮಾಡಬೇಕೆಂದಿದ್ದೇನೆ. ಮಳೆಯ ನೀರು ಹಳ್ಳದಲ್ಲಿ ತುಂಬಿ ಹರಿದು, ನದಿಗೆ ಬಿದ್ದು ಸೇರಿ, ಸಮುದ್ರಕ್ಕೆ ಸೇರಿ ತೀರ್ಥವಾಗುತ್ತದೆ. ಅದರಂತೆ ತಮ್ಮ ಅಭಿಮಾನವೆಂಬ ಮೋಡ ಕರೆದಿರುವ ಈ ಸದ್ವೃಷ್ಟಿರೂಪ ಬಹುಮಾನವನ್ನು ಈ ಹಳ್ಳ ಹೊತ್ತುಕೊಂಡು ಹೋಗಿ ಈ ಮಹಾನದಿಗೆ ಒಪ್ಪಿಸಿ, ತನ್ಮೂಲಕವಾಗಿ ತಮ್ಮ ಈ ದಿನದ ಉತ್ಸವವೆಲ್ಲ ಶಾರದಾಪೂಜೆಯಾಗುವಂತೆ ಮಾಡುವುದಕ್ಕೆ ಅಪ್ಪಣೆಯಾಗಬೇಕು" ಎಂದು ಪ್ರಾರ್ಥನೆ ಮಾಡಿಕೊಂಡರು.

ಸಭೆಯು ಆಗಲಿ ಎಂದಿತು. ರಾಯನು ಮುಂದೆ ಬಂದು ತನಗೆ ತೊಡಿಸಿದ್ದ ಥೋಡಾವನ್ನೂ, ಉತ್ತಮವಾದ ಶಾಲುಗಳನ್ನೂ ಭರತಾಚಾರ್ಯರಿಗೆ ಒಪ್ಪಿಸಿ ದನು. ಜನರು ಸಂಭ್ರಮದಿಂದ ಕೈ ಚಪ್ಪಾಳೆ ತಟ್ಟಿದರು. ಸಭೆಗೆ ಸಭೆಯೇ ಆ ಕಾರ್ಯವನ್ನೊಪ್ಪಿತು. ರಾಯನ ಕಾರ್ಯವನ್ನು ಕಂಡು ಮೆಚ್ಚದವರು ಆ ಸಭೆಯಲ್ಲಿರಲಿಲ್ಲ. ಆದರೂ ಎಲ್ಲರಿಗಿಂತ ಹೆಚ್ಚಾಗಿ ಆ ಕಾರ್ಯವನ್ನು ಒಪ್ಪಿಕೊಂಡು "ಭಲೆ ರಾಯ, ಭಲೆ" ಎಂದು ಒಂದು ಹೃದಯ ಅವನಿಗೆ ತನ್ನನ್ನು ಎರಡನೆಯ ಸಲ ಒಪ್ಪಿಸಿಕೊಂಡಿತು.

# ಅಧ್ಯಾಯ ಮೂರು

ಗೋಲ್ಕಂಡದಲ್ಲಿ ಸೆಟ್ಟರದೊಂದು ಸ್ವಂತಮನೆ ಇದೆ. ಅಲ್ಲಿ ಸೆಟ್ಟರದು ಒಂದು ಸಂಸಾರ ಯಾವಾಗಲೂ ಇರುತ್ತದೆ. ಒಬ್ಬ ಮನೆವಾರ್ತೆ ಸಂಸಾರ ದೊಡನೆ ಅಲ್ಲಿ ಯಾವಾಗಲೂ ಇರುತ್ತಾನೆ. ಅಲ್ಲಿನ ವ್ಯಾಪಾರ ವಾಣಿಜ್ಯ ರಾಜಕೀಯ ಎಲ್ಲವನ್ನೂ ಸಂಗ್ರಹಿಸಿ ಸೆಟ್ಟರಿಗೆ ವಾರಕ್ಕೆ ಒಂದು ಸಲ ಟಪ್ಪಾಲು ಬರೆಯುವುದು. ಗೋಲ್ಕಂಡದ ಮನೆಯನ್ನು ಸರಿಯಾಗಿಟ್ಟುಕೊಂಡು ಅಲ್ಲಿನ ವ್ಯಾಪಾರ ಸಾಪಾರ ನೋಡಿಕೊಳ್ಳುವುದು ಇದು ಅವನ ಕೆಲಸ. ಅಲ್ಲಿ ಅವರದು ಒಂದು ಅಂಗಡಿಯಿದೆ. ಅಂಗಡಿಯೂ ಮನೆವಾರ್ತೆಯ ಕೈಯಲ್ಲೇ ಇದೆ.

ಮನೆವಾರ್ತೆಗೆ ಸೆಟ್ಟರು ಬಂದಿರುವರು ಎಂಬ ಸುದ್ದಿ ಬಂತು. ಆತನಿಗೆ ಆಶ್ಚರ್ಯವಾಯಿತು. ಸೆಟ್ಟರು ಬರುವುದಕ್ಕೆ ಎರಡು ದಿನವಾದರೂ ಮುಂಚೆ ಟಪ್ಪಾಲು ಬರಬೇಕು. ಅವರಿಗೆ ಮಡಿ, ದೇವರಪೂಜೆ, ಊಟ ಇವುಗಳಿಗೆ ಯಾವಾಗಲೂ ಶ್ರದ್ಧೆಯಿಂದ ಅಣಿಮಾಡಿರಬೇಕು. ಈ ಸಲ ಟಪ್ಪಾಲು ಇಲ್ಲದೆ ಅವರು ಬಂದಿದ್ದಾರೆಯೆಂದರೆ ಅವನಿಗೆ ಏಕೋ ಅನುಮಾನವಾಯಿತು. ತನ್ನ ಮೇಲೆ ಯಾರಾದರೂ ಏನಾದರೂ ಇಲ್ಲದ ಸಲ್ಲದ ದೂರು ಬರೆದಿರು ವರೋ ? ಅಥವಾ ಸುಲ್ತಾನನೇನಾದರೂ ಹಜೂರು ಬರಬೇಕೆಂದು ಬರೆದಿರುವನೋ ? ಎರಡನೆಯದಾಗಿದ್ದರೆ ತನಗೆ ನೇರವಾಗಿ ತಿಳಿಯದಿದ್ದರೆ ಸುಳಿವಾದರೂ ಇರಬೇಕು. ಅದರಿಂದ, ಅವರು ಬಂದಿರುವುದು ತನಗಾಗಿಯೇ ಇರಬೇಕು ಎನ್ನಿಸಿ ಆತನಿಗೆ ಏಕೋ ದಿಗಿಲಾಯಿತು. ಏನಾದರೂ ಒಡೆಯರು ಬಂದಿರುವರು ಎಂದಮೇಲೆ ಹೋಗಿ ನೋಡಬೇಕಲ್ಲ. ಅವಸರವಸರವಾಗಿ ಬಂದು ಕಾಣಿಸಿಕೊಂಡನು. ಒಡೆಯರು ಸಂತೋಷವಾಗಿ ಮಾತನಾಡಿದರು. ಅವನಿಗೆ ಧೈರ್ಯವಾಯಿತು.

"ಇದೇನು, ಸುದ್ದಿ ಕೊಡದೇನೇ ಸ್ವಾಮಿ, ಬಂದುಬಿಟ್ಟದ್ದು ?" ಎಂದು ಮೆತ್ತಗೆ ವಿಚಾರಿಸಿದನು.

ಸೆಟ್ಟರು ನಕ್ಕು, "ಅಲ್ರೀ, ನಮಗೇನ್ರೀ ಕೆಲಸ ? ನೀವೆಲ್ಲ ದುಡಿದು ಹಾಕಿಬಿಡುತ್ತೀರಿ. ನಾವು ವಿಜಯನಗರ, ಗೋಲ್ಕಂಡ, ಬೀಜಾಪುರ, ಗೋವೆ,

ಗೋಕರ್ಣ, ಎಂದು ತಿರುಗಿಕೊಂಡಿರುವುದು ಅಷ್ಟೆ ತಾನೇ ?" ಎಂದುಬಿಟ್ಟು, ಒಂದು ಚಿಟಕೆ ನಸ್ಯ ಹಾಕಿಕೊಳ್ಳುತ್ತ, "ಏನೂ ಕೆಲಸ ಇಲ್ಲ. ಇವೊತ್ತು ರಾಜಧಾನಿಯಲ್ಲಿ ಇರುವುದಕ್ಕೆ ಇಷ್ಟವಿರಲಿಲ್ಲ. ಅದರಿಂದ ತರಾತುರಿಯಾಗಿ ಇಲ್ಲಿಗೆ ಬಂದುಬಿಟ್ಟೆ." ಎಂದರು.

"ಒಬ್ಬರೇ ?"

"ಹೆಂಗಸರನ್ನೂ ಕರೆದುಕೊಂಡು ಬರಬೇಕೆಂದೇ ಇದ್ದೆ. ಆದರೆ; ಈ ಸಲ ಬೇಗ ಬರಬೇಕಾಗಿತ್ತು. ಅವರಿಗೆ ಈ ಪ್ರಯಾಣದ ಆಯಾಸ ಹೆಚ್ಚಾಗುತ್ತದೆಯೆಂದು ಕರೆದುಕೊಂಡು ಬರಲಿಲ್ಲ. ಅದಿರಲಿ. ಸುಲ್ತಾನರು ಇಲ್ಲೇ ಇದ್ದಾರೋ ?"

"ಇದ್ದಾರಂತೆ. ವಿಚಾರಿಸಿದ್ದೆ. ಅವರು ಇನ್ನು ಎರಡು ಮೂರು ದಿನ ಬಿಟ್ಟುಕೊಂಡು ಬಿದರೆಗೆ ಹೋಗಿಬರುತ್ತಾರೆಂದು ವರ್ತಮಾನ."

"ಸಾಧ್ಯವಾದರೆ, ನಾಳೆಯ ದಿನ ಸುಲ್ತಾನರ ಭೇಟಿಯಾಗುತ್ತದೆ ಯೇನೋ ವಿಚಾರಿಸಿ ನೋಡಿ."

"ಅಪ್ಪಣೆ."

"ನಮ್ಮ ರಾಯಭಾರಿಗಳೂ ಇದ್ದಾರೋ ?"

"ಇದ್ದಾರೆ."

"ನಾಳಿದ್ದು ಅವರನ್ನು ನೋಡೋಣ."

"ಅಪ್ಪಣೆ."

"ಬುಧವಾರ ಸಂಜೆಗೆ ನಾವು ಹೊರಟುಬಿಡುತ್ತೇವೆ."

"ಅಪ್ಪಣೆ."

"ಇನ್ನು ನಾವು ಸ್ನಾನಕ್ಕೆ ಏಳೋಣವೋ ?"

"ಮಜ್ಜನವಾಗಲಿ. ಜಟ್ಟಿ ಬಂದಿದ್ದಾನೆ. ಎಲ್ಲಾ ಸಿದ್ಧವಾಗಿದೆ."

"ಸರಿ."

ಗೋಲ್ಕಂಡದ ಸುಲ್ತಾನರಿಗೆ ಆಶ್ಚರ್ಯ. ಗರ್ವಗಂಧಿ ವಿಜಯ ನಗರದ ಸೆಟ್ಟಿಯು ತಾನಾಗಿ ಬಂದಿರುವುದು ಎಂದರೆ ಸುಲ್ತಾನರು ನಂಬಲಾರರು. ಇರಲಿ. ಏನೋ ಬಂದಿದ್ದಾನೆ. ಇದೇ ಸಮಯ ಸಾಧಿಸಿ ತನ್ನ ಆಶೆಯನ್ನೂ ಈಡೇರಿಸಿಕೊಳ್ಳಬೇಕು ಎನ್ನಿಸಿತು. ಸುಲ್ತಾನರು ಸಿದ್ಧರಾಗಿದ್ದರು.

ಮಧ್ಯಾಹ್ನದ ಎರಡು ಘಂಟೆಯ ಹೊತ್ತಿನಲ್ಲಿ ಭೇಟಿಯು ನಡೆಯಿತು. ನಜರು ಕೊಟ್ಟು ಸೆಟ್ಟರು ಸುಲ್ತಾನರ ದರ್ಶನ ಮಾಡಿದರು. ಸುಲ್ತಾನರೂ ಆ ಮಾತು ಈ ಮಾತು ಆಡುತ್ತಾ "ಈಗ ತಾವು ಬಂದುದು ಬಹಳ ಒಳ್ಳೆಯ ದಾಯಿತು. ನಾವೇ ತಮಗೆ ಹೇಳಿಕಳುಹಿಸಬೇಕು ಎಂದಿದ್ದೆವು." ಎಂದರು.

ಆಡುವುದಕ್ಕೆ ಯಾವ ಮಾತೂ ಇಲ್ಲದೆ ಒದ್ದಾಡುತ್ತಿದ್ದ ಸೆಟ್ಟರು ಒಂದು ವಿಷಯ ಸಿಕ್ಕಿತಲ್ಲಾ ಎಂದು ಸಂತೋಷಪಟ್ಟುಕೊಂಡು "ಜಹಾಂಪನಾ, ನಿಜ ಹೇಳಬೇಕು ಎಂದರೆ, ಈಗ ನಾಲ್ಕು ಐದು ದಿನದಿಂದ ತಾವು ಎದುರಿಗೆ ಕಣ್ಣಿಗೆ ಕಟ್ಟಿದಹಾಗಾಗಿದೆ. ಏನು ಮಾಡುತ್ತಿದ್ದರೂ ತಮ್ಮ ರೂಪು ಎದುರಿಗೆ ನಿಂತಿರುವಹಾಗೆ ಆಗಿದೆ. ಎಚ್ಚರದಲ್ಲಿಯೂ ತಮ್ಮೊಡನೆ ಮಾತನಾಡುತ್ತಿದ್ದ ಹಾಗೆ; ಕನಸಿನಲ್ಲಂತೂ ತಾವೇ ತಾವು. ಹೀಗಾಗಿ ಏನೋ ಎಂತೋ ಎಂದು ನಿಲ್ಲಲಾರದೆ ಹೊರಟು ಬಂದೆ. ವಾಸ್ತವ್ಯವಾಗಿಯೂ ಈಗ ಯಾವ ಕೆಲಸವೂ ಇಲ್ಲದೆ ಸ್ವಾಮಿಯನ್ನು ಆಯಾಸಪಡಿಸಿದ್ದಕ್ಕೆ ನ್ಯಾಯವಾಗಿ ನನಗೆ ಶಿಕ್ಷೆಯೇ ಆಗಬೇಕು. ಇದ್ದ ಸಂಗತಿ ಸನ್ನಿಧಾನದಲ್ಲಿ ಅರಿಕೆ ಮಾಡಿದ್ದೇನೆ. ಮನ್ನಿಸ ಬೇಕು, ಮಹಾಸ್ವಾಮಿ."

ಸುಲ್ತಾನರಿಗೆ ಆ ಸ್ತುತಿವಾಕ್ಯ ಮನಸ್ಸಿಗೆ ಹಿಡಿಯಿತು ತನಗೆ ವಿಜಯ ನಗರದ ಸುದ್ದಿಯೇ ಮನಸ್ಸಿನಲ್ಲಿದ್ದರೂ ಸೆಟ್ಟಿಯಿಂದ ತನ್ನ ಕೆಲಸವಾದೀತು ಎಂದು ಯೋಚನೆ ಬಂದಿರಲಿಲ್ಲ. ಸೆಟ್ಟಿ ಹೇಳುವುದು ಸತ್ಯವಿರಬಹುದು ಎಂದು ನಂಬಿ, ಬಹುಶಃ ಈ ಮೂಲವಾಗಿ ತನ್ನ ಕಾರ್ಯವಾದೀತು ಎಂಬ ನಂಬಿಕೆಯೂ ಹುಟ್ಟಿ ಸುಲ್ತಾನನು ಕಾರ್ಯಪರನಾಗಿ ಸರಸಿಯೂ ಸುಲಭನೂ ಆಗಿ ಸೆಟ್ಟರ ಬಳಿ ತನ್ನ ಹೃದಯವನ್ನು ಬಿಚ್ಚಿ ಹೇಳಲು ಸಿದ್ಧವಾದನು: "ಸೆಟ್ಟಿ ಸಾಹೆಬ್, ನಮ್ಮ ಅಂತರಂಗದ ಮಿತ್ರರಲ್ಲಿ ತಾವೂ ಒಬ್ಬರು ಎನ್ನುವುದು ತಮಗೇ ಗೊತ್ತಿದೆ. ಈಗ ಸುಮಾರು ಒಂದು ವರುಷದಿಂದ ನಮಗೆ ಒಂದು ಮನೋವ್ಯಾಧಿ ಬಂದಿದೆ. ಅದನ್ನು ನಿವಾರಣೆ ಮಾಡಿಕೊಳ್ಳದಿದ್ದರೆ ಅದು ನಮ್ಮನ್ನೇ ತಿಂದುಬಿಡಬಹುದು. ಈ ವಿಷಯ ತಮ್ಮಲ್ಲಿ ಹೇಳಿದರೆ ತಾವು ಅದನ್ನು ಗೋಪ್ಯವಾಗಿ ಇಡುವಿರಾ? ಕೆಲಸ ಮಾಡಿಕೊಡುವಿರಾ?"

ಸೆಟ್ಟರಿಗೆ ಆನಂದವಾಯಿತು. ಗೋಲ್ಕಂಡದ ಸುಲ್ತಾನರ ರಹಸ್ಯ ತನಗೆ ತಿಳಿದರೆ, ತಾನು ಅವರ ಅಂತರಂಗದ ಮಿತ್ರನಾದರೆ, ವಜ್ರದ ಗಣಿಯೇ ತನ್ನ

ಕೈಗೆ ಬಂದರೂ ಬರಬಹುದು ಎನ್ನಿಸಿತು. ಸುಲ್ತಾನನೂ ಅದಕ್ಕೆ ಸರಿಯಾಗಿ "ಸೆಟ್ಟಿ ಸಾಹೆಬ್, ಈ ಕೆಲಸ ಸಾಧ್ಯವಾದರೆ ನಮ್ಮ ವಜ್ರದ ಗಣಿಯನ್ನೇ ಬೇಕಾದರೂ ತಮಗೆ ಕೊಡುವುದಕ್ಕೆ ನನಗೆ ಇಷ್ಟ. ಅದು ಬರಿಯ ಮನೋರೋಗ ಮಾತ್ರವಲ್ಲ. ನಮ್ಮ ಮಾನದ ಪ್ರಶ್ನೆಯೂ ಸೇರಿದೆ." ಎಂದನು.

ಸೆಟ್ಟರು ಕಿವಿಯವರೆಗೂ ಬಾಯಿ ಮಾಡಿಕೊಂಡು, "ಜಹಾಂಪನಾ, ಅಪ್ಪಣೆಯಾಗಲಿ. ಯಜಮಾನ್ ವೀರಪ್ಪಸೆಟ್ಟಿಯು ಬೇಕಾದುದಾಗಲಿ, ತಮ್ಮ ಅಪ್ಪಣೆಯನ್ನು ನೆರವೇರಿಸುವನು. ಸುಲ್ತಾನರ ಮನೋರೋಗ, ಸುಲ್ತಾನರ ಅಪಮಾನ, ಕಳೆಯುವುದು ನನ್ನಿಂದಾದರೆ ಇನ್ನು ಅದಕ್ಕಿಂತ ನನಗೇನಾಗಬೇಕು? ಇದು ಪರಮೇಶ್ವರನೇ ದಯಪಾಲಿಸಿರುವ ಒಂದು ವರ ಎಂದು ಭಾವಿಸುತ್ತೇನೆ. ಮಹಾಸ್ವಾಮಿ. ಅಪ್ಪಣೆಯಾಗಲಿ. ರಹಸ್ಯ ಎಂದು ಅಪ್ಪಣೆಯಾಯಿತು. ಇದೋ ನಮ್ಮ ದೇವರ ಮೇಲಿನ ಆಣೆ ಇಡುತ್ತೇನೆ. ಅದನ್ನು ನನ್ನ ಹೆಂಗುಸರಿಗೂ ತಿಳಿಸುವುದಿಲ್ಲ. ಜೀವರತ್ನಗಳನ್ನು ಕಾಪಾಡುವಹಾಗೆ ಕಾಪಾಡುತ್ತೇನೆ."

"ನಿಜವೇ?"

"ನಿಜ ಮಹಾಸ್ವಾಮಿ."

"ನಾವು ಹೇಳಬೇಕೆಂದಿರುವ ಮಾತು ಬಹು ಗೋಪ್ಯವಾದುದು. ಇದುವರೆಗೆ ನಾವು ಯಾರಲ್ಲಿಯೂ ಹೇಳಿಲ್ಲ. ಆದರೆ ತಮ್ಮ ಮೇಲೆ ನಮಗೆ ವಿಶ್ವಾಸವಿದೆ. ಹೇಳುತ್ತೇವೆ. ಇಲ್ಲಿ ಬನ್ನಿ", ಎಂದು ಅವರನ್ನು ತಮ್ಮ ಮಗ್ಗುಲಲ್ಲಿ ಕುಳ್ಳಿರಿಸಿಕೊಂಡು ಸುಲ್ತಾನರು ಪಿಸುಮಾತಿನಲ್ಲಿ ಹೇಳಿದರು: "ಸೆಟ್ಟಿ ಸಾಹೆಬ್, ತಾವು ಬಹಳ ಬುದ್ಧಿವಂತರು. ನಮ್ಮ ಮನಸ್ಸಿನಲ್ಲಿ ಏನಿರಬಹುದು ಹೇಳಿ. ನೋಡೋಣ."

"ಜಹಾಂಪನಾ, ಅರಸುಗಳ ಸರಸ ಬೆಂಕಿಯೊಡನೆ ಆಡಿದಹಾಗೆ. ಆದರಿಂದ ತಾವು ಹೇಳಿದಂತೆ ಕೇಳುವುದು ಸರಿ. ಸಮುದ್ರದಲ್ಲಿ ಮುಳುಗಿದರೆ ಮಹಾಸ್ವಾಮಿ, ಅದೃಷ್ಟವಿದ್ದರೆ ಮುತ್ತು, ಇಲ್ಲದಿದ್ದರೆ ಶಂಖಕಪ್ಪೆಚಿಪ್ಪು, ಹಾಗೆ. ಅರಸರ ಅಂತರಂಗದಲ್ಲಿ, ಮಹಾಸ್ವಾಮಿ, ಅದೃಷ್ಟವಶಾತ್ ಭಾರಿ ಭಾರಿ ಯೋಚನೆ ಬರುತ್ತದೆ. ಇಲ್ಲದಿದ್ದರೆ, ತಾವು ಕೋಪ ಮಾಡಿಕೊಳ್ಳಬಾರದು. ಹೆಣ್ಣು, ಹೊನ್ನು, ಮಣ್ಣು, ಮೂರಲ್ಲದೆ ಇನ್ನೇನೂ ಇರುವುದಿಲ್ಲ."

"ಎಲೆಲಾ ಸೆಟ್ಟಿ, ಬುದ್ಧಿ ಎಂದರೆ ಇದು ಬುದ್ಧಿ, ನಿಜ. ಒಂದು ಹೆಣ್ಣಿನ ವಿಚಾರ. ಹೇಳಲೇ ?"

"ಮಹಾಸ್ವಾಮಿ, ತಾವು ಒಂದುಮಾತು ಮರೆಯಕೂಡದು. ತಾವು ಹೆಣ್ಣು ಎನ್ನುತ್ತಲೇ ತಿಳಿದು ಹೋಯಿತು. ಹಿಂದೆ ಚಿನ್ನಾಸಾನಿಯನ್ನು ಸಂಗೀತಕ್ಕಾಗಿ ಇಲ್ಲಿ ಕರೆಯಕಳುಹಿದಿರಿ. ಅವಳು ಆಗುವುದಿಲ್ಲ ಎಂದಳು. ತಾವು ಚಕ್ರವರ್ತಿಯವರಿಗೇ ಬರೆದಿದ್ದಿರಿ. ಆಗಲೂ ಆಗಲಿಲ್ಲ. ಈಗ ನೋಡಿ, ಮಹಾಸ್ವಾಮಿ, ನಮ್ಮ ಜನ ಬಹಳಕೆಟ್ಟದು. ದೇವರು ನಮ್ಮನ್ನೂ ನಿಮ್ಮನ್ನೂ ಒಂದೇ ಆಗಿ ಸೃಷ್ಟಿಮಾಡಿದ್ದರೂ ನಮ್ಮ ನಿಮ್ಮ ಜಾತಿ ಬೇರೆ ಬೇರೆ ಎಂದಾಗಿದೆ. ನಮ್ಮ ಜಾತಿಯವರು ನಿಮ್ಮ ಜಾತಿಯವರಿಗೆ ಹೆಣ್ಣು ಕೊಡುವುದಿಲ್ಲ. ನಿಮ್ಮಿಂದ ಹೆಣ್ಣು ತರುವುದಿಲ್ಲ. ಈ ಕೆಲಸಕ್ಕೆ ನಾವು ಪ್ರಯತ್ನ ಪಟ್ಟರೆ ನಮ್ಮ ಹೆಸರು ಕೆಡುತ್ತದೆ. ನಮ್ಮ ಮನೆ ಬಾಗಿಲು ಎಲ್ಲಾ ಇರೋದು ವಿಜಯನಗರದಲ್ಲಿ. ನಮ್ಮ ವ್ಯಾಪಾರದಲ್ಲಿ ಒಂದು ಭಾಗ ಇಲ್ಲಿ. ಅಲ್ಲಿ ಚಕ್ರವರ್ತಿಗಳಿಗೆ ಕೋಪ ಬಂದರೆ ನಮ್ಮ ಸರ್ವಸ್ವವೂ ಹೋಯಿತು. ಇಲ್ಲಿ ತಮಗೆ ಕೋಪಬಂದರೆ ನಮ್ಮ ವ್ಯಾಪಾರ ಹೋಯಿತು. ಇಂತಹ ಸಂದರ್ಭದಲ್ಲಿ ನಾವು ಏನು ಮಾಡಬೇಕು ?"

ಸುಲ್ತಾನನು ನಗುತ್ತಾ ಹೇಳಿದನು : "ಸೆಟ್ಟಿ ಸಾಹೆಬ್, ನಾವು ಕುಲಸ್ತ್ರೀಯರನ್ನು ಕೆಡಿಸುವುದಿಲ್ಲ. ಅದೆಲ್ಲ ನಿಮ್ಮ ಚಕ್ರವರ್ತಿಗಳದು. ನಮ್ಮ ರಾಜ್ಯದಲ್ಲಿ ಅಲ್ಲಾ ಅಲ್ಲದೆ ಇನ್ನು ಯಾರೂ ನಮಗೆ ಅಡ್ಡಿಬರುವಹಾಗಿಲ್ಲ. ಅಂಥಾದ್ದರಲ್ಲಿ ನಮ್ಮಿಂದ ಯಾವಳ ಮಾನವೂ ಕೆಟ್ಟಿಲ್ಲ. ನಿಮ್ಮ ರಾಜ್ಯದಲ್ಲಿ ಹಾಗೆ ಇದೆ ಎಂದು ಹೇಳಬಲ್ಲಿರಾ ? ಜೊತೆಗೆ ಯೋಚನೆ ಮಾಡಿ. ನಾವು ಅಲ್ಲಾ ಹೆಸರು ಹೇಳಿ ಮಜೀದ್‌ನಲ್ಲಿ ನಮಾಜ್ ಮಾಡಿದ ಮಾತ್ರಕ್ಕೆ ನಾವು ನಿಮ್ಮ ಜಾತಿಯಲ್ಲವೆ ? ನಾವು ಇಲ್ಲಿ ಹುಟ್ಟಿ ಇಲ್ಲಿ ಬೆಳೆಯಲಿಲ್ಲವೆ ? ನಮ್ಮ ಗೋರಿ ಕೂಡಾ ಇಲ್ಲೇ ಆಗುವಾಗ, ನಮ್ಮನ್ನು ದೂರ ದೂರ ಎಂದು ದೂರಮಾಡು ವುದೊಳ್ಳೆಯದೋ ? ಹತ್ತಿರ ತೆಗೆದುಕೊಳ್ಳುವುದು ಒಳ್ಳೆಯದೋ ? ಇದರ ಮೇಲೆ ಅಲ್ಲಾನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನನಗೆ ಹೆಣ್ಣಿನ ಮೈಬೇಡ : ನನಗೆ ಅವಳ ಮನಸ್ಸು ಬೇಕು. ಅದರಿಂದ ಬರಿಯ ಗಾನಕ್ಕೆ ಮೈಮರೆತು ಹೋಗುವವನು ನಾನು. ಅವಳ ಸಂಗೀತ ಕೇಳಬೇಕು. ಅದಕ್ಕೆ ನಾನು ಕೇಳುತ್ತಿದ್ದೇನೆ. ನಾನು ಅವಳನ್ನು ನೋಡಿದ್ದೇನೆ. ನಿಜವಾಗಿಯೂ ಅವಳು

ರೂಪವತಿ. ಆದರೂ ಬರಿಯ ರೂಪವತಿಯರೇ ಬೇಕೆಂದರೆ ಅರಬದಿಂದ ಕುದುರೆ ತರಿಸುವ ಹಾಗೆ ಜಾರ್ಜಿಯ, ಜೂದಿಯ, ಇರ್ರಾ, ಇರಾಕ್, ಕಂದಹಾರ್, ಕಾಶ್ಮೀರ್‌ಗಳಿಂದ ಸುಂದರಿಯರನ್ನು ತರಿಸಲಾರೆನೆ? ಸೆಟ್ಟಿ ಸಾಹೆಬ್, ನಮ್ಮ ದರಬಾರಿನಲ್ಲಿ ಚಿತ್ರಗಾರರಿದ್ದಾರೆ. ಗುಲಾಬ್ ಬೇಕು ಎಂದರೆ ನಿಜವಾದ ಗುಲಾಬ್‌ನ ತಲೆಯ ಮೇಲೆ ಹೊಡೆದ ಹಾಗೆ ಇರುವ ಚಿತ್ರ ಬರೆಸಬಲ್ಲೆ; ಆದರೆ ನೂರು ಜನ ಚಿತ್ರಗಾರರು, ನಾವು ಸಾವಿರಜನ ಸುಲ್ತಾನರು ಸೇರಿದರೂ ಅಲ್ಲಾ ಅದರೊಳಗಿಟ್ಟ ಪರಿಮಳ ಇಡಲಾರೆವು. ಹಾಗೆ, ನಿಮ್ಮ ಚಿನ್ನಾಸಾನಿಗಿಂತ ರೂಪವತಿಯರನ್ನು ತರಿಸಬಹುದು. ಆದರೆ ಆದಿವ್ಯಕಂಠ. ಹಾಯ್ ಅಲ್ಲಾ, ಹಾಯ್, ನಮ್ಮ ರಾಜ್ಯ ಕೊಟ್ಟುಬಿಡಬಹುದು. ಸೆಟ್ಟಿ ಸಾಹೆಬ್, ಅವಳನ್ನು ಇಲ್ಲಿಗೆ ಕರೆಸಿ, ಈ ದರಬಾರ್‌ನಲ್ಲಿ ಒಂದುಸಲ ಹಾಡಿಸಿ. ಅವಳಿಗೆ ಒಂದು ಲಕ್ಷ ತಮಗೆ ಒಂದು ಲಕ್ಷ ಕೊಡಿಸುತ್ತೇನೆ. ಅವಳ ತಲೆಯ ಒಂದು ಕೂದಲೂ ಸಹ ಅಲ್ಲಾಡದಂತೆ ನೋಡಿಕೊಳ್ಳುತ್ತೇನೆ. ಇದಕ್ಕೇನು ಹೇಳುತ್ತೀರಿ?"

"ಜಹಾಪನಾ, ಅವಳು ತಲೆತಲಾಂತರದಿಂದ ಅರಮನೆ ಸೂರೆ ಹೊಡೆದಿರುವ ಸೂಳೆ. ಅವಳ ಐಶ್ವರ್ಯ ಇಷ್ಟು ಎಂದು ಲೆಕ್ಕವಿಲ್ಲ. ಅವಳ ಐಶ್ವರ್ಯದ ಮುಂದೆ ನಮ್ಮ ಐಶ್ವರ್ಯವಲ್ಲ. ಪ್ರಭು ಅವಳನ್ನು ಹಣದಿಂದ ಹಿಡಿಯುವುದಕ್ಕೆ ಸಾಧ್ಯವಿಲ್ಲ. ಹೊಡೆದುಕೊಂಡು ಬರೋಣ ಎಂದರೆ, ಚಕ್ರವರ್ತಿಗಳಿರಲಿ, ಅವರ ಸೈನ್ಯ ಇರಲಿ, ರಾಜಧಾನಿಗೆ ರಾಜಧಾನಿಯೇ ತಿರುಗಿಬಿದ್ದರೇನು ಗತಿ? ಆಗದ ಕೆಲಸ ಹೇಳುತ್ತಿದ್ದೀರಿ. ನಾನೇ ತಮಗೆ ಒಂದು ಲಕ್ಷ ರೂಪಾಯಿ ಕಾಣಿಕೆ ಮಾಡುತ್ತೇನೆ. ನನ್ನನ್ನು ಬಿಟ್ಟುಬಿಡಿ."

"ಸೆಟ್ಟಿ ಸಾಹೆಬ್, ಐದು ಲಕ್ಷ ಅವಳ ಸಂಗೀತ ಕೇಳಿಸುವುದಕ್ಕೆ. ಅವಳು ಇಲ್ಲೇ ಇರುವಂತೆ ಮಾಡಿ ಕಳುಹಿಸಿಬಿಡಿ. ಅವಳಿಗೆ ಕೊಡುವುದು ಬಿಡುವುದು ಇರಲಿ. ತಮಗೆ ಒಂದು ವರ್ಷ ನಮ್ಮ ವಜ್ರದ ಗಣಿ ತಾವು ಹೇಳಿದ ಗುತ್ತಿಗೆಗೆ ಕೊಟ್ಟುಬಿಡುತ್ತೇನೆ. ಇನ್ನು ಬೇರೆ ಮಾತು ಕೂಡದು. ತಾವು ಒಪ್ಪಲೇ ಬೇಕು. ಇನ್ನು ಬರುವ ತಿಂಗಳು ಇದೇ ದಿನ ತಾವು ಇಲ್ಲಿಗೆ ಬಂದು ಅಥವಾ ತಮ್ಮ ದಿವಾನರಿಂದ ನಮ್ಮ ಕೆಲಸ ಆಗಿದೆ ಎಂದು ಸುದ್ದಿ ಕಳುಹಿಸಬೇಕು."

ಸೆಟ್ಟರು ಏನೋ ಹೇಳಹೋದರು. ಸುಲ್ತಾನನು ಬಾಯಿ ಮುಚ್ಚಿ

ಬಿಟ್ಟನು. ಕೈಚಪ್ಪಾಳೆ ತಟ್ಟಿದನು. ಆಳು ಬಂದನು. ಅವನನ್ನು ಕರೆದು ಕಿವಿಯಲ್ಲಿ ಏನೋ ಹೇಳಿದನು. ಅವನು ಹೋಗಿ ಒಂದು ತಟ್ಟೆಯಲ್ಲಿ ಒಂದು ಕಂಠೀಹಾರ, ಒಂದು ಶಾಲುಜೋಡಿ, ಒಂದು ವೀಳೆಯ ತಂದನು. ಸುಲ್ತಾನನು ತನ್ನ ಕೈಯಿಂದಲೇ ಸೆಟ್ಟರಿಗೆ ಕಂಠೀಹಾರ ಹಾಕಿ, ಶಾಲು ಜೋಡಿ ಹೊದಿಸಿ, ವೀಳೆಯ ಕೊಟ್ಟು ಕಳುಹಿಸಿದನು.

ಮರುದಿನ ಸೆಟ್ಟರು ವಿಜಯನಗರದ ರಾಯಭಾರಿಯನ್ನು ಕಾಣಲು ಹೋದರು. ರಾಯಭಾರಿಯು ಆತನನ್ನು ಬಹು ಗೌರವದಿಂದ ಬರಮಾಡಿಕೊಂಡು, "ಏನು ಸೆಟ್ಟರ ಸವಾರಿ, ಸುದ್ದಿ ಕೂಡ ಕೊಡದೆ ದಯಮಾಡಿಸಿದ್ದು? ರಾಜಧಾನಿಯ ಸುದ್ದಿ ಏನು? ಚಕ್ರವರ್ತಿಗಳನ್ನು ಕಂಡಿದ್ದಿರಾ?" ಎಂದು ಬಹು ವಿಶ್ವಾಸದಿಂದ ಮಾತನಾಡಿಸಿದನು. ಚಿನ್ನದ ತಟ್ಟೆಯಲ್ಲಿ ಬಾಳೆಯ ಹಣ್ಣು, ಚಿನ್ನದ ಬಟ್ಟಲುಗಳಲ್ಲಿ ಹಾಲು ಬಂದವು. ದ್ರಾಕ್ಷಿಯ ಗೊಂಚಲು, ಮಾದಳದ ಹಣ್ಣಿನ ಚೂರುಗಳು ಮುತ್ತಿನಂದು ತಟ್ಟೆಯಲ್ಲಿ ಮಗ್ಗುಲಲ್ಲಿ ಕುಳಿತವು. ಇಬ್ಬರೂ ಹಣ್ಣನ್ನು ತಿನ್ನುತ್ತಾ ಮಾತನಾಡಿದರು.

"ಇಲ್ಲಿ ಏನೋ ಒಂದು ತುರ್ತು ಕಾರ್ಯ ಇತ್ತು ಬುದ್ಧಿ. ಅದರಿಂದ ಹೇಳದೆ ಕೇಳದೆ ಬಂದು ಬಿಟ್ಟೆ"

"ಮೊನ್ನೆ ಚಿನ್ನಾಸಾನಿ ಸಂಗೀತ, ಗೋಪಾಲರಾಯರಿಗೆ ಸನ್ಮಾನ, ತಾವೇ ಅಧ್ಯಕ್ಷ ರಾಗಬೇಕಾಗಿದ್ದುದು. ಇದೆಲ್ಲ ಬಿಟ್ಟು ಬಂದರಲ್ಲ!" ಸೆಟ್ಟರು ಒಂದು ಗಳಿಗೆ ಸುಮ್ಮನಿದ್ದು ಹೇಳಿದರು: "ಬುದ್ಧಿ, ಬೇರು ಬಲ್ಲವರಿಗೆ ಎಲೆ ತಿಳಿಯದೆ? ಮುಚ್ಚಿಟ್ಟರೂ ತಮಗೆ ತಿಳಿಯದೇ ಇರುವುದೇನು? ಅವಳಿಗೂ ರಾಯರಿಗೂ ಇರುವ ಸಂಬಂಧ ಗೊತ್ತಲ್ಲಾ! ವಿನೋದ ಮಾಡೋಣ ಎಂದು ಅವಳ ಸಂಗೀತ ಇಡಿ ಅವೊತ್ತು ಎಂದೆ. ಇನ್ನೂರೈವತ್ತು ರೂಪಾಯಿ ನನ್ನ ಚಂದಾ ಕೊಟ್ಟು ಬಿಟ್ಟೆ. ಅವಳು ಅವೊತ್ತಿನ ಸಂಗೀತವನ್ನು ಒಪ್ಪಿಕೊಂಡು ಎರಡು ಸಾವಿರದ ಐನೂರು ರೂಪಾಯಿ ಚಂದಾ ಕೊಟ್ಟುಬಿಟ್ಟಳು. ನಾವೆಲ್ಲ ಊರ ಸೆಟ್ಟರು, ಯಜಮಾನರು ಎನ್ನಿಸಿಕೊಂಡವರು. ನಾವು ಏನು ಮಾಡಬೇಕು? ಯತ್ನವಿಲ್ಲದೆ ಬಂತು. ನಾವು ಚಂದಾಪಟ್ಟಿ ಕಳುಹಿಸಲೇ ಇಲ್ಲ. ನಾವು ನಾವೇ ಏನೋ ಬೇಕಾದ್ದೆಲ್ಲ ಮಾಡಿದೆವು. ಆಗಿಹೋಯಿತು. ಆದರೆ ನಾನು ಕೊಟ್ಟ ಚಂದಾಕ್ಕಿಂತ ಹತ್ತುಪಟ್ಟು ಚಂದಾ ಕೊಟ್ಟಿರುವವಳು ಎದುರಿ

ಗಿರುವಾಗ, ನಾನು ಹೇಗೆ, ಬುದ್ಧಿ, ಅಧ್ಯಕ್ಷನಾಗಿ ಕುಳಿತುಕೊಳ್ಳುವುದು? ಅದಕ್ಕಾಗಿ ತಲೆತಪ್ಪಿಸಿಕೊಂಡು ಇಲ್ಲಿಗೆ ಬಂದುಬಿಟ್ಟೆ. ಇಲ್ಲಿ ಬಂದ ಮೇಲೆ ತಮ್ಮನ್ನೂ, ಸುಲ್ತಾನರನ್ನೂ ನೋಡದಿದ್ದರೆ ಹೇಗೆ ಎಂದು ನೋಡಿದೆ. ಸುಲ್ತಾನರು ವಜ್ರದ ಗಣಿ ಗುತ್ತಿಗೆಗೆ ತಕೋ ಎನ್ನುತ್ತಿದ್ದಾರೆ. ನನಗೆ ಪ್ರಾಣಕ್ಕೆ ಬಂದಿದೆ."

"ನವರತ್ನದ ವ್ಯಾಪಾರಗಳೆಲ್ಲಾ ತಮ್ಮ ಕೈಯ್ಯಲ್ಲಿಯೇ ಇರುವುದು. ತೆಗೆದುಕೊಳ್ಳಿ ನಮಗೊಂದು ಲಾಭ ಆದ ಹಾಗೇ ಆಯಿತು. ಗೋಲ್ಕೊಂಡದಲ್ಲಿ ನಮ್ಮವರದು ಒಂದು ದಳ ಇಡುವುದಕ್ಕಿಂತ ನಮ್ಮ ರಾಜಧಾನಿಯ ಭಾರಿಯ ವರ್ತಕರು, ಚಕ್ರವರ್ತಿಗಳ ಪರಮಾಪ್ತರು, ತಾವು ಇಲ್ಲಿದ್ದರೆ, ಒಂದು ಸಾರಿ ವಿಜಯನಗರ ಇಲ್ಲಿದ್ದು ಗೋಲ್ಕೊಂಡ ಶತ್ರುರಾಜ್ಯವಲ್ಲ, ಮಿತ್ರರಾಜ್ಯ ಎನ್ನು ವಂತಾಯಿತು. ವಿಜಯನಗರ ರಾಜ್ಯಕ್ಕೇ ತಾವು ಪರವೋಪಕಾರ ಮಾಡಿ ದಂತಾಗುತ್ತದೆ"

"ಏನು ಬುದ್ಧಿ, ಸುಲ್ತಾನರು ವಜ್ರದ ಗಣಿ ಗುತ್ತಿಗೆ ಕೊಡಬೇಕಾದರೆ ಸುಮ್ಮನೆ ಕೊಡುತ್ತಾರೆಯೆ? ಮಾರಿ ಒಲಿಯ ಬೇಕಾಗಿದ್ದರೆ ಕೋಣನನ್ನು ಕಡಿದರಲ್ಲವೆ? ಸುಮ್ಮನೆ ಒಲಿದೀತೆ?

"ಯಾವ ಕೋಣ ಬೇಕಂತೆ ಈ ಸುಲ್ತಾನಮಾರಿಗೆ?"

"ನಾನೂ ಹೇಳಿಯೇ ಬಂದಿದ್ದೇನೆ ಎನ್ನಿ. ನಾವು ಹಿಂದೊಗಳು. ಏನಿ ದ್ದರೂ ಹಣ್ಣುಕಾಯಿ ಕೇಳಬೇಕೇ ವಿನಾ ಕುರಿಕೋಳಿ ಕೇಳಬೇಡ ಮಾರಿ," ಎಂದು ಹೇಳಿದ್ದೇನೆ. "ಏನೋ ಬುದ್ಧಿ, ದೊಡ್ಡವರ ಸಹವಾಸ ಕಷ್ಟ."

"ನೋಡಿ, ಸೆಟ್ಟರೆ, ನಮ್ಮೊಡನೆ ಹೇಳಿದರೆ ನಾವೇನಾದರೂ ಮಾಡ ಬಹುದು. ಸುಮ್ಮನೆ ಹಣ್ಣು ಕಾಯಿ. ಕುರಿ ಕೋಳಿ ಎಂದರೆ ನಾವೇನು ಮಾಡಲಾದೀತು?"

"ವಿಜಯನಗರದ ಉಪ್ಪು ತಿಂದು ಬದುಕಿದವರು ನಾವು. ತುರಕರವನು ಹೇಳಿದ ಎಂದು ನಾವು ಕುಣಿಯುವುದಕ್ಕೆ ಆದೀತೆ? ಇರಲಿ. ಅಡುಗೆಯೆಲ್ಲ ನಾವು ಮಾಡಿ ಒಗ್ಗರಣೆ ಚೊಯ್ ಎನ್ನಿಸುವುದಕ್ಕೆ ತಮ್ಮನ್ನು ಕರೆಯಬೇಕು. ಇರಲಿ. ಈಗ ಸದ್ಯಕ್ಕೆ ಅಪ್ಪಣೆಯನ್ನು ಕೊಡಿ."

ಸೆಟ್ಟರು ಗೋಲ್ಕೊಂಡಕ್ಕೆ ಹೋದಂತೆಯೇ ಹಠಾತ್ತಾಗಿ ರಾಜಧಾನಿಗೂ

ಬಂದರು. ದಾರಿಯುದ್ದಕ್ಕೂ ಅವರಿಗೆ ಎಂದೂ ಇಲ್ಲದ ಆಯಾಸ. ಬರುತ್ತಿದ್ದವರೇ ಜಟ್ಟಿಗೆ ಹೇಳಿಕಳುಹಿಸಿ ಮಲಗುವ ಮನೆಗೆ ಹೊರಟುಹೋದರು. ಗೌರಮ್ಮನು ಬಂದು ಸುದ್ದಿ ಕೊಡದೆ ಬಂದರೆಂದು ಆಶ್ಚರ್ಯಪಡುತ್ತಾ ಆಳನ್ನು ಕರೆದು ಹಾಲು ಹಣ್ಣು ತರುವಂತೆ ಹೇಳಿ ತಾವು ಹೋಗಿ, ಹಾಸುಗೆಯ ಮೇಲೆ ಮಲಗಿದ್ದ ಗಂಡನ ಮಗ್ಗುಲಲ್ಲಿ ಮೈಯೊತ್ತುತ್ತಾ ಕುಳಿತರು.

ಸೆಟ್ಟರು ಸಹಜವಾಗಿ "ಏನು ವಿಶೇಷ?" ಎಂದರು. ಗೌರಮ್ಮನವರೂ ಸಹಜವಾದ ಆನಂದದಿಂದ ಸನ್ಮಾನ ಸಭೆಯನ್ನು ಕುರಿತು ರತಿರತಿಯಾಗಿ, ವರ್ಣಿಸಿದರು. "ನನಗೇನೋ, ನೀವು ಸಾವಿರ ಹೇಳಿ, ನೀವು ಇರಬೇಕಾಗಿತ್ತು. ಅಂಥ ಸಭೆಗಳಲ್ಲಿ ನೀವಲ್ಲದೆ ಇನ್ನು ಯಾರು ಅಧ್ಯಕ್ಷರಾದರೂ ಕಳೆಯೇ ಇರುವುದಿಲ್ಲ." ಎಂದಾಗ ಹೆಚ್ಚು ಕಡಿಮೆ ನೋಡಗಳವರೆಗೂ ಏರಿದ ಮನಸ್ಸು, ಚಿನ್ನಾಸಾನಿಯ ಸಂಗೀತವನ್ನು ವರ್ಣಿಸಿದಾಗ ಹೂ ಹೂ ಎಂದು ಸಮಾಧಾನವಾಗಿದ್ದು ಗೋಪಾಲರಾಯನು ತನಗೆ ಕೊಟ್ಟ ಥೋಡಾವನ್ನು ಭರತಾಚಾರ್ಯರಿಗೆ ಒಪ್ಪಿಸಿದ, ಆ ಮಾತು ಆಡಿದ, ಈಮಾತು ಆಡಿದ, ಎಂದು ಹೇಳುತ್ತಿದ್ದ ಹಾಗೆಯೇ ಥಟ್ಟನೆ ಕೆಳಕ್ಕೆ ಬಿದ್ದುಹೋಯಿತು. ಇನ್ನೊಂದು ಎರಡು ಮಾತು ಕೇಳುವುದರೊಳಗಾಗಿ ಸೆಟ್ಟರು ಕೋಪಪರವಶರಾಗಿ ಹೆಂಡತಿಯ ಕೈತೆಗೆದು ಅತ್ತ ಎಸೆದು, "ಅಮ್ಮಣ್ಣಿಯವರು ನಾಟಕದವರನ್ನು ಹೊಗಳುವುದು ಹೆಚ್ಚಾಗಿ ಹೋಯಿತು.: ಥತ್!" ಎಂದು ದುರುಗುಟ್ಟಿಕೊಂಡು ಹೊರಟುಹೋದರು. ಹಾಲು ಹಣ್ಣು ಅನಾಥವಾಗಿ ಕಾಲುಮಣೆಯ ಮೇಲೆ ಕುಳಿತಿತ್ತು. ಸೆಟ್ಟರ ವರ್ತನೆ ಅದಕ್ಕೂ ಅರ್ಥವಾಗಲಿಲ್ಲ. ಗೌರಮ್ಮನವರಿಗಂತೂ ಎಳ್ಳಷ್ಟೂ ಅರ್ಥವಾಗಲಿಲ್ಲ.

ಸೆಟ್ಟರು ಹೋದವರೇ ಎಣ್ಣೆ ಒತ್ತಿಸಿಕೊಂಡರು. ಜಟ್ಟಿಯು ಎಣ್ಣೆ ಒತ್ತುತ್ತಾ "ಬುದ್ಧಿಯವರು ಸಭೆ ದಿನ ಇರಲಿಲ್ಲ ಎಂದು ಊರಿಗೆ ಊರೇ ಕೊರಗಿಹೋಯಿತು ಬುದ್ಧಿ" ಎಂದನು. "ಭರತಾಚಾರ್ಯರು ಅವೊತ್ತು ಅಧ್ಯಕ್ಷರಾಗಿದ್ದರಲ್ಲೋ? ನಾವು ದುಡ್ಡಿನವರು. ಅವರು ಶಾಸ್ತ್ರ ಓದಿದವರು. ಅಂತಹ ಸಭೆಗೆ ಅವರು ಇರಬೇಕು. ಅದಕ್ಕೇ, ಅವರನ್ನೇ ಮಾಡಲಿ ಎಂದೇ ನಾನು ಹೊರಟುಹೋದುದು. ಅಲ್ಲದೆ, ಜಟ್ಟಿ, ಸೂಳೆಯ ಸಂಗೀತ, ನಾಟಕದವನಿಗೆ ಸನ್ಮಾನ, ಅಂಥಾ ಸಭೆಗೆ ನಾವಿದ್ದರೆ ನಮ್ಮ ತೂಕ, ನಮ್ಮ ಮಾನ, ಏನಾದೀತು? ಹೇಳು" ಎಂದರು.

ಜಟ್ಟಿಯು ಒತ್ತುತ್ತಲೇ ಹೇಳಿದನು: "ಇಲ್ಲ, ಬುದ್ಧಿ, ತಾವು ಹಾಗೆನ್ನಬಾರದು. ಚಿನ್ನಾಸಾನಿ ಎಲ್ಲ ಸೂಳೆಯರ ಹಾಗೆ ಮೈಮಾರಿಕೊಳ್ಳೋ ಸೂಳೆಯೂ ಅಲ್ಲ. ಗೋಪಾಲರಾಯರು ಬಣ್ಣ ಬೋಳಿಕೊಂಡು ಕುಣಿಯೋ ನಟರೂ ಅಲ್ಲ ಬುದ್ಧಿ. ಅವೊತ್ತು ಭರತಾಚಾರ್ರು ಹೇಳಿದಂಗೆ ಯೋಗಿಗಳು. ಅದೇನು ಬುದ್ಧಿ ಆ ಸಂಗೀತ! ನಾವು ಇನ್ನೆಲ್ಲಾದರೂ ಕೇಳೇವಾ? ಆ ದಿನ ಮಂಟಪದಲ್ಲಿ ಸುಮಾರು ಪದಿನೈದು ಇಪ್ಪತ್ತು ಸಾವಿರ ಜನ ಸೇರಿತ್ತಲ್ಲಾ! ಒಬ್ಬರಾದರೂ ನಶ್ಯೆನಾದರೂ ಗಟ್ಟಿಯಾಗಿ ಸೇದಬೇಕಲ್ಲಾ! ಅವಳು ನಿಜವಾಗಿ ಸರಸ್ವತಿ ಬುದ್ಧಿ. ತಾವಂಥಾವರಲ್ಲ ಅನ್ನಿ. ಆದರೂ ಏನೋ ದೇವರ ಚಿತ್ತದಲ್ಲಿದ್ದು ತಾವೇ ಅವಳಿಗೆ ಗಂಟುಬಿದ್ದರೂ ಜನ ತಮ್ಮನ್ನು ಏನೂ ಅನ್ನೋಲ್ಲ ಬುದ್ಧಿ. ಏನೋ ತಪ್ಪಿ ಅವಳು ಸೂಳೆಯಾಗಿ ಹುಟ್ಟಿದ್ದರೂ ಈ ವೂರಿನ ಎಷ್ಟೋ ಗರತಿಯರಿಗಿಂತ ಗರತಿ ಬುದ್ಧಿ...."

ಸೆಟ್ಟರಿಗೆ ಮನಸ್ಸು ಚುಳ್ ಎಂದಿತು. ತಲೆಯ ಮೇಲೆ ತಟಪಟ ಎಂದು ಒತ್ತುತ್ತಿದ್ದರೆ, ಅವರ ಮನಸ್ಸಿಗೇ ಏಟು ಬೀಳುವಂತಿತ್ತು. ಮೈಯೆಲ್ಲ ಹಿಸುಕುತ್ತಿದ್ದರೆ, ಮನಸ್ಸನ್ನು ಹಿಸುಕುತ್ತಿರುವಂತಿತ್ತು. ಸೆಟ್ಟರು ಅವನನ್ನು ಆ ವಿಷಯ ಬಿಡು ಎನ್ನುವಂತಿಲ್ಲ. ಎಣ್ಣೆ ಒತ್ತುವಾಗ ಅವನು ಊರಿನ ಸುದ್ದಿಯನ್ನೆಲ್ಲ ಹೇಳುವುದು ವಾಡಿಕೆ. ಸೆಟ್ಟರು ವಾಡಿಕೆಯ, ಸಂಪ್ರದಾಯದ ಕಟ್ಟುನಿಟ್ಟಿನ ಭಕ್ತರು. ಅವರು ವಾಡಿಕೆಯನ್ನು ಎಂದಿಗೂ ಬಿಡರು.

ಜಟ್ಟಿಯು ಮುಂದುವರಿದನು: "ಅವೊತ್ತು ಇನ್ನೊಂದಾಯಿತಲ್ಲ ಬುದ್ಧಿ. ಹೇಳು ಅಂದರೆ ಹೇಳಿಯೇಬಿಡುತೀನಿ."

"ಹೇಳು, ಹೇಳು."

"ತಾವು ಅವೊತ್ತು ಇರದೆ ಹೊರಟುಹೋದಿರಲ್ಲ. ಅದಕ್ಕೆ ಜನ ಏನೇನೋ ಅರ್ಥ ಮಾಡಿಬಿಟ್ಟಿದ್ದಾರೆ ಬುದ್ಧಿ. ಕೆಲವರು ತಮಗೂ ಗೋಪಾಲ ರಾಯರಿಗೂ ಗಂಟುಹಾಕಿ, ನೀವಿಬ್ಬರೂ ಪಡ್ತಕರು. ಅದಕ್ಕೇ ಅವರು ಹೊರಟುಹೋದರು ಅಂತ ಕೂಡ ಅಂದುಬಿಟ್ಟರು. ನನಗೆ ಕೋಪ ಬಂದು ನಾನು ಒಬ್ಬನ ಕಪಾಳಕ್ಕೆ ಕೂಡ ಕುಟ್ಟಿಬಿಡುತ್ತಿದ್ದೆ."

ಸೆಟ್ಟರ ಮುಖ ಕೆಂಪಾಗಿಹೋಯಿತು. "ಏನೋ ಹಾಗಂದರೆ?" ಎಂದರು. "ಬಿಡಿ ಬುದ್ಧಿ. ತಮಗೆ ತಿಳೀಲಿಲ್ಲವಾ? ಚಿನ್ನಾಸಾನಿ ತಮಗೂ

ಸೆರಗು ಹಾಸವಳೇ! ಅಂತ. ಅದಕ್ಕೇನೆ ಅವಳು ಒಪ್ಪಿಕೊಂಡದ್ದು ಅಂತ ಕೂಡಾ ಅಂದರು. ತಾವೇನಂತ ಅವಳನ್ನು ಸಂಗೀತಕ್ಕೆ ಒಪ್ಪಿಸಿದ್ದು?"

"ಸರಿ ಜನದಮಾತು ಬಿಡು. ಆಡುವ ನಾಲಗೆಗೆ ಮೂಳೆ ಇದ್ದರಲ್ಲವೆ?"

"ಆಂ, ಹಂಗಂದರಾದೀತಾ ಬುದ್ಧಿ. ಜನರ ಬಾಯಲ್ಲಿ ಆಡೋನೆ ಜಗದೀಶ. ಜನದಮಾತು ಸುಳ್ಳಿನಂಗೆ ಕಂಡರೂ ಅದು ನಿಜ."

"ಬಿಡೋ, ಹುಚ್ಚ, ಈಗ ನನಗೂ ಚಿನ್ನಾಸಾನೀಗೂ ಗಂಟು ಹಾಕಿದ ಹಾಗೇ ತಾನೇ! ನಮಗೇನಾದರೂ ಆ ಹುಚ್ಚು ಇದುವರೆಗೂ ಉಂಟೇ? ಯಾವನೋ ತನಗೆ ತೋರಿತು ಅಂದ. ಮಿಕ್ಕವರೂ ಕೂಗಿ ಬಿಟ್ಟರು."

ಆವೇಳೆಗೆ ಎಣ್ಣೆ ಒತ್ತಿ ಮುಗಿಯಿತು. ನೀರು ಕಾದಿದೆಯೆಂದು ಸುದ್ದಿ ಬಂತು. ಸೆಟ್ಟರಿಗೆ ಏನೇನೋ ಯೋಚನೆ. ನೀರು ಹಾಕಿಸಿಕೊಳ್ಳುವಾಗ ಮೈ ಹಾಗೆ ಒಡ್ಡಿ, ಹೀಗೆ ಒಡ್ಡಿ, ಬಹುಸುಖಪಡುವಜಾತಿ ಅವರು. ಆದಿನ ಮಾತ್ರ ಏನೋ ಪಂಪಾಪತಿಗೆ ರುದ್ರಾಭಿಷೇಕ ಆದ ಹಾಗಾಯಿತು. ಜಟ್ಟಿಯೂ ತಾನು ಆಡಿದ ಮಾತಿನಲ್ಲಿ ಯಜಮಾನರಿಗೆ ಅಸಮಾಧಾನ ವಾಗಿರಬೇಕು ಎಂದು ಕೊಂಡು ಮುಂದೆ ಏನೂ ಮಾತನಾಡದೆ ತನ್ನ ಕೆಲಸ ಮಾಡಿ ಮುಗಿಸಿದನು.

ಸುಖವಾದ ಸುಪ್ಪತ್ತಿಗೆಯಲ್ಲಿ ಮಲಗಿದ್ದರೂ, ಮೈಯೆಲ್ಲ ಮೀಣದಲ್ಲಿ ಕುಡಿದ ನೀರು ಕಾರಿದ್ದರೂ, ಅವರ ಮೈಹಗುರವಾಗಲಿಲ್ಲ. ಮನಸ್ಸಂತೂ ನಾಯಿಬಾಯಿಗೆ ಸಿಕ್ಕಿದ ಬಟ್ಟೆಹಾಗೆ ಒದರಿಹೋಗಿ ಹರಿದು ಚಿಂದಿ ಪಂದಿಯಾಗಿ ಹೋಗಿತ್ತು.

ಸೆಟ್ಟರು ಅಂಗಡಿಗೆ ಹೋದರು. ಅಲ್ಲಿಯೂ ಲೆಕ್ಕನೋಡಿದ ಶಾಸ್ತ್ರ ವಾಯಿತು. ಕೈಯ್ಯಲ್ಲಿ ಹಿಡಿದಿದ್ದ ನಶ್ಯದ ಚುಟಿಗೆ ಹಾಗೇ ಹಿಡಿದುಕೊಂಡು ಸುಮ್ಮನೆ ಶಥಪಥತಿರುಗುತ್ತಲಿದ್ದಾರೆ. 'ಆಗಲೇ ಐದು ದಿನವಾಯಿತು. ಇನ್ನು ಉಳಿದಿರುವುದು ಇಪ್ಪತ್ತೈದು ದಿನ ಮಾತ್ರ. ಏನು ಮಾಡಬೇಕು?" ಇದೇ ಯೋಚನೆ.

ಗೋಪಾಲರಾಯನ ನೆನಪಾದಾಗ ಆ ಚಿನ್ನಳನ್ನು ಹಿಡಿದು ಆ ತುರುಕನಿಗೆ ಕೊಟ್ಟುಬಿಟ್ಟರೆ ನನ್ನ ಉರಿ ಶಾಂತವಾದೀತು ಎನ್ನಿಸುವುದು. ಜೊತೆಯಲ್ಲಿ ಜನ ಏನೆಂದಾರು? ಮೊದಲೇ ಜಾತಿದ್ವೇಷ ತುಂಬಿತುಳುಕುತ್ತಿದೆ. ಆಕಿಚ್ಚು ಹೊತ್ತಿದರೆ ಅದರಲ್ಲಿ ತಾನೂ, ತನ್ನವರೂ, ತನ್ನ ಸರ್ವಸ್ವವೂ ಭಸ್ಮವಾಗಿ

ಹೋಗುತ್ತದೆ. ಅಲ್ಲದೆ ರಾಜಧಾನಿಯಲ್ಲಿ, ಚಕ್ರವರ್ತಿಯವರ ಆಸ್ಥಾನದಲ್ಲಿ ಚಿನಿವಾರ ಕಟ್ಟೆಯಲ್ಲಿ, ಬಂಧುಬಳಗದಲ್ಲಿ ಎಲ್ಲೆಲ್ಲೂ ಮೊದಲನೆಯ ವೀಳೆಯ ತೆಗೆದುಕೊಳ್ಳುವ ಯಜಮಾನ, ಹೆಣ್ಣಿನ ಲಂಚಕೊಟ್ಟು ಗಣಿಹಿಡಿದ ಎಂದರೆ ಬದುಕಿದ ಬಾಳು ಏನಾಗಬೇಕು? ಈಗ ಈ ಕೆಲಸ ಮಾಡದಿದ್ದರೆ ನಮಗೆ ಗಣಿ ಸಿಕ್ಕುವುದು ಹೇಗೆ? ಗಣಿಯೆಂದರೆ ಬಿಟ್ಟೀಯೆ?" ಥಟ್ಟನೆ ತಿರುಗಿ "ಎಲ್ಲಿರಿ? ಹೋದ ವರ್ಷ ಯುಗಾದಿಯಿಂದ ಯುಗಾದಿಯವರೆಗೆ ನಾವು ವಜ್ರದವ್ಯಾಪಾರ ಮಾಡಿರುವುದೆಷ್ಟು? ಬಂದಿರುವ ಪುಟ್ಟುಲಾಭ ಎಷ್ಟು ತೆಗೀರಿ?" ಎಂದನು.

ಶಾನುಭೋಗನು ಬಂದು ಕೈಮುಗಿದು ಲೆಕ್ಕ ಒಪ್ಪಿಸಿದನು. "ಬುದ್ಧಿ, ಗೋಲ್ಕೊಂಡದಲ್ಲಿ ಹರಾಜ್ ನಡೆದದ್ದು ಫಾಲ್ಗುನ ಬಹುಳ ದಶಮಿ. ಸರಕು ನಾವು ಜಮಾ ಹಿಡಿದದ್ದು ಬಹುಳ ತ್ರಯೋದಶಿ. ನಾವು ವ್ಯಾಪಾರ ಆರಂಭಿಸಿದ್ದು ಚೈತ್ರಶುದ್ಧ ತದಿಗೆ. ವ್ಯಾಪಾರ ಆದದ್ದು ಫಾಲ್ಗುನ ಬಹುಳ ತ್ರಯೋದಶಿವರೆಗೆ. ಬಂದ ಸರಕು ಒಟ್ಟು ಐದೂವರೆಮಣ ಎರಡುಸೇರು ಎರಡೂ ಕಾಲು ತೊಲ. ಅದರಲ್ಲಿ ಬ್ರಹ್ಮ ಜಾತಿ ವಜ್ರ ಶುದ್ಧವಾದದ್ದು ಹತ್ತು ಸಾವಿರದ ಐನೂರ ನಲವತ್ತನಾಲ್ಕು. ಮಿಶ್ರ ಹದಿನಾರುಸಾವಿರದ ಏಳುನೂರ ಎಂಟು. ಕ್ಷತ್ರಜಾತಿ ಶುದ್ಧವಾದದ್ದು ಹದಿನಾಲ್ಕುಸಾವಿರದ ಮುನ್ನೂರಿಪ್ಪತ್ತೆರಡು. ಮಿಶ್ರ ಹದಿನೆಂಟುಸಾವಿರದ ಮುನ್ನೂರೆಪ್ಪತ್ತನಾಲ್ಕು. ವೈಶ್ಯಜಾತಿ ಇಪ್ಪತ್ತು ಸಾವಿರದ ಏಳುನೂರೆಂಟು. ಮಿಕ್ಕವು ಹನ್ನೆರಡು ಸೇರು ಒಂದುಪಾವು ಕಾಲು ಚಟಾಕು, ಒಟ್ಟು ಅರವತ್ತುಸಾವಿರದ ಆರುನೂರನಲವತ್ತು. ಇದರಲ್ಲಿ ಮಾರಾಟ ವಾಗಿರುವುದು ಒಂದು ಲಕ್ಷ ಮೂವತ್ತೆರಡು ಸಾವಿರದ ನಾಲ್ಕುನೂರ ನಲವತ್ತೆಂಟು. ನಾವು ಗೋಲ್ಕೊಂಡದ ಖಜಾನೆಗೆ ಕೊಟ್ಟದ್ದು ಹತ್ತುಲಕ್ಷ ಎಂಭತ್ತೆಂಟು ಸಾವಿರ. ನಮಗೆ ಬಂದಿರುವುದು ಇಪ್ಪತ್ತೆರಡುಲಕ್ಷ ಹದಿನೆಂಟು ಸಾವಿರದ ಐನೂರೊಂಭತ್ತುರೂಪಾಯಿ. ಇದರಲ್ಲಿ ರಾಜಾದಾಯ ಎರಡುಲಕ್ಷ ಎಂಭತ್ತುಸಾವಿರದ ನೂರ ಇಪ್ಪತ್ತೇಳು ಹಾಗ ರೂಪಾಯಿ. ನಮ್ಮ ಖರ್ಚು ಎರಡು ಲಕ್ಷದ ಎಂಭತ್ತೆಂಟುಸಾವಿರದ ಮುನ್ನೂರ ಐವತ್ತು ರೂಪಾಯಿ. ಸಮಕಲು ನಲವತ್ತುಸಾವಿರದ ಇನ್ನೂರೆಪ್ಪತ್ತೆರಡು ರೂಪಾಯಿ. ಧರ್ಮ ಹದಿನೇಳು ಸಾವಿರದ ಐನೂರೆಂಟು ರೂಪಾಯಿ ಅಡ್ಡಆಣೆ. ಇದೆಲ್ಲ ಹೋಗುತ್ತ

ಪುಟ್ಟುಲಾಭ ನಾಲ್ಕುಲಕ್ಷ ಐವತ್ತನಾಲ್ಕು ಸಾವಿರದ ಇನ್ನೂರೈವತ್ತು ಬೇಳೆ ಆಣೆ.

" ಇದು ಬರಿಯ ಗೋಲ್ಕೊಂಡದ ಲೆಕ್ಕ ? "

" ಹೌದು."

" ಅಲ್ಲಿಂದ ಬಂದ ಲೆಕ್ಕ ಸೇರಿದೆಯೋ ? "

" ಇದು ಇಲ್ಲಿ ವಿಜಯನಗರದ ಅಂಗಡಿಯ ಲೆಕ್ಕ ಮಾತ್ರ."

" ಗೋಲ್ಕೊಂಡದ್ದೆಷ್ಟು ? "

" ಅಲ್ಲಿ ಪುಟ್ಟು ಲಾಭ ಎರಡು ಲಕ್ಷ ಇಪ್ಪತ್ತೆಂಟುಸಾವಿರದ ಇನ್ನೂರಿಪ್ಪತ್ತು."

" ಒಟ್ಟು ಹಾಗಾದರೆ ಆರುಲಕ್ಷ ಎಂಭತ್ತೆರಡು ಸಾವಿರ ಎನ್ನಿ."

" ಅವೊತ್ತು ನೀವೂ ಪರಾಜಿಗೆ ಬಂದಿದ್ದಿರಲ್ಲ. ಗಣಿಯ ಸರಕೆಲ್ಲ ಬಂದಿತ್ತೇ ? "

" ಇಲ್ಲ ಹೋದ ಸಲ ಗಣಿ ಏನೇನೋ ಆಗಿ ಆರೇ ತಿಂಗಳು ನಡೆದದ್ದು. ಅದರಲ್ಲೂ ಬಿದರೆಯವರು, ಅಹಮುದ್‌ನಗರದವರು, ಬಿಜಾಪುರದವರು, ಗೋವಾದವರು, ಸೀಮೆಯವರು, ದೆಹಲಿಯವರು ಇವರಿಗೆಲ್ಲ ನಾವೇ ಸುಮಾರು ಐವತ್ತೆಂಟುಲಕ್ಷದಷ್ಟು ಸರಕು ಕೊಟ್ಟುಬಿಟ್ಟೆವು. ಅವೊತ್ತು ತಮಗೆ ಬೇಡ ಬೇಡ ಹತ್ತೇಲಕ್ಷ ಸರಕು ಸಾಕು ಎನ್ನಿಸಿತು. ನಾನು ಎಷ್ಟು ಹೇಳಿದರೂ ಕೇಳಲೇ ಇಲ್ಲ."

" ಈಗ ನಮ್ಮ ಹತ್ತಿರ ಉಳಿದಿರುವುದರ ಬೆಲೆಯೆಷ್ಟು ? "

" ಸುಮಾರು ಒಂದು ಲಕ್ಷ."

" ನೋಡಿ ಹೇಳು. ಗೋಲ್ಕಂಡದ ಗಣಿ ನಾವು ಗುತ್ತಿಗೆ ಹಿಡಿದರೆ ಎಷ್ಟು ಕೊಡಬಹುದು."

ಶಾನುಭೋಗನು ಅಷ್ಟುಹೊತ್ತು ಯೋಚಿಸಿ " ಐವತ್ತು-ಚೌಕಾಸಿ ಮಾಡಿದರೆ ಅರವತ್ತರವರೆಗೆ ಕೊಡಬಹುದು."

ಸೆಟ್ಟರು ತಲೆದೂಗಿ " ಗಾಡಿ ಬರಹೇಳು " ಎಂದರು. ಬಂದ ಗಾಡಿ ಯಲ್ಲಿ ಶಾನುಭೋಗನೇ ಹೋಗಿ ಸೆಟ್ಟರು ಕರೆದರು ಎಂದು ರಾಜಧಾನಿಯ

ಪ್ರಮುಖ ರತ್ನಪಡಿ ವ್ಯಾಪಾರಿಗಳನ್ನೆಲ್ಲ ಸಂಜೆ ಎರಡು ಝಾವದ ಹೊತ್ತಿಗೆ ಬರಬೇಕು ಎಂದು ಕರೆದುಬಂದನು.

ಸೆಟ್ಟರು ಮನೆಯಲ್ಲಿಯೂ ಸಮಾಧಾನವಾಗಿರಲಿಲ್ಲ. ಅವರು ಏನಾದರೂ ಯೋಚನೆಮಾಡಬೇಕಾದರೆ ಮಹಡಿಯ ಮೇಲೆ ತಿರುಗುತ್ತಿರುವುದು ಅವರ ಪದ್ಧತಿ. ಆಗ ಮಾದಳದ ಹಣ್ಣಿನ ಸಿಪ್ಪೆಯ ಬಾಳಕ, ಹುರಿದು ಬಾಲ ಮೆಣಸಿನ ಕಾರ, ಸೈಂಧವಲವಣದ ಪುಡಿ, ಯಾಲಕ್ಕಿ ಪುಡಿ ಹಚ್ಚಿರುವ ಬಾದಾಮಿ ಬೀಜ ತಿನ್ನುತ್ತಿರುವುದು ಅವರ ಪದ್ಧತಿ. ಒಂದೊಂದು ದಿನ ಅಂಗೈಯಗಲದ ತಟ್ಟೆಗಳ ತುಂಬಾ ಇಟ್ಟಿದ್ದ ಬಾದಾಮಿ ಬೀಜ, ಮಾದಳದ ಬಾಳಕ, ಸಾಲದೆ, ಇನ್ನೂ ಒಂದೆರಡು ಸಲ ಬರುತ್ತಿತ್ತು. ಇವೊತ್ತು ಅವರಿಗೆ ಅದೂ ಬೇಕಾಗಿಲ್ಲ. ಒಂದು ಬಾದಾಮಿ ಬಾಯಲ್ಲಿ ಹಾಕಿಕೊಂಡಿದ್ದಾರೆ. ಅದು ಹಾಗೆ ಹಲ್ಲಿನ ನಡುವೆ ಇದ್ದೇ ಇದೆ. ಕೈಯಲ್ಲಿ ಹಿಡಿದಿರುವ ಬಾಳಕವೂ ಹಾಗೆ ಇದೆ. "ಹೊಡೆದುಕೊಂಡು ಹೋಗಬಹುದು. ಆದರೆ ಅವಳು ಮೆಚ್ಚದಿದ್ದರೆ ಸಂಗೀತ ಆಗುವುದು ಹೇಗೆ? ಸುಲ್ತಾನನು ಸಂಗೀತದಲ್ಲಿ ತೃಪ್ತನಾಗದೆ ಮುಂದೆ ನುಗ್ಗಿದರೆ ಹೇಗೆ? ಎರಡು ರಾಜ್ಯಗಳಿಗೂ ತಾನಾಗಿ ಯುದ್ಧ ತಂದಿಟ್ಟ ಹಾಗಾಗುವುದಲ್ಲ? ಈಗ ಸುಲ್ತಾನನ ಇಷ್ಟ ನೆರವೇರದೆ ಹೋದರೆ, ತನ್ನ ವ್ಯಾಪಾರ ಹೋಗಿಬಿಡುವುದು. ಅವನ ಮನಸ್ಸಿನಲ್ಲಿ ಅದೇ ಖಾರಾ ನಿಂತು ಮುಂದೆ ಏನು ಮಾಡುವನೋ?. ಮೊದಲೇ ಎರಡು ರಾಜ್ಯಕ್ಕೂ ಒಳಗೊಳಗೆ ಮಸೆಯುತ್ತಿದೆ. ಈಗ ಅಲ್ಲಾನಮೇಲೆ ಆಣೆಯಿಟ್ಟಿದ್ದಾನೆ. ಇರಲಿ, ನನ್ನಂಥಾ ಬುದ್ಧಿವಂತನೇ ಈ ಕೆಲಸಸಾಧಿಸದಿದ್ದರೆ ಇನ್ನು ಯಾರು ಸಾಧಿಸಬೇಕು?"

ಸಮಸ್ಯೆ ಗಡುಸಾದಷ್ಟು ಸೆಟ್ಟರಿಗೆ ಪಠ ಹುರಿಯಾಗುತ್ತಿದೆ. "ಕೊನೆಗೆ ಏನೂ ಆಗದಿದ್ದರೆ ಶಾರ್ಯವಾಸಿ ಕತ್ತೆ ಕಾಲುಕಟ್ಟು ಎಂದು ಇದ್ದೇ ಇದೆ. ಗೋಪಾಲರಾಯನನ್ನೇ ಬುಟ್ಟಿಗೆ ಹಾಕಿಕೊಳ್ಳುವುದು" ಎಂದುಕೊಂಡರು. ನಗು ಬಂತು. "ದೇವರು ಅಂತಹ ಸಂದರ್ಭ ಒದಗಿಸದೆ ಇರಲಿ. ಪಂಪಾಪತಿ! ವಿರೂಪಾಕ್ಷ! ಕೈಬಿಡಬೇಡ. ಬೇಕಾದ್ದಾಗಲಿ ಅವನ ಬಳಿ ಹೋಗಬಾರದು. ಅಂಥಾ ಘಟ್ಟ ಬಂದರೆ ಅವಳ ಕಾಲನ್ನೇ ಹಿಡಿದರೂ ಚಿಂತೆಯಿಲ್ಲ" ಎಂದು ಗಟ್ಟಿಮಾಡಿದರು. "ಇನ್ನೇನು? ವರ್ತಕರೆಲ್ಲಾ

ಬರುತ್ತಾರೆ. ನೋಡೋಣ ಯಾರ ಬಾಯಲ್ಲಿ ಏನು ಮಾತು ಬಂದೀತೋ?" ಎಂದು ತಲೆದೂಗುತ್ತಾ ಬಾಳಕ, ಬಾದಾಮಿ ಮುಗಿಸಿದರು.

ಸರಿಯಾದ ಹೊತ್ತಿಗೆ ವರ್ತಕರೆಲ್ಲಾ ಬಂದರು. ಸೆಟ್ಟರು ವಜ್ರದ ಗಣಿ ಹಿಡಿಯುವ ಮಾತೆತ್ತಿ ಅಲ್ಲಿ ಹಿಂದೂಗಳದೇ ಒಂದು ಪಾಳ್ಯ ಆಗುವುದು. ಒಂದು ವೇಳೆ ಬೇಕು ಎಂದರೆ ಅಲ್ಲಿ ಒಂದು ಸಲವಾದರೂ ವಿಜಯನಗರದ ಬಾವುಟ ಹಾರಿಸುವುದೂ ಕೂಡ ಅಸಾಧ್ಯವಾಗುವುದಿಲ್ಲ. ಹಿ ಮಾ ಲ ಯ ದಿಂ ದ ಕನ್ಯಾಕುಮಾರಿಯವರೆಗೆ ವಜ್ರದ ವ್ಯಾಪಾರವೆಲ್ಲ ತಮ್ಮ ಪಾಲಾಗುವುದು ಎಂದು ರಸವತ್ತಾಗಿ ಉಪ್ಪುಕಾರ ಹಚ್ಚಿ ಹೇಳಿದರು. ವರ್ತಕರು ಸೆಟ್ಟರ ಯೋಚನೆಗೆ ತಲೆದೂಗಿದರು. ಆ ಕಾರ್ಯಕ್ಕೆ ತಮಗೆ ಸಾಧ್ಯವಾದಷ್ಟು ಸಹಾಯ ಮಾಡುವುದಾಗಿ ವಾಗ್ದಾನ ಮಾಡಿದರು. "ಎಲ್ಲರೂ ಸೇರಿ ಬಂಡವಾಳ ಹಾಕುವುದು. ಸೆಟ್ಟರ ಯಜಮಾನ್ಯದಲ್ಲಿ ಗಣಿ ನಡೆಸುವುದು. ಐದು ಕೋಟಿ ಬಂಡವಾಳ. ಅದರಲ್ಲಿ ಸೆಟ್ಟರದು ಹತ್ತರಲ್ಲಿ ಒಂದುಪಾಲು. ಐದು ಲಕ್ಷಕ್ಕೆ ಕಡಿಮೆ ಯಾರೂ ಹಾಕಕೂಡದು" ಎಂದು ಗೊತ್ತಾಯಿತು. ಅಲ್ಲಿದ್ದವರೇ ಆರು ಕೋಟಿವರೆಗೂ ಮಾತುಕೊಟ್ಟರು. ಸೆಟ್ಟರಿಗೆ ಅರ್ಧ ತೃಪ್ತಿಯಾಯಿತು.

# ಅಧ್ಯಾಯ ನಾಲ್ಕು

ತುಂಗಭದ್ರೆಯ ತೀರದಲ್ಲಿ ಆ ದೊಡ್ಡ ದೊಡ್ಡ ಬಂಡೆಗಳ ಅತ್ತಕಡೆ, ಮತಂಗಾಶ್ರಮದ ಹತ್ತಿರ ಹತ್ತಿರವಾಗಿ ಒಂದು ಸಣ್ಣ ತೋಟದಲ್ಲಿ ಭರತಾ ಚಾರ್ಯರ ಆಶ್ರಮ. ಅವರ ನಿಜವಾದ ಹೆಸರು ಶ್ಯಾಮಾಚಾರ್ಯರು ಎಂದು. ಆದರೆ ಅವರ ಭರತಶಾಸ್ತ್ರದ ಅಪಾರ ಪಾಂಡಿತ್ಯಕ್ಕೆ ತಲೆದೂಗಿ ಶ್ರೀ ಕೃಷ್ಣದೇವ ರಾಯರು ಅವರಿಗೆ ಭರತಾಚಾರ್ಯ ಎಂದು ಹೆಸರಿಟ್ಟು ರತ್ನದ ಘೋಡಾ ಹಾಕಿಸಿದ್ದರು. ಅಂದಿನಿಂದ ಅವರನ್ನು ವಿದ್ವಾಂಸರೆಲ್ಲ ಭರತಾಚಾರ್ಯರು ಎಂದು ಕರೆದರೆ ಸಾಮಾನ್ಯ ಜನರೆಲ್ಲ ಘೋಡಾದ ಗುರುಗಳು ಎಂದು ಕರೆಯುವರು.

ಅವರಿಗೆ ದೇವರಲ್ಲಿ ಅಪಾರವಾದ ಭಕ್ತಿ. ಅವರಿಗೆ ದೇವರ ನಾಮ ಹಾಡುವುದರಲ್ಲಿ ಅನಂತವಾದ ಆದರ. ಅದರಲ್ಲಿಯೂ ದಾಸರಾಯರದು, ರಾಯರದು ದೇವರನಾಮ ಹಾಡುವುದು ಎಂದರೆ ಅವರಿಗೆ ಎರಡು ಬಾಯಾಗು ವುದು. ವ್ಯಾಸರಾಜರಿದ್ದಾಗಲಂತೂ ಅವರಿಗೆ ಮಠದಲ್ಲಿ ಬಹಳ ಗೌರವ. ವಿದ್ವಾಂಸರು "ನಟುವನಾಗಿ ಹುಟ್ಟಬೇಕಾಗಿದ್ದು ತಪ್ಪಿ ಬ್ರಾಹ್ಮಣನಾಗಿದ್ದಾನೆ. ಇವನಿಗೆ ಇಷ್ಟು ಗೌರವವೋ!" ಎಂದು ಮೂಗುಮುರಿದರು. ರಾಯರೊಮ್ಮೆ (ರಾಯರು ಎಂದರೆ ಶ್ರೀ ವ್ಯಾಸರಾಯರು) ತುಂಬಿದ ಸಭೆಯಲ್ಲಿ ಭರತಾಚಾರ್ಯರ ಸಂಗೀತ ಮಾಡಿಸಿದರು. ಶ್ರೀ ಕೃಷ್ಣದೇವರ ಸನ್ನಿಧಿಯಲ್ಲಿ ರಾಯರ ಎದುರಿಗೆ ಕುಳಿತು ಹಾಡುತ್ತ ಹಾಡುತ್ತ "ಕೃಷ್ಣಮೂರ್ತಿ ಕಣ್ಣು ಮುಂದೆ ನಿಂತಿದಂತಿದೆ. ಎಂಬ ಕೀರ್ತನೆಯನ್ನು ಹಾಡುವಾಗ ಆಚಾರ್ಯರಿಗೆ ಮೈಮರೆಯಿತು. ಹಾಗೇ ಸೊಪ್ಪಾಗಿ ಬೀಳುವುದರಲ್ಲಿದ್ದರು. ರಾಯರು ಥಟ್ಟನೆದ್ದು 'ಕೃಷ್ಣದೇವರ ಅಪ್ಪಣೆಯಾಗಿದೆಯಪ್ಪಾ! ಪೂರ್ಣವಾಗಲಿ' ಎಂದು ತೀರ್ಥವನ್ನು ತಳಿದರು" ಆಚಾರ್ಯರು ಎದ್ದು ಕುಳಿತು ಹಾಡಿದರು. ಕೇಳುತ್ತ ಕೇಳುತ್ತ ಸಭೆ ಮೈಮರೆ ಯಿತು. ಎಲ್ಲರಿಗೂ ಯಾವುದೋ ಲೋಕದಲ್ಲಿ ಇದ್ದ ಹಾಗೆ ಆಗಿಹೋಯಿತು. ಏನು ಕೇಳುವೆನೆಂಬ ಅರಿವು ಯಾರಿಗೂ ಇಲ್ಲ. ಯಾವುದೋ ಒಂದು ಅಪಾರ ವಾದ ಗಂಭೀರವಾದ ಗಾನಸಾಗರದಲ್ಲಿ ತಾವೆಲ್ಲ ಮೀನುಗಳಾಗಿರುವಂತೆ ಭಾಸವಾಗುತ್ತಿದೆ. ಆಚಾರ್ಯರು ರಾಗರಾಗಗಳಲ್ಲಿ ತಾಳತಾಳಗಳಲ್ಲಿ "ಕೃಷ್ಣ

ಮೂರ್ತಿ" ಹಾಡುತ್ತಿದಾರೆ. ಸಭೆಗೆ ಸಭೆಯೇ ಪರವಶವಾಗಿಹೋಗಿದೆ. ಕೊನೆಗೆ ಆಚಾರ್ಯರು ಅದನ್ನೇ ಪಲ್ಲವಿಯಾಗಿಯೂ ಹಾಡಿದರು. ಆಗಲೂ ಎಲ್ಲರೂ ತಲೆದೂಗುತ್ತಿದ್ದಾರೆ. ತಾಳ ಹಾಕುತ್ತಿದ್ದಾರೆ. ಹಾ ! ಎನ್ನುತ್ತಾರೆ. ಆದರೂ ಮಂತ್ರಮುಗ್ಧರಹಾಗೆ ಇದ್ದಾರೆ.

ಹೀಗೆ ಒಂದು ಝಾವ ಕಳೆದುಹೋಯಿತು. ಎಲ್ಲರ ಕಣ್ಣುಗಳು ನೀರು ಸುರಿಸಿ ಸುರಿಸಿ ಇಷ್ಟಿಷ್ಟುಗಾತ್ರವಾಗಿವೆ. ಆನಂದದಿಂದ ಮುಖಗಳು ಅರಳಿದ ಪದ್ಮಗಳಹಾಗಾಗಿವೆ. ಬಿಟ್ಟ ಬಾಯಿ ಮುಚ್ಚದೆ, ಬಾಯೊಳಕ್ಕೆ ನೊಣ ಹೋಗುವುದೂ ಅರಿವಿಲ್ಲದೆ, ಆನಂದಪಡುತ್ತಿದ್ದಾರೆ. ಮೃದಂಗದವನಿಗೆ ಎಚ್ಚರವಿಲ್ಲ. ಬಾರಿಸುವುದು ತಪ್ಪಿಲ್ಲ. ಗೋಟುವಾದ್ಯದವನಿಗೆ ಅರಿವಿಲ್ಲ: ಒಂದು ಸ್ವರ ತಪ್ಪಿಲ್ಲ. ಆಚಾರ್ಯರಿಗೆ ಏನು ಹಾಡಬೇಕು ಎಂಬುದಿರಲಿ, ಏನು ಹಾಡುತ್ತಿದ್ದೇನೆಂಬುದೂ ಅರಿವಿಲ್ಲ.

ಕೊನೆಗೆ ಗಾನಮದ ತನಗೆ ತಾನೇ ಇಳಿಯಿತು. ಗುರುಗಳು ಮಂಗಳಾರತಿ ಮಾಡಿದರು. ಎಲ್ಲರಿಗೂ ಪ್ರೈ ಅರಿವು ಬಂತು. ಆ ದಿನ ಗುರುಗಳು ಶ್ಯಾಮಾ ಚಾರ್ಯರನ್ನು ಕರೆದು ಚಕ್ರವರ್ತಿಗಳು ಮೆಚ್ಚಿಕೊಟ್ಟ ಭರತಾಚಾರ್ಯ ಎಂಬ ಬಿರುದು ಈ ದಿನ ಸಾರ್ಥಕವಾಯಿತು. ಶ್ರೀ ಕೃಷ್ಣರಾಯರು ಅಂದು ಮೆಚ್ಚಿದಷ್ಟು ಇಂದು ಶ್ರೀ ಕೃಷ್ಣಪರಮಾತ್ಮನೂ ಮೆಚ್ಚಿದ್ದಾನೆ, ಈ ಭಕ್ತಿ ಕಾಪಾಡಿಕೊಳ್ಳಿ ಎಂದು ಪ್ರಸಾದದೊಡನೆ ಒಂದು ಸಾವಿರ ರೂಪಾಯಿ ಕರುಣಿಸಿದರು. ಆಚಾರ್ಯರು ಒಂದು ರೂಪಾಯಿ ತೆಗೆದುಕೊಂಡು ಕಣ್ಣಿಗೆ ಒತ್ತಿಕೊಂಡು ಮಿಕ್ಕುದನ್ನೆಲ್ಲಾ ಶ್ರೀ ಕೃಷ್ಣದೇವರ ಸೇವೆಗೆ ಸಮರ್ಪಿಸಿ, ಗುರುಗಳಿಗೆ ನಮಸ್ಕಾರಮಾಡಿ, "ತಮ್ಮ ಪ್ರಸಾದದಿಂದ ಈ ವಿದ್ಯೆಯ ಆಳ ಕಂಡೆ. ಇನ್ನು ಮುಂದೆ ಶ್ರೀ ಕೃಷ್ಣದೇವರ ಮುಂದೆ ಮಾತ್ರ ನನ್ನ ಪಾಟುಕಛೇರಿ ನಡೆಯಬೇಕು. ಇನ್ನೆಲ್ಲಿಯೂ ಕೂಡದು ಎಂದು ಅನುಗ್ರಹವಾಗಬೇಕು. ಗುರುಗಳ ಪ್ರಸಾದವಾಗಿ ಲಭಿಸಿದ ಈ ವಿದ್ಯೆ ದೇವರಲ್ಲಿಯೇ ಅರ್ಪಣವಾಗಬೇಕು" ಎಂದು ಪ್ರಾರ್ಥಿಸಿಕೊಂಡರು. ಗುರುಗಳು ಆಗಲಿ ಎಂದು ಹೇಳಿದರು. ಅಂದಿನಿಂದ ವಿಜಯನಗರದ ಚಕ್ರವರ್ತಿಗಳೂ ಕೂಡ ರಾಯರ ಅಪ್ಪಣೆಯನ್ನು ಮನ್ನಿಸಿದರು. ಕೃಷ್ಣಾಷ್ಟಮಿ, ವಿನಾಯಕ ಚತುರ್ಥಿ, ಬಲೀಂದ್ರಪಾಡ್ಯ, ಶಿವರಾತ್ರಿಗಳಲ್ಲಿ ಅಲ್ಲದೆ ಇನ್ನು ಯಾವಾಗಲೂ ಅವರು ಅರಮನೆಯಲ್ಲಿ ಹಾಡುತ್ತಿರಲಿಲ್ಲ,

ಅವರ ಮನೆಯಲ್ಲಿ ನಿತ್ಯವೂ ಬೆಳಗ್ಗೆ ಮೊದಲನೆಯಝಾವದೊಳಗಾಗಿ ದೇವರ ಪೂಜೆಯಾಗುವುದು. ಆಚಾರ್ಯರು ತಂಬೂರಿ ತಾಳಗಳನ್ನು ಇಟ್ಟು ಕೊಂಡು ದಿನವೂ ದೇವರ ಮುಂದೆ ಹಾಡುವರು. ಅವರ ಸಂಗೀತ ಕೇಳ ಬೇಕೆಂದವರು ಆ ಹೊತ್ತಿನಲ್ಲಿ ಬಂದು ಹೊರ ಆವರಣದಲ್ಲಿ ಕುಳಿತು ಕೃತಾರ್ಥ ರಾದೆವು, ಇದು ನಿಜವಾಗಿಯೂ ಭರತಾಶ್ರಮವೆಂದುಕೊಂಡು ಹೋಗುವರು.

ಅವರು ಮಾಧ್ಯಾಹ್ನಿಕವನ್ನು ಮುಗಿಸಿ ಊಟಮಾಡಿ ಅತ್ತ ಮಗ್ಗುಲಾಗಿ ಅಷ್ಟು ಹೊತ್ತು ವಿಶ್ರಾಂತಿ ಪಡೆಯುವ ವೇಳೆಗೆ ಗಾಡಿಯು ಬರುವುದು. ಅಲ್ಲಿಂದ ಹೋಗಿ ಶಿಷ್ಯಳ ಬಳಿಯಲ್ಲಿ ಕುಳಿತು ಆ ಶಾಸ್ತ್ರ ಈ ಶಾಸ್ತ್ರ ಎಂದು ವಿಚಾರ ಮಾಡುತ್ತ ಸಂಜೆಯುವರೆಗಿದ್ದು ಮತ್ತೆ ಮನೆಗೆ ಬರುವರು. ಅವರಿಗೆ ಎಷ್ಟೋ ಜನ ಶಿಷ್ಯರುಂಟು. ಯಾರ ಮೇಲೂ ಚಿನ್ನಾಸಾನಿಯ ಮೇಲಿರುವ ಅಭಿಮಾನ ಇಲ್ಲ. ಅವರನ್ನು ಕೇಳಿದರೆ "ಭರತಶಾಸ್ತ್ರ ಗಂಧರ್ವರ ವಿದ್ಯೆ. ಅದರಲ್ಲಿ ಸಹಜವಾಗಿ ಕಾಮವನ್ನು ಕೆರಳಿಸುವ ಪ್ರವೃತ್ತಿಯುಂಟು. ಅದಕ್ಕೆ ವಶವಾದರೆ ವಿದ್ಯೆ ಬೆಳೆಯುವುದು ಮುಗಿಯಿತು. ಹರಿಯುವ ನೀರಿಗೆ ಅಡ್ಡ ಕಟ್ಟೆ ಹಾಕ ಬೇಕು. ಕಾಲುವೆಗೆ ತಿರುಗಿಸಬೇಕು. ಹಾಗೆ, ಭರತಶಾಸ್ತ್ರ ಕೆರಳಿಸಿದ ಕಾಮವನ್ನು ತಡೆದು ದೇವರತ್ತ ತಿರುಗಿಸಿದರೆ ಅದೇ ಭಕ್ತಿ. ಅದನ್ನು ಆಶ್ರಯಿ ಸಿದವರಿಗೆ ಇಹದಲ್ಲಿ ಭುಕ್ತಿ, ಪರದಲ್ಲಿ ಮುಕ್ತಿ. ಇದು ಬಿಟ್ಟು ಕಾಮಪರಾ ಯಣರಾದವರಿಗೆ ಇಹವೆಷ್ಟೋ ಅಷ್ಟೆ! ನಾವು ಇಲ್ಲಿಂದಾಚೆಗೆ ಅಷ್ಟು ಇದೆ ಎಂದು ನಂಬಿರುವವರು. ನಾವು ನಮ್ಮ ನಂಬಿಕೆಗೆ ತಕ್ಕಂತೆ ನಡೆಯಬೇಡವೇ?" ಎನ್ನುವರು. ಚಿನ್ನಾಸಾನಿಯೂ ಅಷ್ಟೇ, ಗುರುವೆಂದರೆ ಅವಳಿಗೆ ಪರದೈವ.

ಗಾಡಿಯು ಎಂದಿನಂತೆ ಬಂದಿತು. ಆಚಾರ್ಯರು ನಿತ್ಯಕ್ಕಿಂತ ಕೊಂಚ ಹೊತ್ತು ಹೆಚ್ಚಾಗಿ ಮಲಗಿದ್ದರು. ಎದ್ದು ಮುಖ ತೊಳೆದುಕೊಂಡು ಯಥೋ ಚಿತವಾಗಿ ಉಟ್ಟು ಹೊದೆದು ಹೊರಟರು. ಗಾಡಿಯವನು 'ಇವೊತ್ತು ಬೇಗ ಬರಬೇಕು ಎಂತ ಹೇಳಿದ್ದರು ಬುದ್ಧೀ!' ಎಂದನು. "ನೋಡಿದೆಯಾ ಮತ್ತೆ! ಕೇಳಬೇಕಾಗಿತ್ತೋ ಇಲ್ಲವೋ? ಮಲಗಿದ್ದರೆ ತಾನೇ ಏನು? ಏಳಿಸಿದ್ದರೆ ಆಗುತ್ತಿರಲಿಲ್ಲವೆ? ಪಾಪ! ನಿಮ್ಮ ಅಮ್ಮಣ್ಣಿಯವರು ಎಷ್ಟು ಕಾದಿರುತ್ತಾರೋ?"

ಚಿನ್ನಳು ಗುರುವಿನ ಹಾದಿಯನ್ನು ನೋಡುತ್ತ ಮಹಡಿಯಿಳಿದು ಬಂದು ತೋಟದಲ್ಲಿಯೇ ನಿರೀಕ್ಷಿಸುತ್ತ ನಿಂತಿದ್ದಳು. ಗಾಡಿಯು ಬರುತ್ತಿದ್ದಹಾಗೆಯೇ

ಇತರರು ಬರುವುದಕ್ಕಿಂತ ಮುಂಚೆ ತಾನೇ ಬಂದು ಬಾಗಿಲು ತೆಗೆದು ಗಾಡಿಯಿಂದ ಅವರನ್ನು ಇಳಿಸಿಕೊಂಡು ಕರೆದುಕೊಂಡುಹೋದಳು. "ಇವೊತ್ತೇಕೆ ಇಷ್ಟು ಹೊತ್ತಾಯಿತು? ಆರೋಗ್ಯವಾಗಿದ್ದೀರಿ ತಾನೇ? ಯಾರಾದರೂ ನೆಂಟರಿಷ್ಟರು ಬಂದಿದ್ದಾರೇನು?" ಎಂದು ಪಲವಾರು ಪ್ರಶ್ನೆಗಳನ್ನು ಒಂದೇಸಮನೆ ಕೇಳಿದಳು.

ಶ್ಯಾಮಾಚಾರ್ಯರು ಮಗಳನ್ನು ಮಾತನಾಡಿಸುವ ತಾಯಿಯಂತೆ ವಾತ್ಸಲ್ಯದಿಂದ, "ಇಷ್ಟು ಪ್ರಶ್ನೆ ಒಟ್ಟಿಗೆ ಮುಂಗಾರು ಮಳೆ ಹಾಗೆ ಸುರಿದರೆ ಯಾವುದಕ್ಕೆ ಉತ್ತರ ಹೇಳುವುದು? ಯಾವುದನ್ನು ಬಿಡುವುದು? ಆರೋಗ್ಯವಾಗಿದ್ದೇನೆ. ಏನೋ ಬೆಳಿಗ್ಗೆ ಊಟಕ್ಕೆ ಮುಂಚೆ ಯಾರನ್ನೋ ನೋಡುವುದಕ್ಕೆ ಹೋಗಿದ್ದೆ. ಬಂದು ಊಟ ಮಾಡುವುದು ಕೊಂಚ ಹೊತ್ತಾಯಿತು. ಸರಿ. ನಿದ್ರೆಯಿಂದ ಏಳುವುದೂ ಹೊತ್ತಾಯಿತು. ಗಾಡಿ ಕಾದಿತ್ತು. ನೀನು ಬೇಗ ಬರಬೇಕು ಎಂದಿದ್ದೆಯಂತೆ. ದಣ್ಣಲೆ ಪುರಾಣ ಹಾಗಿರಲಿ, ನೀನು ಹೇಳು. ಅದೇನು ಬೇಗ ಬರಬೇಕು ಎಂದದ್ದು. ಏತಕ್ಕೆ ಅದು ಹೇಳು."

"ಏನವಸರ? ದಯಮಾಡಿಸಿ, ದಜಾರದಲ್ಲಿ ಕುಳಿತುಕೊಳ್ಳೋಣ. ಎಲ್ಲಾ ಹೇಳುತ್ತೇನೆ. ನನಗಿನ್ನಾರು? ಅಪ್ಪನೇ? ಅಮ್ಮನೇ? ಎಲ್ಲಾ ನೀವೇ,"

"ಚಿನ್ನಮ್ಮಾ! ನೀನು ಆಸ್ತಿಕಳು. ಹಾಗೆನ್ನಬಾರದು. "ತ್ವಯಿ ಮಯಿಸರ್ವತ್ರೈಕೋವಿಷ್ಣುಃ". ವಿಷ್ಣು ಎಂದರೇನು? ವ್ಯಾಪಕ ಎಂದು. ನೋಡು. ನಾವಾಡುವ ಗಾಳಿಗೂ ಅವನೇ ಉಸಿರು ಕಣಮ್ಮ, ಆ ಧ್ಯಾನ ದಲ್ಲಿದ್ದವರಿಗೆ "ಪರಿರೇವ ಜಗತ್ಪಿತೃಮಾತೃಗತಿಃ ಅಲ್ಲವೇ?"

ಅಭಿನಯ ಮಾಡಿಕೊಂಡು ಆಡಿದ ಮಾತು, ಆ ಮುದ್ರೆ, ಆ ಭಂಗಿ ಎಲ್ಲವೂ ಅವಳಿಗೆ ವಿಷ್ಣುವು ಸರ್ವವ್ಯಾಪಿಯಾಗಿದ್ದಾನೆ, ಎಂಬ ಭಾವವನ್ನು ಅನುಭವಕ್ಕೆ ತಂದುಕೊಟ್ಟಿತು. 'ಅಂತರ್ಬಹಿಶ್ಚ ತತ್ಸರ್ವಂವ್ಯಾಪ್ಯನಾರಾಯಣ ಸ್ಥಿತಃ' ಎಂಬ ಉಪನಿಷತ್ತಿನ ಮಾತೂ ನಿಜವಾಗಿ ಒಂದು ಗಳಿಗೆ ಅಲೌಕಿಕವಾದ ಧೈರ್ಯವನ್ನು ಕೊಟ್ಟಿತು. "ನಿಜ, ಭಯಕೃದ್ಭಯನಾಶನಃ" ಎಂದು ಕೊಂಡಳು. ಆನಂದವಾಗಿ ಕಣ್ಣಲ್ಲಿ ಒಂದು ಪನಿಯುರುಳಿತು.

ಚಿನ್ನಳು ಗುರುವನ್ನು ಕರೆದುಕೊಂಡು ಹೋಗಿ ಕೃಷ್ಣಾಜಿನ ಹಾಸಿದ್ದ ಮೆತ್ತೆಗಳ ಮೇಲೆ ಕೂರಿಸಿದಳು. "ಏನು ಗುರುಗಳೇ, ಫಲಾಹಾರಕ್ಕೆ ಏನು?" ಎಂದಳು. ಗುರುಗಳು ತಲೆಯಲ್ಲಾಡಿಸಿ "ಸರಿ, ಅತಿವಿನಯಂ ಧೂರ್ತಲಕ್ಷಣಂ. ಇವೊತ್ತು ನಮಗೆ ವ್ರತ, ನಮ್ಮ ಅಮ್ಮಣ್ಣಿ ಮಾಡಿದ್ದು ಬಿಟ್ಟು ಇನ್ನೇನೂ ತಿನ್ನುವುದಿಲ್ಲ" ಎಂದು, ರಾಗ ಹಾಡುತ್ತಿರುವಾಗ, ಮೃದಂಗದ ಶ್ರುತಿಯನ್ನು ನೋಡಬೇಕೆಂದು ವಿದ್ವಾಂಸನು ಮೃದುವಾಗಿ ಹಾಗೆನ್ನುವ ಹಾಗೆ ತರ್ಜನಿಯಿಂದ ಅವಳ ತಲೆಯ ಮೇಲೆ ಹಾಗೆಂದರು.

ಚಿನ್ನಳು ಸಕ್ಕರೆ ಬೊಂಬೆಯಾಗಿದ್ದರೆ ಆ ಆನಂದದ ಪ್ರವಾಹದಲ್ಲಿ ಕರಗಿ ಹೋಗುತ್ತಿದ್ದಳು. ಓಡಿಹೋಗಿ ಒಂದು ತಟ್ಟೆಯ ತುಂಬಾ ಮುಸ್ಸೋರೆ, ಮೃದುವಾಗಿ ಗಮ್ಮೆನ್ನುತ್ತಿರುವ ರವೆಯ ವಾಂಗಿಭಾತು, ಆವರಿಕೆ ಹೂವಿನ ಕಷಾಯ ತಂದಿಟ್ಟಳು. ಗುರುವು "ನಾನು ಗಾಡಿಯಲ್ಲಿ ಬಂದಿದ್ದೇನೆ, ಕೈಲಿಗೆ ಮುಟ್ಟುವುದಿಲ್ಲ." ಎಂದು ಬಾಯನ್ನು ತೆಗೆದರು. ಚಿನ್ನಳೇ ಅದನ್ನೆಲ್ಲಾ ಬಾಯಿಗಿಟ್ಟು ಅವರು ಬಾಯಿ ಮುಕ್ಕುಳಿಸಿದ ನೀರನ್ನು ಅತ್ತ ತೆಗೆದಿಟ್ಟು ತಾನು ಕೈತೊಳೆದುಕೊಂಡು ಕಷಾಯವನ್ನು ಜೊಗ್ಗಿಸಿ ಕೊಟ್ಟಳು. ಎಲ್ಲವೂ ಮುಗಿದ ಮೇಲೆ, ತುಂಟತನದ ನಗುನಕ್ಕು "ಏನು ಗುರುಗಳೇ, ನಾನು ಸೂಳೆ. ನಾನು ಮಾಡಿದ್ದ ತಿಂಡಿ ನನ್ನ ಕೈಯ್ಯಿಂದಲೇ ತಿಂದುಬಿಟ್ಟರಲ್ಲಾ! ಇನ್ನು ನಿಮ್ಮ ಜಾತಿಯ ಗತಿ ?" ಎಂದಳು.

"ಅಯ್ಯೋ ಹುಚ್ಚಿ, ನಮ್ಮ ಜಾತಿ ನಮ್ಮ ಮನೆಯಲ್ಲಿ ಭದ್ರವಾಗಿದೆ. ಆಯಿತು. ನೀನು ಯಾರಿಗೆ ಕೊಟ್ಟೆ ಹೇಳು."

"ನಾನು ಗುರುರೂಪದಲ್ಲಿ ಎದುರು ಕುಳಿತಿರುವ ಮಹಾವಿಷ್ಣುವಿಗೆ ಕೊಟ್ಟೆ."

"ಸರಿ. ಕೊಟ್ಟವಳು ನೀನು ತಿಂದವನು, ಮಹಾವಿಷ್ಣು. ಮಧ್ಯೆ ನನ್ನ ಜಾತಿಗೇನು ಬಂತು? ಭದ್ರವಾಗಿದ್ದೇಯಿದೆ. ಅಲ್ಲದೆ, ಚಿನ್ನಮ್ಮ, ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಲ್ಲ ನಿಜ. ಆದರೆ, ಸಾಂಗವಾಗಿ ಗುರುಸೇವೆ ಮಾಡಿ ಸಾಧಿಸಿದ ವಿದ್ಯೆಯೆಲ್ಲ ಅರೆದು ಹೊಯ್ದಿರುವ ನೀವೇ ನನ್ನ ಮಕ್ಕಳಲ್ಲದಿದ್ದರೆ ಇನ್ನಾರನ್ನು ಮಕ್ಕಳು ಎನ್ನಲಿ? ನನಗೆ ನೀನೂ, ಅವಳು, ಅವಳೆಲ್ಲಿ, ರನ್ನಮ್ಮ ಎಲ್ಲಿ?"

"ಅವಳು ಹೊರಗಿದ್ದಾಳೆ. ಗುರುಗಳೇ!"

"ಬಂದು ಅಲ್ಲಿ ಕುಳಿತುಕೋ ಎನ್ನು. ನಮ್ಮ ಮಕ್ಕಳು ಎದುರಿಗಿದ್ದು ಕಣ್ಣಿಗೆ ಬೀಳುತ್ತಿದ್ದರೆ ಹೃದಯದಲ್ಲಿ ಯೌವನ ಉಕ್ಕಿ ಬರುತ್ತಮ್ಮಾ!"

ಸರಿ. ರನ್ನಳೂ ಬಂದು ಕುಳಿತುಕೊಂಡಳು.

"ಅದೇನಮ್ಮ ಅವಸರಪಟ್ಟಿದು?"

"ಇವೊತ್ತು ಬೆಳಗಿನ ಝಾವದಲ್ಲಿ ಒಂದು ವಿಶೇಷವಾಯಿತು. ಗುರುಗಳೇ! ಬುಡುಬುಡುಕೆ ಸಣ್ಣ ಹೈದ ಆಗಾಗ ಬರುತ್ತಾನಲ್ಲ. ಇವೊತ್ತು ಅವನು ಬರುವ ವೇಳೆಗೆ ಎಚ್ಚರವಾಗಿದ್ದೆ. ಬುಡುಬುಡಿಕೆ ನುಡಿಸುತ್ತಾ "ಎಚ್ಚರಿಕೆ, ಎಚ್ಚರಿಕೆ, ಮುಂಬಾಗಿಲಲ್ಲಿ ಬಂದ ಒಳ್ಳೇದ ಕಂಡು ಹಿಂಬಾಗಿಲಲ್ಲಿ ನುಗ್ಗಿ ಬಂದ ಕೇಡಕು ಓಡೀತು. ಹೆದರದಿರು ಹೆದರದಿರು ಎಚ್ಚರಿಕೆ." ಎಂದು ಹೇಳಿಕೊಂಡು ಹೋದ. ಮತ್ತೆ ಬೆಳಿಗ್ಗೆ ಅಷ್ಟುಹೊತ್ತಿಗೆ ತೋಟದಲ್ಲಿ ಹೂವು ಕೊಯ್ಯುತ್ತಿರುವಾಗ ಬಂದು ಕಾಣಿಸಿಕೊಂಡ. ನಾನು ಏನು ಸಣ್ಣ ಹೈದ, ಗೌಳಿ ಏನು ನುಡಿಯಿತು? ಎಂದೆ. ಅವನು ನಕ್ಕು ಬೆಳಿಗ್ಗೆಯೇ ಕೇಳಿದೆಯಲ್ಲವ್ವಾ? ಎಂದ. ನಾನು ಹಾಸಿಗೆ ಬಿಟ್ಟಿರಲಿಲ್ಲವಲ್ಲೋ ಎಂದೆ. ಅವನು ಆ, ಉಂಟಾ? ಗೌಳಿ ನುಡಿಕಾರ ಸುಳ್ಳಾದರೆ, ನನ್ನ ನಾಲಗೆ ಸೇದು ಹೋಗೋಕಿಲ್ವಾ? ನಿಜ ಹೇಳು. ಹಂಗಾದರೆ ನೀ ಕೇಳಲಿಲ್ವಾ ಎಂದ. ಹೌದೋ, ನಾ ಕೇಳಿದೆ. ಹಾಗಾದರೆ ಅದು ನನಗೆ ಏನು ಎಂದೆ. ಅವನು ನಗುತ್ತಾ ನೀನೇನು ನಮ್ಮ ರಂಗಪ್ಪನ ಪೂಜೆ ಚೆನ್ನಾಗಿ ಮಾಡಿದವಳು. ಮಾದೇಶ್ವರದ ಉಲಿ ಅಂಗೆ ಬಂದು ಊವಿನ ಆರವಾಗಿ ಮುಡಿಗೇರಬೇಡವಾ? ಎಂದು ನಗುತ್ತಾ ನಿಂತುಬಿಟ್ಟ. ನನಗೆ ಎಲ್ಲೂ ಇಲ್ಲದ ಕುತೂಹಲವಾಗಿ ಹುಲಿ ಹಾರವಾಗೋದು ಅದೇನು ಹೇಳೋ ಎಂದೆ. ಅದೆಲ್ಲಾ ನಾವು ನರಮನುಸರು ಹೇಳೋದಾ? ಗೌಳಿ ನುಡಿದಷ್ಟೇ ನಮುಗೂ ಗೊತ್ತು. ಈಗ ನುಡದ್ದು ಅಷ್ಟೇ. ಎಲ್ಲಿ ಏನಾದರೂ ಕೊಡು, ಬರೋ ತಿಂಗಳು ಈ ದಿನ ಬರ್ತೀಷಿ. ಅವೊತ್ತು ಸಣ್ಣೈದನಿಗೆ ಜೋತ್ರ, ಚೀರೆ, ಜೋಬುತುಂಬ ರೂಪಾಯಿ—ಕಾಸಲ್ಲ ರೂಪಾಯಿ—ಕೊಡಬೇಕು ಎಂದ. ಎಲ್ಲಿಂದ ಬರುತ್ತದೆಯೋ ಎಂದೆ. ದೊರೆ ಮಂಕ್ರೀ ಮಂಕ್ರೀ ತುಂಬಿಕೊಡ್ತಾನೆ. ನಂಗೊಂದು ಹಿಡಿ ಯಾದರೂ ಕೊಡು ಎಂದ. ಏನೋ ಸಂತೋಷವಾಗಿ ಐದು ರೂಪಾಯಿ

ಕೊಟ್ಟು ಕಳುಹಿಸಿಬಿಟ್ಟೆ. ಗುರುಗಳೇ! ಇದನ್ನು ಹೇಳುವುದಕ್ಕೇ ಹೇಳಿ ಕಳುಹಿಸಿದ್ದು."

"ಇವೊತ್ತು ನಾನೂ ಒಂದು ಹೇಳಬೇಕು ಎಂದು ಬಂದಿದ್ದೇನೆ. ಹಿಂದೆ ಕುಹೂ ಯೋಗ ಬಂದಿದ್ದಾಗ ರಾಯರು ಸಿಂಹಾಸನದ ಮೇಲೆ ಕುಳಿತು ಚಕ್ರವರ್ತಿಗಳ ದುರ್ಯೋಗ ಕಳೆದ ಕಥೆ ಕೇಳಿದ್ದೀಯಲ್ಲ. ಈಗ ವಿಜಯನಗರಕ್ಕೆ ಅಂಥಾ ಒಂದು ದುರ್ಯೋಗ ಬರುವುದಂತೆ. ನಾನು ಮನಸ್ಸು ಮಾಡಿದರೆ ಇನ್ನು ಹತ್ತು ವರ್ಷ ಅದನ್ನು ಮುಂದಕ್ಕೆ ತಳ್ಳಬಹುದಂತೆ."

"ಹಾಗೆಂದರೇನು ಗುರುಗಳೇ?"

"ನೋಡು, ಚಿನ್ನಮ್ಮ, ಈ ನಗರವನ್ನು ವಿದ್ಯಾರಣ್ಯರು ಕಟ್ಟಿದರು. ಆಗ ಅವರ ಶಂಖಧ್ವನಿ ಕೇಳುವುದಕ್ಕೆ ಕೊಂಚ ಹೊತ್ತಿನ ಮುಂಚೆ ದಾಸಯ್ಯನ ಶಂಖ ಕೇಳಿ ಗುದ್ದಲಿ ಪೂಜೆ ಮಾಡಿದರು. ಆಗ ಆ ಯತೀಶ್ವರರು 'ಸರಿ, ದೈವ ಚಿತ್ತ, ಈ ನಗರಕ್ಕೆ ಆಯುಸ್ಸು ಇಷ್ಟು. ಬಂದಿದ್ದ ಗಂಡ ಎರಡು ಸಲ ತಪ್ಪುತ್ತದೆ. ಮೂರನೆಯ ಸಲ ತಪ್ಪುವುದಿಲ್ಲ. ತಪ್ಪಿದರೆ ಅನಂತಕಾಲ ಬಾಳುತ್ತದೆ' ಎಂದು ನುಡಿದರಂತೆ. ಈಗ ಎರಡನೆಯ ಸಲ ಬಂದಿರುವ ದುರ್ಯೋಗ ನನ್ನಿಂದ ತಪ್ಪುತ್ತದೆ, ಎಂದರೆ ಆಶ್ಚರ್ಯವಾಯಿತು. ಅದು ನಿಜವಾದರೆ ನನ್ನ ಸರ್ವಸ್ವವೂ ಅಲ್ಲ, ಜನ್ಮಜನ್ಮಾಂತರದಲ್ಲಿ ನಾನು ಮಾಡಿರುವ ಪುಣ್ಯವಿದ್ದರೆ ಅದು, ಮುಂದೆ ಜನ್ಮಜನ್ಮಾಂತರಗಳಲ್ಲಿ ಮಾಡುವ ಪುಣ್ಯ ಎಲ್ಲ ಕೊಟ್ಟುಬಿಡುತ್ತೇನೆ ಎಂದು ಶ್ರೀಹರಿಗುರು ಸಾಕ್ಷಿಯಾಗಿ ಪ್ರಮಾಣ ಮಾಡಿಬಂದೆ."

"ಹೇಳಿದವರು ಯಾರು?"

"ಹಿಂದೆ ಈ ನಮ್ಮ ಊರಿನಲ್ಲಿಯೋ ನನ್ನ ಜೊತೆಯಲ್ಲಿಯೋ ಒಬ್ಬ ಶಂಭು ಎಂಬ ಹುಡುಗನಿದ್ದ. ನನಗಿಂತ ಅವನು ಒಂದು ವರ್ಷ ಚಿಕ್ಕವನು. ಅವನೂ ನಾನೂ ಇಬ್ಬರೇ ಕುಳಿತುಕೊಂಡರೆ "ಲೋ, ಶ್ಯಾಮು, ದೇವರನ್ನು ಪ್ರತ್ಯಕ್ಷ ಮಾಡಿಕೊಳ್ಳಬೇಕು ಕಣೋ" ಎನ್ನುತ್ತಿದ್ದ. ಅವನಿಗೆ ಉಪನಯನ ವಾದ ಒಂದು ಎರಡು ವರ್ಷ ಇಲ್ಲಿ ಇದ್ದ. ಆಮೇಲೆ ಎಲ್ಲಿಯೋ ದೇಶಾಂತರ ಹೋದ. ಈಗ ನಲವತ್ತು ವರ್ಷವಾದ ಮೇಲೆ ಶಾಂಭವಾನಂದನಾಗಿ ಬಂದಿದ್ದಾನೆ. ಅವನು ಬಂದು ಒಂದು ತಿಂಗಳಾಯಿತಂತೆ. ವಿರೂಪಾಕ್ಷನನು

ಮಾತನಾಡಿಸಿದನಂತೆ. ವಿರೂಪಾಕ್ಷದೇವರು ಪಂಪಾ ಹೋಗುತ್ತದೆ; ಪಂಪಾಪತಿ ಉಳಿಯುತ್ತಾನೆ ಎಂದನಂತೆ. ವಿಟ್ಠಲನನ್ನು ಮಾತನಾಡಿಸಿದನಂತೆ; "ನಾನು ಇಲ್ಲಿರುವ ಕಾಲ ಮುಗಿಯುತ್ತಾಬಂತಪ್ಪ! ಯಾರಾದರೂ ಅಡ್ಡಬಿದ್ದರೆ ಇನ್ನು ಮಕ್ಕಿವರ್ಷ. ಇಲ್ಲಿದಿದ್ದರೆ ಬರುವವರ್ಷ ನಾನು ಭೀಮಾತೀರಕ್ಕೆ ಹೋಗುತ್ತೇನೆ" ಎಂದನಂತೆ. ಭುವನೇಶ್ವರಿಯನ್ನು ಕೇಳಿದರೆ, ಆಕೆ ಹಳೆಯ ಮಡಕೆ ಒಡೆಯುವಿದ್ದರೆ ಹೊಸ ಮಡಕೆಗೆ ತಾವೆಲ್ಲಿ ಎಂದಳಂತೆ. ಕೊನೆಗೆ ಏನೇನೋ ಲೆಕ್ಕಮಾಡಿ, ನನಗೆ ಈ ವಿಷಾತು ಹೇಳಿದ್ದಾನೆ."

"ಈ ಸುದ್ದಿ ಅರಮನೆಗೆ ತಿಳಿಯಿತೆ?"

"ಏನು ದೊಡ್ಡ ದೊರೆಗಳ ಕಾಲವೇನು? ಹೇಳಿದರೆ ಕೇಳುವುದಕ್ಕೆ? ಈಗ ಚಕ್ರವರ್ತಿಗಳಿಗೆ ತಮ್ಮನ್ನು ಬಿಟ್ಟರೆ ಇನ್ನಿಲ್ಲ ಎನ್ನುವ ಬುದ್ಧಿ ಬಂದಿದೆಯಲ್ಲ."

"ಏನು ದುರ್ಬುದ್ಧಿಯಿದ್ದರೇನು ಗುರುಗಳೆ! ನಾನಿಲ್ಲವೆ, ಅಪ್ಪಣೆಯಾಗಲಿ. ಬಿರುಡೆ ತಿರುಗಿಸಿ ತಂಬೀ ಶ್ರುತಿಮಾಡುವ ಹಾಗೆ ಕಿವಿ ಹಿಡಿದು ತಿರುಗಿಸಿ ಬಿಡುತ್ತೇನೆ."

"ಮಗಳೇ, ನನಗೆ ಗೊತ್ತಿದೆ ನನ್ನಿಂದ ದುರ್ಯೋಗ ತಪ್ಪುವುದು ಎಂದರೆ, ಅದು ನಿನ್ನಿಂದಲೇ ಎಂದು ನಾನೂ ಎಂದುಕೊಂಡೆ. ದೊರೆ ಕೈಯ್ಯಲ್ಲಿದ್ದಾನೆ ಎಂದು ದುಡುಕುವುದಕ್ಕುಂಟೆ? ಶಾಂಭವಾನಂದರು ಏನೋ ಪೂಜೆಯಲ್ಲಿದ್ದಾರೆ. ಇನ್ನು ಎರಡು ದಿನಕ್ಕೆ ಅದು ಮುಗಿಯುತ್ತದೆ. ಆಗ ಇನ್ನೂ ವಿವರಗಳು ತಿಳಿಯುತ್ತವೆ. ಆ ಮೇಲೆ ಮುಂದಿನ ಮಾತು."

"ಸಣ್ಣ ಹೈದನ ಮಾತೂ ಇದಕ್ಕೆ ಹೊಂದಿಕೆಯಾಗಿಲ್ಲವೆ ಗುರುಗಳೇ!"

"ನನಗೂ ಅದೇ ಆಶ್ಚರ್ಯವಾದುದು. ನೋಡು, ಚಿನ್ನಮ್ಮ, ದೇವರು ಸರ್ವಾಂತರ್ಯಾಮಿ ಅವನೇ ಕಾಲ ಸ್ವರೂಪಿ. ನಿಜವಾಗಿ ನೋಡಿದರೆ, ನೋಡುವ ಕಣ್ಣು ಒಂದಿದ್ದರೆ. ಹೋಳಿಯ ದಿವದ ಮರಳ ಕಣದಲ್ಲಿ ವಿಶ್ವದ ಭೂತ ಭವಿಷ್ಯತ್ತೆಲ್ಲ ಕಾಣಿಸುತ್ತದೆ. ನೀನು ಈಗ ಬೇಕೆಂದರೆ ಒಂದೆರಡು ಸ್ವರಗಳಲ್ಲಿಯೇ ರಾಗಭಾವವೆಲ್ಲ ಬರುವಂತೆ ಹಾಡುವುದಿಲ್ಲವೆ? ಬಹುಶಃ ನಾವು ಹಾಡುವಾಗ ಕುಣಿಯುವಾಗ ಒಂದನೆಯ ಕಾಲ, ಎರಡನೆಯ ಕಾಲ, ಮೂರನೆಯ ಕಾಲ, ತೋರಿಸುವಂತೆಯೇ ಇರಬೇಕು. ಈ ಕಾಲವೂ ತಾನೇ

ಏನು ? ನಾವು ಕಾಲ ಕಾಣುವುದು ಯಾವಾಗ ? ತಾಳ ಹಾಕಿದಾಗ. ರಾಗ ಹಾಡುವಾಗ ಕಾಲ ಎಲ್ಲಿ ಬಂತು ? ಹಾಗೆಯೇ ಬಹುಶಃ ಈ ಕಾಲವನ್ನೂ ಹಿಂದೆ ಮುಂದೆ ತಳ್ಳಬಹುದೋ ಏನೋ ? ”

“ ನನಗೆ ಅಪ್ಪರ ದರ್ಶನ ಮಾಡಿಸುವುದಿಲ್ಲವೇ ಗುರುಗಳೇ ? ”

“ ಊಹೂಂ. ಖಂಡಿತವಾಗಿಯೂ ಇಲ್ಲ. ಇನ್ನೆರಡುದಿನ ನಾನು ಈ ವಿಚಾರವೇ ಹೇಳಬಾರದಾಗಿತ್ತು. ಆದರೇನು ಮಾಡಲಿ ? ಆ ವಿಕ್ರಮೋರ್ವಶೀಯದ ವಿದೂಷಕನು ಹೇಳುವಹಾಗೆ ಎಂಥಾ ರಾಜರಹಸ್ಯ ವಿದ್ದರೂ ಇವಳನ್ನು ಕಂಡಕೂಡಲೇ ಅದು ಹೃದಯ ಬಡಿದುಕೊಂಡು ಬಂದು ಬಿಡುತ್ತದೆ. ಏನು ರನ್ನಮ್ಮ ? ನೀನು ನಿಮ್ಮ ಅಕ್ಕನಿಗೆ ಹೇಳು. ಇನ್ನೆರಡು ದಿನ ನಾನು ಇವಳೊಡನೆ ಮಾತನಾಡುವುದಿಲ್ಲ ಎಂದು.”

ರನ್ನಳು ನಕ್ಕು ಹೇಳಿದಳು. “ ಸರಿ ಗುರುಗಳೇ ! ಇನ್ನೆರಡುದಿನ ಈ ವಿಷಯವಾಗಿ ಖಂಡಿತವಾಗಿ ಒಂದು ಚಕಾರಕೂಡ ನುಡಿಯಬೇಡಿ. ಆದರೇನು ? ನೀವು ನೀವು ಮಾತನಾಡಿಕೊಳ್ಳುವುದಕ್ಕೆ ಇನ್ನೂ ಎಷ್ಟೋ ವಿಷಯಗಳಿವೆಯಲ್ಲ ? ”

“ ಹಾಗಾದರೆ, ಅವಳೇ ಏನಾದರೂ ಹೇಳಲಿ, ನಾನು ಕೇಳುತ್ತೇನೆ.”

“ ಆಗಲಿ, ಗುರುಗಳೇ, ಹೇಳಬೇಕಾದ್ದೂ ಇದೆ. ರನ್ನ, ಬಾಗಿಲಲ್ಲಿ ನಿಂತುಕೋ. ಯಾರಾದರೂ ಬಂದರೆ ಹೇಳಿಬಿಡು. ಗುರುಗಳೇ ! ಅವೊತ್ತು ರಾಯನ ಸನ್ಮಾನ ಸಭೆಯಲ್ಲಿ ಅಧ್ಯಕ್ಷತೆ ವಹಿಸದೆ ಗೋಲ್ಕೊಂಡಕ್ಕೆ ಓಡಿ ಹೋಗಿದ್ದ ಸೆಟ್ಟಿ ಸುಲ್ತಾನರನ್ನು ಕಂಡಿದ್ದನಂತೆ. ಸುಲ್ತಾನರು ಗೋಲ್ಕೊಂಡದ ವಜ್ರದ ಗಣಿಯನ್ನು ಗುತ್ತಿಗೆಗೆ ತಕೋ ಎಂದಿದ್ದಾರೆಯಂತೆ. ಇತ್ತ ಬಿದರೆ, ಅಹಮ್ಮದ್‌ನಗರ, ಬೀದರಿನ ಸುಲ್ತಾನರು ವಿಜಯನಗರದಮೇಲೆ ರಕ್ತ ಕಾರುತ್ತಿರುವರಂತೆ. ಅಹಮ್ಮದ್‌ನಗರದವನಂತೂ ದೆಹಲಿಗೂ ಕೂಡ ಬರೆದಿದ್ದಾನಂತೆ, ಸೈನ್ಯ ಕಳುಹಿಸಿಕೊಡಿ, ಎಂತ. ಬಿಜಾಪುರದವನು ಹಿಂದೆ ಮುಂದೆ ತುಳಿಯುತ್ತಿದ್ದಾನೆ. ಗೋಲ್ಕೊಂಡದವನು ಮಾತ್ರ ಮಗ್ಗುಲ ರಾಜ್ಯದವರೊಡನೆ ಯುದ್ಧ ಬೇಡ ಎಂದು ಸ್ಪಷ್ಟವಾಗಿ ಹೇಳುತ್ತಿರುವನಂತೆ. ಕರ್ನಾಟಕದಿಂದ ಸೈನ್ಯ ಇನ್ನು ಎರಡು ಮೂರು ದಿನದಲ್ಲಿ ಗೋವೆಗೆ

ಹೋಗುತ್ತದೆ. ಅಹಮ್ಮದ್‌ನಗರದವನು ಸೈನ್ಯ ನಡೆಸಿದನೆಂದರೆ ಗೋವೆಯ ಸೈನ್ಯ ಮುನ್ನುಗ್ಗುವುದಕ್ಕೆ ಸಿದ್ಧವಾಗಿರುತ್ತದೆ."

"ಅಲ್ಲಿಂದಲೇ ಬಂತೋ ಸುದ್ದಿ ?"

"ಇನ್ನೆಲ್ಲಿಂದ? ಅವರಿಗೆ ನನಗೆ ಹೇಳದಿದ್ದರೆ ಹೊಟ್ಟೆಯುಬ್ಬರವಲ್ಲ!"

"ಏನು ಚಿನ್ನಮ್ಮ! ಈ ಹಾಳಾದವನ ಹೊಟ್ಟೆಯಲ್ಲಿ ಒಬ್ಬ ಮಗನಾಗಲಿಲ್ಲ!"

"ಗುರುಗಳೇ, ಈ ವೇಳೆಗೆ ಆಗಿದ್ದರೆ ಚೆನ್ನಾಗಿತ್ತು. ಆಗಿಲ್ಲ. ಆಗ ದಿದ್ದರೇನು? ಅವನಿದ್ದಾನಲ್ಲ ರುಸ್ತುಂ. ಅವನು ಮುಂದಕ್ಕೆ ಚಕ್ರವರ್ತಿ ಯಾಗುತ್ತಾನೆ."

ರನ್ನಳು ಕೆಮ್ಮಿದಳು. ಇಬ್ಬರೂ ಮಾತು ಬಿಟ್ಟರು. ದಾಸಿಯು ಬಂದು "ಯಜಮಾನ್ ವೀರಪ್ಪಸೆಟ್ಟರು ಬಂದಿದ್ದಾರೆ. ದಿವಾನ್‌ಖಾನೆಯಲ್ಲಿ ಕುಳ್ಳಿರಿಸಿದ್ದೇನೆ." ಎಂದು ಅರಿಕೆ ಮಾಡಿದಳು.

ರನ್ನಳಂತೂ ಸರಿಯೇ ಸರಿ. ಚಿನ್ನಳೂ ಅಲಂಕಾರ ಮಾಡಿಕೊಂಡಿರ ಲಿಲ್ಲ. ದಂತದ ಮುಖಕ್ಕೆ ಕೆಂಪು ತೇಗದ ಚೌಕಟ್ಟು ಜೋಡಿಸಿದಂತೆ ಇರುವ ಆ ಚೇಪರಿಶಿನ, ತಿದ್ದಿದಂತಿರುವ ಕುಂಕುಮದ ಬೊಟ್ಟು, ಬಾಚಿದ್ದರೂ ಕೆದರಿರುವ ಕುರುಳು, ಸಣ್ಣ ಕಲಾಬತ್ತಿನಂಚಿನ ರೇಶ್ಮೆಯ ಎಣ್ಣೆಯಬಣ್ಣದ ಸೀರೆ, ಕೈಯ್ಯಲ್ಲಿ ಎರಡೆರಡು ವಜ್ರದ ಬಳೆಗಳು, ಕಿವಿಯಲ್ಲಿ ವಜ್ರದ ಓಲೆ, ತುರುಬಿನಲ್ಲಿ ಒಂದು ಕುಂದಣದ ಜಡೆಬಿಲ್ಲೆ. ಇನ್ನೇನೂ ಇಲ್ಲ. ಒಂದು ಗಳಿಗೆ ಯೋಚನೆಮಾಡಿ, ಹಾಗೆಯೇ ನೋಡುವುದು ಎನ್ನಿಸಿ, ಕರೆದುಕೊಂಡು ಬರುತ್ತೇನೆ ಗುರುಗಳೇ! ಎಂದು ಹೊರಟಳು.

ಆಚಾರ್ಯರು "ಹೀಗೇ ನೋಡುತ್ತೀಯೇನು ?" ಎಂದರು.

"ನಮಗೆ ಈ ಬೇಟೆ ಬೇಕಿಲ್ಲವಲ್ಲ." ಎಂದು ನಕ್ಕು ದಾಸಿಯೊಡನೆ ಮೆಟ್ಟಿಲಿಳಿದು ಹೋದಳು. ರನ್ನಳು ಅಲ್ಲಿಯೇ ಇದ್ದ ತಿರಸ್ಕರಿಣಿಯ ಹಿಂದೆ ಕುಳಿತುಕೊಂಡಳು.

ಚಿನ್ನಳು ಸೆಟ್ಟರಿಗೆ ಸಹಜವಾಗಿ ಕೈಮುಗಿದು "ನಮ್ಮ ಮನೆಗೆ ಭಾಗ್ಯ ಲಕ್ಷ್ಮಿ ಬಂದಂತಾಯಿತು. ದಯಮಾಡಿಸಬೇಕು" ಎಂದು ಮಹಡಿಯ ಮೇಲಿನ ಸಭಾಂಗಣಕ್ಕೆ ಕರೆದುಕೊಂಡು ಬಂದಳು. ದಾಸಿಯು ಎರಡ

ಊದುಬತ್ತಿಯನ್ನು ಹಚ್ಚಿ ತಂದು ಒಂದು ಮೂಲೆಯಲ್ಲಿಟ್ಟಳು. ಇನ್ನೊಬ್ಬಳು ಚಿನ್ನದ ತಟ್ಟೆಯಲ್ಲಿ ವೀಳ್ಯವನ್ನು ತಂದಿಟ್ಟಳು. ಗೋಮೇಧಿಕದ ಸಣ್ಣ ಡಬ್ಬಿಯಲ್ಲಿ ಸುಣ್ಣವಿಟ್ಟಿದೆ. ಪಚ್ಚೆಯ ಡಬ್ಬಿಯಲ್ಲಿ ಅಡಕೆಯನ್ನಿಟ್ಟಿದೆ. ಎಲೆಗಳನ್ನೆಲ್ಲಾ ಸುಣ್ಣ ಹಚ್ಚಿ ಮಡಿಸಿಟ್ಟಿದೆ. ಅಡಕೆ ಉಜ್ಜಡಿಕೆ. ಅದಕ್ಕೆ ಪರಿಮಳ ಕಟ್ಟಿದೆ. ಚಿನ್ನದವರ್ತಿ ಹಚ್ಚಿದೆ.

ಸೆಟ್ಟರು ತಮ್ಮನ್ನು ಕರೆದುಕೊಂಡು ಮೆಟ್ಟಿಲು ಹತ್ತಿಬಂದ ರೂಪರಾಶಿಯನ್ನು ಸಮೀಪವಾಗಿ ಇದುವರೆಗೆ ನೋಡಿರಲಿಲ್ಲ. ಮಾಟವಾಗಿ ಕಡೆದಿಟ್ಟರುವಂತಹ ದುಂಡು ದುಂಡಾದ ತೋಳು ಕೈಗಳು, ತೊಡೆ ಕಾಲ್ಗಳು, ಎದೆಯ ಆಭೋಗ, ನಿತಂಬದ ವಿಸ್ತಾರ, ನಡುವಿನ ಸೆಳೆಕು, ಅಂಗಲತೆಯ ಬಳುಕು, ಆ ಲಾವಣ್ಯ, ಆ ಕತ್ತು, ಆ ತುರುಬು, ಅವಳು ಮುಂದೆ ಹೋಗುತ್ತ ಹೋಗುತ್ತ ಹಿಂತಿರುಗಿ ನೋಡುವಾಗ, ನಗೆ ಮೊಗದಲ್ಲಿ ಮಿರುಗುವ ಮೀನುಗಳಂತೆ ಕಾಣುವ ಆ ಕಣ್ಣುಗಳು, ಎಲ್ಲವೂ ಸೆಟ್ಟರ ಮನಸ್ಸನ್ನು ಅಪಹರಿಸಿದವು. "ಇಷ್ಟಲ್ಲದೆ ಆ ದೊರೆ ಇವಳು ಹೇಳಿದ ಹಾಗೆ ಕುಣಿಯುವನೇ ?" ಎನ್ನಿಸಿತು. ಜೊತೆಗೆ "ಆ....ಮಗ ಏನು ಅದೃಷ್ಟ ಮಾಡಿದ್ದ? ಎಷ್ಟು ಭಾರಿಯ ಶಿವಪೂಜೆ ಮಾಡಿದ್ದ?" ಎಂದು ಎದುರಿಗಿಲ್ಲದ ಇನ್ನೊಬ್ಬನ ಮೇಲೆ ಮತ್ಸರವೂ ಹುಟ್ಟಿತು. "ಏನಾದರೇನು ? ಆಕಾಶದ ತಾರೆ. ಕೈನೀಡಿದರೂ ಸಿಕ್ಕುವುದಿಲ್ಲವಲ್ಲ" ಎಂದು ನಿಟ್ಟುಸಿರೂ ಬಂತು.

ಸೆಟ್ಟರಿಗೆ ಅವಳ ಹಿಂದೆ ಬರುತ್ತಿದ್ದಾಗ ದಿಗಿಲೂ ಆಯಿತು. "ಸುಲ್ತಾನನಿಗೆ ಇವಳನ್ನು ಕಂಡು ಬುದ್ಧಿ ಕೆಟ್ಟುಹೋದರೆ ತಾನಾಗಿ ಸುಲ್ತಾನನಿಗೂ ಚಕ್ರವರ್ತಿಗಳಿಗೂ ಜಗಳ ತಂದಿಟ್ಟಂತಾಗುವುದಲ್ಲ! ಹೇಗೆ?" ಎಂದು ಮನಸ್ಸು ಅಂಜಿತು. ಸೆಟ್ಟರು ಕಾಮದೇವನ ಕಟ್ಟೆಯಲ್ಲಿ ಕಾಣಿಕೆ ಕಟ್ಟದಂತಹ ವೈರಾಗ್ಯ ಶೇಖರರೇನಲ್ಲ. ಆದರೂ 'ಇಂತಹ ರೂಪರಾಶಿಯು ತಮ್ಮ ಕಣ್ಣೆದರೂ ಸುಳಿದಿಲ್ಲ'ವೆಂದು ತಮ್ಮಲ್ಲಿಯೇ ಒಪ್ಪಿಕೊಂಡರು. 'ಹೋಗಲಿ. ಈಗಲಾದರೂ ನೋಡಿದೆನಲ್ಲ' ಎನ್ನಿಸಿತು. ಸುಲ್ತಾನ ಇವಳ ಸಂಗೀತಕ್ಕೆ ಒಂದು ಲಕ್ಷ ಕೊಟ್ಟರೆ, ಇವಳಿಗೆ ತಾನು ಹತ್ತು ಲಕ್ಷ ಕೊಟ್ಟರೂ ತಪ್ಪಿಲ್ಲ ಎಂದು ಆಸೆ ಕುಣಿಯಿತು. ಈ ಹೊಯ್ಲಿನಲ್ಲಿ ಅವರಿಗೆ ಎದುರಿಗೆ ಏನು ಇರುವುದು ಎನ್ನುವುದೂ ಕೂಡ ತಿಳಿಯಲೊಲ್ಲದು. ಹೀಗಿರುವಾಗ ಎದುರಿಗೇ ಕುಳಿತಿಹ

ಭರತಾಚಾರ್ಯರು ಅವರ ಕಣ್ಣಿಗೆ ಬೀಳುವುದೆಂತು? ಅವರಿಗೆ ಚಿನ್ನಳೇ ಎಲ್ಲೆಲ್ಲೂ ಕಾಣುತ್ತಿದ್ದಳು.

ಚಿನ್ನಳು ನೋಡುತ್ತಿದ್ದ ಹಾಗೆಯೇ ಅವರ ಮನಸ್ಸಿನಲ್ಲಿ ಆಗಿರುವ ಅಲ್ಲೋಲ ಕಲ್ಲೋಲವನ್ನು ಕಂಡುಕೊಂಡಳು. ಒಳಗೊಳಗೇ ನಗುತ್ತ, ತನ್ನ ರೂಪರಾಶಿಯು ಅಷ್ಟು ಸುಲಭವಾಗಿ ಪಡೆದ ಗೆಲುವಿನಿಂದ ಸಂತೋಷಪಟ್ಟು ಕೊಳ್ಳುತ್ತ "ಯಜಮಾನರು ಇತ್ತ ನೋಡಬೇಕು. ನಮ್ಮ ಪೂರ್ವ ಪುಣ್ಯ. ಜನ್ಮ ಜನ್ಮಾಂತರಗಳಿಂದ ಸಂಪಾದಿಸಿದ ಭಾಗ್ಯ. ನಮ್ಮ ಗುರುಗಳು" ಎಂದು ವೈಯ್ಯಾರವಾಗಿ ಕೈಯನ್ನು ಅತ್ತ ತಿರುಗಿಸಿದಳು.

ಸೆಟ್ಟರು ನಿಜವಾಗಿಯೂ ಅವರು ಅಲ್ಲಿ-ುವುದನ್ನು ನೋಡಲಿಲ್ಲ. ಥಟ್ಟನೆ ಎದ್ದು ಕೈಮುಗಿದು "ಗುರುಗಳಿಗೆ ಸಾಷ್ಟಾಂಗ ಶರಣಾರ್ತಿ. ತಮ್ಮ ದರ್ಶನ ಆದುದು ಭಾಗ್ಯ" ಎಂದರು. ಆಚಾರ್ಯರು ಎದ್ದು ಥೋಡಾಗಳಿಂದ ಭಾರ ವಾಗಿರುವ ಎರಡು ಕೈ ಎತ್ತಿ ಮುಗಿದು, "ಯಜಮಾನರ ದರ್ಶನವಾದುದು ನಮ್ಮ ಭಾಗ್ಯ" ಎಂದರು. ಇಬ್ಬರೂ ಸಣ್ಣಗೆ ನಗುತ್ತ ತಮ್ಮ ತಮ್ಮ ಸುಖಾ ಸನಗಳಲ್ಲಿ ಕುಳಿತುಕೊಂಡರು. ಚಿನ್ನಳ ಪ್ರಾರ್ಥನೆಯಂತೆ ಸೆಟ್ಟರು ತಾಂಬೂಲವನ್ನು ಪರಿಗ್ರಹಿಸಿದರು. ಲೋಕಾಭಿರಾಮವಾಗಿ ಎರಡೆರಡು ಮಾತು ನಡೆಯಿತು.

ಚಿನ್ನಳು ವಿನಯನಮ್ರಳಾಗಿ ಸುಖವಾಗಿ ಮೃದುವಾದ ದನಿಯಲ್ಲಿ ಕೇಳಿದಳು, "ಯಜಮಾನರು ಈ ದಾಸಿಯ ಮೇಲೆ ಇಷ್ಟು ಕೃಪೆ ಮಾಡಿ ಇಲ್ಲಿಯವರೆಗೆ ದಯಮಾಡಿಸಿದುದು ನಮ್ಮ ಪುಣ್ಯ. ಸನ್ನಿಧಾನ ಇಷ್ಟು ಶ್ರಮ ವಹಿಸಬೇಕಾದ ಆ ಕಾರ್ಯಗೌರವವೇನೋ ಅಪ್ಪಣೆಯಾಗಬೇಕು. ನೋಡ ಬೇಕು ಎಂದು ಅಪ್ಪಣೆಯಾಗಿದ್ದರೆ ನಾನೇ ಬರುತ್ತಿದ್ದೆ."

ಸೆಟ್ಟರು ಗದಗುಟಿಸಿ ನಕ್ಕು ಕೇಳಿದರು, ಏನು ಗುರುಗಳೇ ಇಷ್ಟು ಹುಸಿಯನ್ನು ಇಷ್ಟು ರಸನಾಗಿ ಒಕ್ಕಣಿಸುವವರು ಈ ಭೂಲೋಕದಲ್ಲಿ ಇನ್ನು ಯಾರಾದರೂ ಉಂಟೆ ತಾವು ಹೇಳಿ."

ಚಿನ್ನಳಿಗೆ 'ಸೆಟ್ಟಿ ಲಲ್ಲೆ ಹೊಡೆಯುವ ಮನಸ್ಸಿನಲ್ಲಿದ್ದಾನೆ; ಸಾಧ್ಯವಾದರೆ ವಜ್ರದ ಗಣಿಯ ವೃತ್ತಾಂತ ಅವನಿಂದಲೇ ಸಂಗ್ರಹಿಸಬೇಕು' ಎನ್ನಿಸಿತು. ತಾನೂ ಕೊಂಚ ಅದೇ ಭಾವವನ್ನು ವಹಿಸಿ, "ನಿಜ, ನಮ್ಮ ಹುಸಿ ಹೊತ್ತು

ಹೋಗಲಿ ಎಂತ. ಅತ್ತ ಕಡೆಯಿಂದ ಬರುವ ಹುಸಿ ಲಾಭ ತರಲಿ ಎಂತ. ಅಷ್ಟೇ ತಾನೇ ವ್ಯತ್ಯಾಸ ? " ಎಂದಳು.

ಸೆಟ್ಟರು ಕೈಮುಗಿದರು. " ನಾನು ನಿಮ್ಮ ವಿಚಾರ ಕೇಳಿದ್ದೆ. ಏನೋ ಅರಮನೆಯಲ್ಲಿ ದೂರದಿಂದ ಮೋಡದ ಮಿಂಚು ಕಂಡಹಾಗೆ ನೋಡಿದ್ದುದು. ಆದರೆ, ತಮ್ಮ ರೂಪ ಎಷ್ಟು ಸೊಗಸೋ ಬುದ್ಧಿಯೂ ಅಷ್ಟೇ ತೀವ್ರ ಎನ್ನುವುದು ಚೆನ್ನಾಗಿಯೂ ಮನಸ್ಸಿಗೆ ತಾರ್ಕಣೆಯಾಯಿತು. ನಿಜವಾಗಿಯೂ ನೀವು ಗೆದ್ದಿರಿ."

ಚಿನ್ನಳು ಗೆಲುವನ್ನು ಅಂಗೀಕರಿಸಿಕೊಂಡೂ ಸೋತವಳಂತೆ ನಟಿಸುತ್ತಾ " ಏನು ಗುರುಗಳೇ, ಇವರು ರಾಜರಾಜರಿಗೆಲ್ಲ ಮಂಕುಬೂದಿ ಎರಚಿ ಕಲ್ಲು ಕೊಟ್ಟು ಚಿನ್ನ ತಂದು ತುಂಬಿಕೊಳ್ಳುವ ಧೀರರು. ನಾನು ತಂಬೂರಿ ಮೀಟಿ ಕೊಂಡು ಸಾ ರಿ ಗಾ ಮ ಎಂದುಕೊಂಡು ಮೂಲೆಯಲ್ಲಿ ಕುಳಿತುಕೊಂಡಿರುವ ಹೆಣ್ಣು ಹೆಂಗಸು. ಇವರಿಗೆ ಸೋಲಂತೆ. ನಮಗೆ ಗೆಲುವಂತೆ. ತಾವು ಒಪ್ಪುತ್ತೀರಾ ಗುರುಗಳೇ ?" ಅವರು ನಗುತ್ತಾ "ಅವರು ಹೇಳಿದ್ದು ಬುದ್ಧಿಯ ವಿಚಾರ. ಹಿಂದೆ ಮುಂದೆ ತಿಳಿಯದೆ ನಾನು ಮಾತನಾಡುವುದು ನ್ಯಾಯವೇ ?" ಎಂದರು.

ಸೆಟ್ಟರು, " ಇನ್ನು ಯಾವುದೂ ಅಲ್ಲ ಗುರುಗಳೇ, ಸನ್ಮಾನಸಭೆ ವಿಚಾರ. ನಾನು ನಮ್ಮ ಚಿನ್ನಾಸಾನಿಯವರ ಸಂಗೀತ ರಾಜಧಾನಿಯವರೆಲ್ಲ ಕೇಳಲಿ ಎಂದು ಇವರ ಸಂಗೀತ ಇಡಿಸಿ ಎಂದೆ ಸ್ವಾಮಿ. ತಾವು ಹಿರಿಯರು ಹೇಳಿ. ನಾಟಕ ಸಾಹಿತ್ಯ. 'ಅಮ್ಮನವರಿಗೆ ಸಂಗೀತ ಸಾಹಿತ್ಯ ಎರಡೂ ಎರಡು ಸ್ತನಗಳು' ಎನ್ನುತ್ತಾರೆ. ಒಂದಕ್ಕೆ ಗೌರವ ಮಾಡಿದಾಗ ಇನ್ನೊಂದು ಜೊತೆ ಸೇರಬೇಕು; ಸೇರಲಿ, ಎನ್ನುವುದು ನನ್ನ ಭಾವ. ಅಲ್ಲದೆ, ಇಂಥಾ ಸಂಗೀತಗಾರಳು ಗೋಲ್ಕೊಂಡ, ಬಿಜಾಪುರ. ಬಿದರೆ, ಅಹಮ್ಮದ್‌ನಗರ, ಬಿಹಾರ್, ಕೊನೆಗೆ ದಿಳ್ಳಿ ದ್ವೀಪಾಂತರಗಳಲ್ಲೂ ಇಲ್ಲವಲ್ಲ. ಈಕೆಗೆ ಶುಭವಾಗಿ ಒಂದು ತಾಂಬೂಲ ಕೊಟ್ಟು ಎರಡು ಒಳ್ಳೆ ಮಾತು ಹತ್ತು ಜನರಲ್ಲಿ ಆಡುವುದಕ್ಕೆ ಅವಕಾಶವಾಗಲಿ ಎಂದು ನಾನೇ ಈಕೆಯ ಸಂಗೀತ ಏರ್ಪಾಡು ಮಾಡಿ ಎಂದರೆ ಏನು ತಪ್ಪು ? ಅದೇ ಸಮಯ ಸಾಧಿಸಿ ಈಕೆ ನಮಗೇ ತಾಂಬೂಲ ಓದಿಸಿದಳು. ಹತ್ತು ಜನರಲ್ಲಿ ನಾನು ಮುಖ ಇಟ್ಟುಕೊಂಡ್ಯ

ಬರುವುದಕ್ಕೇ ಆಗದಹಾಗೆ ಮಾಡಿಬಿಟ್ಟಳು. ತಾನು ಸಂಗೀತ ಮುಫತ್ತಾಗಿ ಹಾಡುತ್ತೇನೆ ಎಂದವಳು ಈಕೆ ಚಂದಾನೂ ಕೊಡಬಹುದೇ ? ಅದೂ ಎಷ್ಟು ? ಯಜಮಾನ್ ವೀರಪ್ಪಸೆಟ್ಟಿ ಕೊಟ್ಟಿರುವುದರ ಹತ್ತರಷ್ಟು. ಎಲ್ಲಾದರೂ ಉಂಟೆ? ತಾವು ಹೇಳಿ ಗುರುಗಳೇ ! ಈಕೆ ಹೀಗೆ ಮಾಡಿದ್ದರ ಅರ್ಥ ಏನು ? ಏ, ವೀರಪ್ಪಾ, ಅವೊತ್ತು ನೀನು ಬರಬೇಡ ಎಂತ ಬಾಯಿಬಿಟ್ಟು ಹೇಳಿದ ಹಾಗೆ ತಾನೇ? ಅದಕ್ಕಾಗಿಯೇ ಈದಿವ ಬಂದುದು. 'ಪುಣ್ಯಾತ್ಮಗಿತ್ತಿ, ನಮ್ಮ ಮಾನ ನೀನು ಕೊಂಡುಕೊಂಡುಬಿಟ್ಟದ್ದೀಯೆ. ದಯುವಿಟ್ಟು ಅದನ್ನು ನನುಗೆ ಹಿಂದಕ್ಕೆ ಕೊಟ್ಟುಬಿಡು' ಎಂದು ಹೇಳುವುದಕ್ಕೆ. ಇಗೋ, ಕಾಣಿಕೆಕೂಡ ತಂದಿದ್ದೀನಿ. ಈ ವಜ್ರಗಳು ಬ್ರಹ್ಮಜಾತಿಯುವು. ಬಹು ಶ್ರೇಷ್ಠವಾದವು. ಅರಿಸಿ ತೆಗೆದರೂ ಸಿಕ್ಕುವಂಥವಲ್ಲ. ಇವು ಒಂದೊಂದೂ ಕಳ್ಳನ ಕೈಗೆ ಕೊಟ್ಟರೂ ಒಂದೊಂದು ಥೈಲಿ ಆಗುವಂಥವು. ಇದೋ ಐವತ್ತು ಇವೆ. ದಯುವಿಟ್ಟು ಒಪ್ಪಿಸಿಕೊಳ್ಳಬೇಕು." ಎಂದು ಒಂದು ಪೊಟ್ಟಣವನ್ನು ತಟ್ಟೆಯಲ್ಲಿಟ್ಟು ಮುಂದೆ ತಳ್ಳಿದರು.

ಚಿನ್ನಳು ಪೊಟ್ಟಣವನ್ನು ಬಿಚ್ಚಿ ರತ್ನಪಡಿವ್ಯಾಪಾರಿಗಿಂತ ಹೆಚ್ಚಾಗಿ ಅವುಗಳನ್ನು ಪರೀಕ್ಷಿಸಿದಳು. ಎಲ್ಲಿವೂ ಜೋಳದೇಶದ ಸಾಣೆಹಿಡಿದಿರುವ ಸುಂದರವಾದ ರತ್ನಗಳು. ಹಿಡಿದಿಟ್ಟ ಮಿಂಚಿನತುಂಡುಗಳಂತೆ ಹೊಳೆಯುತ್ತ ನೋಡುವವರ ಕಣ್ಮನಗಳನ್ನು ಕೂಡಲೇ ಅಪಹರಿಸುವಂತಹ ಸೊಗಸಿನ ಕಲ್ಲುಗಳು. ನೋಡಿ ಸಂತೋಷಪಟ್ಟು ಗುರುಗಳಕೈಗೆ ಕೊಟ್ಟು ಅವರು ಏನು ಹೇಳುವರೋ ಎಂದು ಕಾದುಕುಳಿತಳು. ಅವರೂ ಅಷ್ಟು ಹೊತ್ತು ನೋಡಿ "ಭೇಷ್ ! ಭೇಷ್ ! ಯುಜಮಾನರು ಹೇಳಿದುದು ನಿಜ. ಹುಡುಕಿದರೂ ಸಿಕ್ಕುವ ಜಾತಿಯಲ್ಲ ಈ ರತ್ನಗಳು" ಎಂದು ಮೆಚ್ಚಿಕೊಂಡರು. ಗುರುಗಳು ಕೊಟ್ಟಪೊಟ್ಟಣವನ್ನು ಮತ್ತೆ ತಟ್ಟೆಯಲ್ಲಿಟ್ಟು, ಸೆಟ್ಟರಕಡೆ ಸರಿಸಿದಳು. ಅವಳು ಮಾತನಾಡದೆ ಮೌನವಾಗಿರುವುದನ್ನು ಕಂಡು ಸೆಟ್ಟರಿಗೆ ಆಶ್ಚರ್ಯವಾಯಿತು. ಅವಳು ಅವುಗಳನ್ನು ನೋಡುವುದರಲ್ಲೇ ಅವಳಿಗೆ ರತ್ನಪರೀಕ್ಷೆ ಗೊತ್ತು ಎನ್ನುವುದು ಆ ಖದೀಮನಿಗೆ ಗೊತ್ತಾಯಿತು. ಅಂಥಾದ್ದರಲ್ಲೂ ಅವಳು ಏನೂ ಹೇಳದೆ ಇರುವುದನ್ನು ನೋಡಿ "ಏನ್ರಿ ನಿಜವೋ ಸುಳ್ಳೋ ? ಇಂಥಾ ರತ್ನಗಳು ಹುಡುಕಿದರೂ ಸಿಕ್ಕುವುದಿಲ್ಲ. ಇದನ್ನು ತಾವು ಒಪ್ಪಿಸಿಕೊಳ್ಳಿ ಎಂದು ತಂದಿದ್ದೇನೆ." ಎಂದರು.

"ರತ್ನಗಳೇನೋ ಪ್ರಶಸ್ತವಾದವು ಸಂದೇಹವಿಲ್ಲ. ಯಾರಾದರೂ ಗಣಿಯಿದ್ದವರು ಮಾತ್ರ ಇಂಥಾರತ್ನಗಳನ್ನು ತರಬಹುದೇ ಹೊರತು ಇತರರಿಗೆ ಸಾಧ್ಯವಿಲ್ಲ."

ಚಿನ್ನಳ ಬಾಣ ಗುರಿಯನ್ನು ಭೇದಿಸಿತು. ಸೆಟ್ಟರು ಆ ಸ್ತೋತ್ರವನ್ನು ಸ್ವೀಕರಿಸುತ್ತಾ ಹೇಳಿದರು. "ನಿಮ್ಮ ದಯೆಯಿದ್ದರೆ ವಜ್ರದಗಣಿಯೂ ನಮ್ಮ ಕೈಗೆ ಬರುತ್ತದೆ. ಅದೇನು ದೊಡ್ಡ ವಿಷಯ! ನಮ್ಮ ಗುರುಗಳಂತಹ ಹಿರಿಯರು ಆಶೀರ್ವಾದ ಮಾಡಿದರೆ ವಜ್ರದಗಣಿಯೆನ್ನುವುದು, ಇಲ್ಲಿಂದ ನದಿಗೆ ಹೋಗಿ ನೀರು ತುಂಬಿಕೊಂಡು ಬರುವಷ್ಟು ಸುಲಭ."

ಚಿನ್ನಳು ಮೈಯೆಲ್ಲ ಕಿವಿಯಾಗಿ ಕೇಳಿದಳು. ಸೆಟ್ಟರ ಮಾತಿನಲ್ಲಿ ಒಳಗೆ ಒಳಗೆ ಏನೋ ಗೂಢವಾದ ಅರ್ಥವಿದ್ದಂತೆ ತೋರಿತು. ಆದರೂ ಅದು ಸಿಕ್ಕಲಿಲ್ಲ ಅದರಿಂದ ಕಣ್ಣಿನ ನೋಟದಿಂದ ಅವರ ಹೃದಯಾಂತರಾಳವನ್ನೆಲ್ಲಾ ಪರೀಕ್ಷಿಸುವವಳಂತೆ ತೀವ್ರವಾಗಿ ನೋಡುತ್ತ, ಆನೋಟದ ತೀವ್ರತೆಯನ್ನು ಮಂದಹಾಸದಿಂದ ಪರಿಹರಿಸುತ್ತಾ ಕೇಳಿದಳು, "ಅಪ್ಪಣೆಯಾಗಲಿ, ತಮಗೆ ವಜ್ರದಗಣಿ ಸಿಕ್ಕುವುದಕ್ಕೆ ನಾವು ಯಾವಬೆಟ್ಟಕ್ಕೆ ಕಲ್ಲು ಹೊರಬೇಕು? ಯಾವನದಿಗೆ ನೀರು ಹೊರಬೇಕು?"

ಸೆಟ್ಟರು "ಭಲೆ ಭಲೆ! ಎಂತಹಮಾತು! ಏನು ಚತುರಿ! ಪುಣ್ಯಾತ್ಮಗಿತ್ತಿ! ನೀವು ಗೆಲ್ಲಿರಿ ಎಂದು ಒಂದುಸಲ ಜೈ ಎಂದರೆ ಸಾಕು. ನಿಮ್ಮ ಬಾಯಿಹರಕೆ ಸಾಕು. ನಿಮ್ಮ ಹತ್ತಿರ ಮುಚ್ಚಿಡಬೇಕಾದುದೇನು? ಗೋಲ್ಕೊಂಡದ ಸುಲ್ತಾನರೇ ಬಾಯಿಬಿಟ್ಟು ಆ ಗಣಿಯನ್ನು ಗುತ್ತಿಗೆಗೆ ಕೊಡುವುದಾಗಿ ಹೇಳಿದ್ದಾರೆ. ನಿನ್ನೆಯದಿನ ನಾವು ವರ್ತಕರೆಲ್ಲ ಸೇರಿ ಐದುಕೋಟಿ ಅದಕ್ಕಾಗಿ ಬಂಡವಾಳ ಹಾಕುವುದಕ್ಕೂ ಮಾತನಾಡಿ ಆಯಿತು. ಇನ್ನು ಚಕ್ರವರ್ತಿಗಳ ಅಪ್ಪಣೆ ಪಡೆಯಬೇಕು. ಇನ್ನೊಂದೆರಡು ವಿಷಯ. ಅವೂ ಸರಿಹೋಗುತ್ತವೆ ಎನ್ನಿ. ಒಂದುವೇಳೆ ನಮಗೆ ಅಸಾಧ್ಯವಾದರೆ ಗುರುಗಳಂಥಾ ಹಿರಿಯರಿಲ್ಲವೆ? ಅವರೇನು ಮಹಾತಪಸ್ವಿಗಳು. ದಾಸರಾಯರನ್ನೂ, ವ್ಯಾಸರಾಯರನ್ನೂ ಮೆಚ್ಚಿಸಿದ ಮಹಾನುಭಾವರು, ಅವರು ಒಂದುಸಲ ತಲೆಯಮೇಲೆ ಕೈಯಿಟ್ಟು ಗೆಲ್ಲು ಎಂದರೆ ನಾವು ಸೋಲುವುದು ಎಲ್ಲಿಂದ ಬಂತು? ಎಲ್ಲಕ್ಕಿಂತ ಹೆಚ್ಚಾಗಿ ನಮ್ಮದು ವಿಜಯನಗರ. ನಾವು ಎಲ್ಲಿಹೋದರೂ ವಿಜಯ ನಮ್ಮ ಪಾಲಿಗೆ

ಕಟ್ಟಿಟ್ಟದ್ದು. ಈ ತುರುಕದೊರೆಗಳ ಹಾವಳಿಯಲ್ಲಿ ಯಾವುದು ಏನಾಗುತ್ತದೆಯೋ ಏನೋ. ಗೋಲ್ಕೊಂಡದಲ್ಲಿ ನಮ್ಮದೊಂದು ಠಾಣಾ ಇರಲಿ ಎಂದು ಇಷ್ಟು ಪ್ರಯತ್ನ. ಏನು ಗುರುಗಳೇ!" ಎಂದು ಸೆಟ್ಟರು ಆಪ್ತವಾಳಿಕೆಯನ್ನು ಮೆರೆಯುತ್ತ ಕೊಂಚದೀರ್ಘವಾಗಿಯೇ ಮಾತನಾಡಿದರು.

ಮತ್ತೆ ತಟ್ಟೆಯಲ್ಲಿದ್ದ ವಜ್ರಗಳ ಪ್ರಸ್ತಾಪವೆತ್ತಿ ಬಲು ಸಲಿಗೆಯಿಂದ "ಚಿನ್ನಾಸಾನಿ, ತಮಗೆ ನಾವು ಸೋತಿದ್ದೇವೆ. ಆ ಸೋಲಿನ ಸೊಂಕು ಕಳೆಯಲಿ ಎಂದು ತಮ್ಮ ಬುದ್ಧಿಗೆ ಕಾಣಿಕೆಯಾಗಿ ಈ ವಜ್ರಗಳನ್ನು ಒಪ್ಪಿಸಿದ್ದೇವೆ. ಇವು ನಮ್ಮದಾಗಿ ತಮ್ಮಲ್ಲಿರಲಿ. ಮತ್ತೆ ಯಾವಾಗಲಾದರೂ ಸಂದರ್ಭವೊದಗಿ ನಾವೇನಾದರೂ ಪ್ರಾರ್ಥನೆ ಮಾಡಿಕೊಂಡರೆ, ಹೋದ ಸಲ ಮಾಡಿದ ಹಾಗೆ ಮಾಡಿ ನಮಗೆ ಅವಮಾನ ಮಾಡಬೇಡಿ, ಸಲ್ಲಿಸಿಕೊಡಿ ಎಂದು ಈಗಲೇ ಕೈಮುಗಿದು ಕೇಳಿಕೊಳ್ಳುತ್ತೇವೆ. ದಯವಿಟ್ಟು ಒಪ್ಪಿಸಿಕೊಳ್ಳಿ" ಎಂದು ಪರಮಾದರದಿಂದ ಹೇಳಿದರು.

ಇನ್ನೂ ಚಿನ್ನಾಸಾನಿಯು ಮನಸ್ಸು ಮಾಡದಿರುವುದನ್ನು ನೋಡಿ, "ಗುರುಗಳೇ, ತಮ್ಮ ಪಾದಸಾಕ್ಷಿಯಾಗಿ ಈಕೆಯಲ್ಲಿ ನನಗೆ ಇನ್ನೇನೂ ದುರಭಿಪ್ರಾಯವಿಲ್ಲ. ಇದನ್ನು ತೆಗೆದುಕೊಳ್ಳುವಹಾಗೆ ತಾವಾದರೂ ಹೇಳಿ" ಎಂದು ಅವರ ನೆರವನ್ನು ಕೋರಿ, ಏನೋ ಥಟ್ಟನೆ ನೆನಪಿಗೆ ಬಂದಹಾಗೆ ಮಾಡಿ, "ಇವೊತ್ತು ನಮ್ಮ ವರ್ತಕಮಂಡಲಿಯವರು ಮತ್ತೆ ಸೇರುತ್ತಾರೆ. ನಾನು ಅಲ್ಲಿಗೆ ಹೊತ್ತಿಗೆ ಸರಿಯಾಗಿ ಹೋಗಬೇಕು. ದಯವಿಟ್ಟು ಅಪ್ಪಣೆ ಕೊಡಿ" ಎಂದು ಎದ್ದು ವೀಳಯವನ್ನು ಮುಟ್ಟಿ ಹೊರಟೇಬಿಟ್ಟರು. ಚಿನ್ನಳು ಸದಾಚಾರವನ್ನು ಪಾಲಿಸಲು ಬಾಗಿಲಿಂದೀಚೆಗೆ ಎರಡು ಹೆಜ್ಜೆ ಬಂದಳು.

ಸೆಟ್ಟರು ತಟಕ್ಕನೆ ಹಿಂತಿರುಗಿ "ಇನ್ನು ಯಾವಾಗಲಾದರೂ ಬಂದರೆ ತಪ್ಪಿಲ್ಲವಲ್ಲ?" ಎಂದರು. ಚಿನ್ನಳು ಆ ಪ್ರಶ್ನೆಗೆ ಸಿದ್ಧಳಾಗಿರಲಿಲ್ಲ. ಆ ಅಸಿದ್ಧತೆಯಲ್ಲಿ ಅರ್ಧ ಚದುರಿದ ಮನಸ್ಸಿನಲ್ಲಿ ತಾನೇನು ಹೇಳುವೆನೆಂಬುದನ್ನು ತಾನೇ ಅರಿಯದೆ "ಅದಕ್ಕೇನಂತೆ?" ಎಂದಳು. ಸೆಟ್ಟರೂ ರಸಿಕರಾಜನ ಸೊಗಸಿನ ನಗುನಕ್ಕು ಅವಳು ಏನಾಗುವುದು ಎಂದು ಅರಿಯುವುದಕ್ಕಿಂತ

ಸಮುಚಿತವಾಗಿ ಕೈಹಿಡಿದು ಅದನ್ನು ಮುಟ್ಟಿಟ್ಟುಕೊಂಡು ಸರಸರನೆ ಹೊರಟು ಹೋದರು.

ಚಿನ್ನಳಿಗೆ ದಿಗ್ಭ್ರಾಂತಿಯಾಗಿಹೋಯಿತು. ಅರ್ಧ ಕೋಪ, ಅರ್ಧ ವಿಸ್ಮಯಗಳಿಂದ ನಿದಾನವಾಗಿ ಒಳಕ್ಕೆ ಬಂದಳು. ತೆರೆಯ ಹಿಂದಿದ್ದ ರನ್ನಳೂ ಈಚೆಗೆ ಬಂದಳು. ಗುರುಗಳಿಗಾಗಲಿ ಆ ಶಿಷ್ಯರಿಗಾಗಲಿ ಸೆಟ್ಟಿಯ ವರ್ತನೆ ಎಳ್ಳಷ್ಟೂ ಅರ್ಥವಾಗಲಿಲ್ಲ.

# ಅಧ್ಯಾಯ ಐದು

ಸೆಟ್ಟರಿಗೆ ದಾರಿಯ ಉದ್ದಕ್ಕೂ ನಿಜವಾಗಿ ಯಾವುದೋ ಒಂದು ಲೋಕಕ್ಕೆ ಹೋಗಿಬಂದಿರುವಂತೆ ಆಯಿತು. ಚಿನ್ನಳ ಕೈಹಿಡಿದುಕೊಂಡು ಮುತ್ತಿಟ್ಟಾಗ ಏನೋ ಬಹಳ ಪ್ರಿಯವಾದ ಒಂದು ಚಳುಕು ಹೊಡೆದಂತಾಗಿ ಮೈಯೆಲ್ಲ ಮುಳ್ಳುಕಟ್ಟಿತು. ಅವರು ಯಾವ ಹೆಂಗಸನ್ನು ಮುಟ್ಟಿದಾಗಲೂ ಹಾಗಾಗಿರಲಿಲ್ಲ. ದಾರಿಯುದ್ದಕ್ಕೂ ಅವರಿಗೆ ಇನ್ನು ಯಾವ ಯೋಚನೆಯೂ ಇಲ್ಲವೇ ಇಲ್ಲ. "ಸುಲ್ತಾನ ಇವಳ ಸಂಗೀತಕ್ಕೆ ಒಂದು ಲಕ್ಷ ಕೊಡುತ್ತೇನೆಂದ. ಇವಳಿಗೇ ಆದರೆ ಇನ್ನೆಷ್ಟು ಲಕ್ಷ ಕೊಡಬಾರದು? ಬೇಕಾದುದು ಆಗಲಿ. ಇವಳು ಇನ್ನೊಬ್ಬರ ಪಾಲು ಆಗವಂತೆ ನೋಡಿಕೊಳ್ಳಬೇಕು. ವಜ್ರದ ಗಣಿಯೂ ನಮ್ಮದೇ ಆಗಬೇಕು. ಅದಕ್ಕಿಂತ ಹೆಚ್ಚಾಗಿ ಈ ಭೋಗದ ಖನಿಯೂ ಬೇಕೇಬೇಕು. ಈ ಎರಡು ಖನಿ ಹಿಡಿದರೆ ನಮ್ಮಂತಹ ಭಾಗ್ಯವಂತರು ಇನ್ನಿಲ್ಲ" ಎಂದು ಅಳೆದು ಸುರಿದು ಮಾಡುತ್ತಿದ್ದರು. ಅವರು ಯಾವುದನ್ನು ಯೋಚಿಸುವುದಕ್ಕೆ ಹೊರಟರೂ ಅವಳ ಆ ಕೋಮಲ ಹಸ್ತದ ಮೃದು ಸುಖಸ್ಪರ್ಶವೇ ನೆನಪಾಗುವುದು. ಮನಸ್ಸು ಆಗಲೇ ಆ ಸುಖದ ಸಾಗರದಲ್ಲಿ ಓಲಾಡಿದಂತೆ, ಮುಳುಗಿ ತೇಲಿದಂತೆ, ಏನೇನೋ ಯೋಚನೆ ಗಳಲ್ಲಿ ಬಿದ್ದು ಒದ್ದಾಡಿ ಕುಣಿದು ಕುಪ್ಪಳಿಸುವುದು.

ಗಾಡಿಯು ಮನೆಗೆ ಬಂತು. ಸೆಟ್ಟರು ಒಳಕ್ಕೆ ಹೋಗುತ್ತಿದ್ದಹಾಗೆಯೇ ಅರಮನೆಯಿಂದ ಬಂದಿರುವ ಪತ್ರವೊಂದು ಕೈಸೇರಿತು. ಆ ದಿನವೇ ಸಂಜೆ ಸೂರ್ಯಾಸ್ತಮಯವಾದ ಒಂದು ಮುಹೂರ್ತದ ಸುಸಮಯದಲ್ಲಿ ಸೆಟ್ಟರು ದರ್ಶನಕ್ಕೆ ಬರಬಹುದು ಎಂದು ಅಪ್ಪಣೆಯಾಗಿದೆಯೆಂದು ತಿಳಿಯಿತು. ಅವರೂ ಚಕ್ರವರ್ತಿಗಳ ದರ್ಶನಕ್ಕೆ ಹೋಗುವುದಕ್ಕೆ ಸಿದ್ಧರಾದರು.

ಗೊತ್ತಾದ ಹೊತ್ತಿಗೆ ಸಚಿವರು ಕುದುರೆ ಬಾಗಿಲಲ್ಲಿ ಕಾದಿದ್ದು ಸೆಟ್ಟರನ್ನು ಕರೆದುಕೊಂಡು ವಿದ್ಯಾರಣ್ಯ ವಿಲಾಸದ ತೋಟ್ಟಿಗೆ ಕರೆದುಕೊಂಡು ಹೋದರು. ಸ್ವಲ್ಪ ಹೊತ್ತಿನೊಳಗಾಗಿ ಚಕ್ರವರ್ತಿಗಳ ಸವಾರಿಯು ನರಸಿಂಹ ವಿಲಾಸಕ್ಕೆ ದಯಮಾಡಿಸಿತು. ಸೆಟ್ಟರು ಆಂಧ್ರಕರ್ನಾಟಕ ರಮಾರಮಣರ ಸಮ್ಮುಖದಲ್ಲಿ ಗಂಭೀರವಾಗಿ ಭಯಭಕ್ತಿಗಳಿಂದ ಹಾರ ತುರಾಯಿ ಸಮರ್ಪಿಸಿ

ದರು. ಅವರೆಕಾಳು ಗಾತ್ರದ ಆಣಿಮುತ್ತೊಂದು, ಅದರ ಜೊತೆಗೆ ಸರಿಯಾದ ಎರಡು ಮುದ್ದಾದ ಪಚ್ಚೆಗಳು ಬಹು ಸೂಕ್ಷ್ಮವಾಗಿ ಕುಂದಣದಲ್ಲಿ ಕೂಡಿಸಿರುವ ಉಂಗುರವೊಂದನ್ನು ಕಾಣಿಕೆ ಮಾಡಿದರು. ಗರ್ವಗಂಧಿಗಳಾದ ಚಕ್ರವರ್ತಿಗಳೂ ಅದನ್ನು ದೀಪದ ಬೆಳಕಿನಲ್ಲಿ ನೋಡಿ ತಮ್ಮ ಮೆಚ್ಚುಗೆಯನ್ನು ತೋರಿಸಿದರು. "ವರ್ತಕ ಕುಲದ ಯಜಮಾನರು ತಮ್ಮ ಸಿಂಹಾಸನದಲ್ಲಿ ಇಟ್ಟಿರುವ ಅಚಲ ಭಕ್ತಿಯ ಗುರುತಾಗಿ ಇದು ಮಹಾಸ್ವಾಮಿಯವರ ಬೆರಳನ್ನು ಅಲಂಕರಿಸಬೇಕು ಎಂದು ಬೇಡಿಕೊಳ್ಳುತ್ತೇವೆ ಮಹಾಸ್ವಾಮಿ" ಎಂದು ಸೆಟ್ಟರು ವಿನಯವಾಗಿ ವಿಜ್ಞಾಪಿಸಿಕೊಂಡರು.

ಚಕ್ರವರ್ತಿಗಳೂ ನಗುತ್ತ ಅದನ್ನು ಬೆರಳಿಗೆ ಜೋಡಿಸುತ್ತಾ "ಇಂತಹ ಉತ್ತಮವಾದ ಆಭರಣ ಕಾಣಿಕೆಯಾಗಿ ಒಪ್ಪಿಸಿದನೆ, ಅದನ್ನು ಇಟ್ಟುಕೊಳ್ಳಿ ಎಂದು ಹೇಳಬೇಕಾಗಿಯೇ ಇಲ್ಲ. ಸೆಟ್ಟರೆ! ಮುತ್ತಿಗಿಂತ ಪಚ್ಚೆ ಚೆನ್ನಾಗಿದೆ; ಪಚ್ಚೆಗಿಂತ ಮುತ್ತು ಚೆನ್ನಾಗಿದೆ. ಎರಡಕ್ಕಿಂತ ನೀವು ಆಡಿದ ಮಾತು ಇನ್ನೂ ಚೆನ್ನಾಗಿದೆ. ಆಯಿತು. ಮುಂದೆ.?"

"ಮಹಾಸ್ವಾಮಿ! ನಾನು ಗೋಲ್ಕೊಂಡಕ್ಕೆ ಹೋಗಿದ್ದಾಗ ಸುಲ್ತಾನರ ಭೇಟಿ ಮಾಡಿದೆ. ಮಾತು ಮಾತಿಗೆ ಬಂದು ಕೆಲವು ಷರತ್ತುಗಳ ಮೇಲೆ ಗೋಲ್ಕೊಂಡದ ವಜ್ರದ ಗಣಿಗಳನ್ನು ಗುತ್ತಿಗೆ ಕೊಡುವುದಕ್ಕೆ ಸಿದ್ಧವಾಗಿದ್ದಾರೆ. ಆ ಗಣಿಗಳನ್ನು ನಡೆಸುವುದಕ್ಕೆ ಬೇಕಾದ ಬಂಡವಾಳ ಸುಮಾರು ಐದು ಕೋಟಿ ಎಂದು ಲೆಕ್ಕಮಾಡಿ, ತಮ್ಮ ಪಾದಸೇವಕರಾದ ವರ್ತಕ ಮಂಡಲಿಯವರು ಅಷ್ಟು ಹಣವನ್ನೂ ಕೊಡುವುದಕ್ಕೆ ಸಿದ್ಧರಾಗಿದ್ದಾರೆ. ಈ ವಿಷಯ ಮಹಾಪಾದದಲ್ಲಿ ಅರಿಕೆಮಾಡಿ ಮುಂದೆ ಇಲ್ಲಿ ಅಪ್ಪಣೆಯಾದಂತೆ ನಡೆಯುವುದಕ್ಕೆ ಸಿದ್ಧವಾಗಿದ್ದೇವೆ. ಮಹಾಸ್ವಾಮಿ."

"ಷರತ್ತುಗಳೇನು?"

"ಮಹಾಸ್ವಾಮಿಯವರು ಸಾವಕಾಶವಾಗಿ ಕೇಳಬೇಕು. ಷರತ್ತು ಬಹು ವಿಚಿತ್ರವಾಗಿದೆ. ಅಲ್ಲದೆ, ಸುಲ್ತಾನರು ಅಲ್ಲಾನ ಮೇಲೆ ಆಣೆಯಿಟ್ಟು ಅದನ್ನೆಲ್ಲಾ ಅಕ್ಷರಶಃ ಪಾಲಿಸುವುದಾಗಿ ವಚನ ಕೊಟ್ಟಿದ್ದಾರೆ. ಅಲ್ಲದೆ ಗೋಲ್ಕೊಂಡದ ಸುಲ್ತಾನರು ಅಹಮದ್‌ನಗರ, ಬೀರಾರ್ ಸುಲ್ತಾನರಂತೆ ಅಲ್ಲವಾಗಿ, ಆತನ ಮಾತನ್ನು ನಂಬಬಹುದು. ಆದರೂ ನಮ್ಮ ಜಾಗ್ರತೆಯಲ್ಲಿ

ಸಾವಿರಬೇಕಾಗಿ ನಮ್ಮಿಂದ ಆಗಬೇಕಾದ ರಕ್ಷಣೆಗಳನ್ನೆಲ್ಲಾ ನಾವೂ ಮಾಡಿಕೊಳ್ಳುತ್ತೇವೆ. ಇಷ್ಟೆಲ್ಲ ಏಕೆ ಹೇಳುತ್ತಿದ್ದೇನೆಂದರೆ ಆ ಪರತ್ತು ಮಹಾಪಾದಕ್ಕೆ ಸಂಬಂಧಪಟ್ಟ ಒಂದು ಅಭಿಮಾನ ವಸ್ತುವಿನ ವಿಷಯ."

ಚಕ್ರವರ್ತಿಗಳು ತಲೆದೂಗಿದರು. "ಏನು ನಮ್ಮ ಚಿನ್ನಾಸಾನಿ ಸಂಗೀತವೋ ?"

ಸೆಟ್ಟರು ಚಕ್ರವರ್ತಿಗಳಿಗೆ ಸಾಷ್ಟಾಂಗ ಪ್ರಣಾಮಮಾಡಿ ಎದ್ದು ನಿಂತು ಕೈಜೋಡಿಸಿಕೊಂಡು ಹೇಳಿದರು, "ಮಹಾಪಾದಕ್ಕೆ ಯಾವ ರೀತಿಯಲ್ಲೂ ಆಯಾಸವಾಗಬಾರದು. ರಾಜಧಾನಿಯಲ್ಲಿ ನನ್ನದು ಸುಮಾರು ಎರಡು ಮೂರುಕೋಟಿಯಷ್ಟು ಆಸ್ತಿಯಿದೆ. ಇಷ್ಟನ್ನೂ ಸನ್ನಿಧಾನದಲ್ಲಿ ಒತ್ತೆಯಿಟ್ಟು ಹೇಳುತ್ತೇನೆ. ಜೊತೆಗೆ ಮಹಾಸನ್ನಿಧಾನದ ಅಪ್ಪಣೆಯಾದರೆ, ನಮ್ಮ ಭದ್ರತೆಗೋಸ್ಕರ, ನಮ್ಮ ವರ್ತಕಮಂಡಲಿಯವರ ಹಣದ ರಕ್ಷಣೆಗೋಸ್ಕರ, ಮಹಾಪಾದಗಳನ್ನು ಆಶ್ರಯಿಸಿಬಾಳುವ ಪ್ರಜಾವರ್ಗದ ಸೌಖ್ಯಕ್ಕೋಸ್ಕರ ಗೋಲ್ಕೊಂಡದ ನವಾಬರಿಂದ ಇನ್ನು ಹತ್ತು ವರ್ಷ ನಮ್ಮ ರಾಜ್ಯಗಳೆರಡೂ ಶಾಂತಿಯಿಂದ ಇರುವುದು ಎಂದು ಸಂಧಿ ಮಾಡಿಕೊಂಡು ಬರುತ್ತೇನೆ. ನಮ್ಮ ವೀರ ಮಂಡಲವು ನಿರಾತಂಕವಾಗಿದ್ದು ಮಹಾಸ್ವಾಮಿಯವರ ಕೀರ್ತಿಯನ್ನು ಬೆಳಗಲಿ."

ಚಕ್ರವರ್ತಿಗಳು ತಲೆದೂಗಿದರು. "ಆಯಿತು, ಸೆಟ್ಟರು ಕನ್ಯೆಯಿಲ್ಲದೆ ಮದುವೆಗೆ ಯತ್ನಿಸುತ್ತಿದ್ದಾರೆ. ಚಿನ್ನಳು ಒಪ್ಪಬೇಕಲ್ಲ ?"

"ಮಹಾತಾಯಿ ಹೆತ್ತ ಹೆಣ್ಣು ಆಕೆ. ಮಹಾಸ್ವಾಮಿ. ನಾನು ತಿಳಿದ ಮಟ್ಟಿಗೂ ಆಕೆಗೆ ಪರಮ ಭಕ್ತಿ ಸ್ಥಾನಗಳೆರಡು. ಆ ವಿದ್ಯಾಗುರು ಭರತಾಚಾರ್ಯರು. ಅನ್ನದಾತರಾದ ಮಹಾಪಾದ. ಕುಲೀನೆಯೂ ಪದಸ್ಥೆಯೂ ಆದ ಆಕೆಯು ಈ ಎರಡು ಬಿಟ್ಟರೆ ದೈವವಲ್ಲದೆ ಇನ್ನೊಂದಕ್ಕೆ ತಲೆಬಾಗುವುದಿಲ್ಲ ಎಂದರೆ ಸರ್ವರೂ ಅದಕ್ಕೆ ಒಪ್ಪಲೇಬೇಕಲ್ಲವೆ ಮಹಾಸ್ವಾಮಿ? ಆದರೆ, ಆಕೆಯ ರಹಸ್ಯವನ್ನು ನಾನು ಭೇದಿಸಿದ್ದೇನೆ. ಹಿಂದೆ ಸನ್ನಿಧಾನದ ಅನುಗ್ರಹ ಪಡೆದ ನಟರಾಯ ಕಂಠೀರವರಿಗೆ ಸನ್ಮಾನ ಸಭೆ ನಡೆದಾಗ ಆಕೆಯೇ ಸಂಗೀತ ಹಾಡಿದ್ದು ಮಹಾಪಾದಕ್ಕೆ ವೇದ್ಯವಿರಬೇಕು. ಆದಿನ ನಾನು ಅಧ್ಯಕ್ಷನಾಗಬೇಕಿತ್ತು. ಒಲು ಬುದ್ಧಿವಂತಿಕೆ

ಯಿಂದ ನನ್ನನ್ನು ನಾನಾಗಿ ಓಡಿಹೋಗುವಂತೆ ಮಾಡಿ, ಭರತಾಚಾರ್ಯರನ್ನು ಅಧ್ಯಕ್ಷಸ್ಥಾನದಲ್ಲಿ ಕುಳ್ಳಿರಿಸಿ, ಅವರೆದುರಿಗೆ ಹಾಡಿ ತನ್ನ ಪ್ರತಿಜ್ಞೆಯನ್ನು ಸಾಧಿಸಿಕೊಂಡ ಹಟದ ಹೆಣ್ಣು ಆಕೆ ಮಹಾಸ್ವಾಮಿ. ಆಕೆ ವಿಜಯನಗರದ ಚಕ್ರವರ್ತಿಗಳಿಗೆ ಮುಗಿದ ಕೈ ಇನ್ನೊಬ್ಬ ದೊರೆಗೆ ಕೈಮುಗಿಯುವುದಿಲ್ಲ ಎಂದು ಪ್ರತಿಜ್ಞೆ ಮಾಡಿರುವುದೂ ಬಲ್ಲೆ. ಅದರಿಂದ ಸನ್ನಿಧಾನದ ಅಪ್ಪಣೆಯಾದರೆ, ಭರತಾಚಾರ್ಯರನ್ನೂ ಕರೆದುಕೊಂಡು ಹೋಗಿ ಅಲ್ಲಿ ಆಸ್ಥಾನದಲ್ಲಿ ಕೂರಿಸುತ್ತೇನೆ. ಅವಳು ಕೈಮುಗಿಯುವುದೂ ಹಾಡುವುದೂ ತನ್ನ ಗುರುವಿನ ಪೂಜೆಗಾಗಿ. ಅದರ ಫಲವೆಲ್ಲ ತಮ್ಮ ಪ್ರಜೆಗಳಾದ ನಮಗೆ. ತಾವು ಇದನ್ನು ಅಂಗೀಕರಿಸಬೇಕು ಮಹಾಸ್ವಾಮಿ"

"ಆಗಲಿ, ನಾವು ಒಪ್ಪಿದೆವು ಎನ್ನೋಣ. ಮುಂದಕ್ಕೇನು ಮಾಡುತ್ತೀರಿ."

"ನಾಳೆಯೇ ಗೋಲ್ಕೊಂಡಕ್ಕೆ ಓಡುತ್ತೇನೆ ಮಹಾಪ್ರಭು. ಸುಲ್ತಾನರ ಕೈಕಾಲು ಹಿಡಿದಾದರೂ ಈ ಪತ್ತುವರುಷದ ಸಂಧಿ ಸಾಧಿಸುತ್ತೇನೆ. ಅಷ್ಟೇ ಶ್ರದ್ಧೆಯಿಂದ ಅಲ್ಲಿಗೆ ಹೋಗುವ ನಮ್ಮ ವಿಜಯನಗರದ ಪ್ರಜೆಗಳ ಒಂದು ಕೂದಲೂ ಅಲುಗದಂತೆ ರಕ್ಷಣೆನೀಡುವಂತೆ ಅವರಿಂದ ಹತ್ತುಬಾರಿ ಪ್ರಮಾಣ ಮಾಡಿಸುತ್ತೇನೆ."

ಚಕ್ರವರ್ತಿಗಳಿಗೆ ಪರಮಾನಂದವಾಯಿತು. "ಸೆಟ್ಟರೇ ನಾವು ತಾರುಣ್ಯದಲ್ಲಿ ಹೊಡೆದು ಹಿಡಿಯಲ್ಲಿ ಅಡಗಿಸಿಕೊಳ್ಳುವುದು ಒಂದೇದಾರಿ ಎಂದು ನಂಬಿ ಅದರಂತೆಯೇ ನಡೆದು ಗೆದ್ದವರು. ಈಗೀಗ ನಮಗೂ ಗೆಲುವಿಗೆ ಇನ್ನೂ ಬೇರೆ ದಾರಿಯಿದೆ. ಹೋರಾಡುವುದಕ್ಕಿಂತ ಸರಸದಲ್ಲಿ ಗೆದ್ದಗೆಲುವು ಹೆಚ್ಚು ಬಾಳುವುದು ಎನ್ನುವುದು ಮನಸ್ಸಿಗೆ ಬಂದಿದೆ. ಆದರೂ ನಾವು ಕ್ಷತ್ರಿಯರು. ನಮಗೆ ದಂಡೋಪಾಯ ರುಚಿಸುವಷ್ಟು ಸಾಮದಾನಗಳು ಹಿಡಿಸವು. ಆದರೂ ಸಾಮದಾನಗಳಿಲ್ಲದ ದಂಡೋಪಾಯ ವಿಹಿತವಲ್ಲ. ದಂಡದ ಬಲವಿಲ್ಲದಿದ್ದರೆ ಸಾಮದಾನಗಳು ಫಲಿಸುವುದಿಲ್ಲ. ಅದರಿಂದ, ತಮ್ಮ ಸಲಹೆಯನ್ನು ನಾವು ಅಂಗೀಕರಿಸಿದ ಗುರುತಾಗಿ, ನಮ್ಮ ವರ್ತಕಕುಲ ಶ್ರೇಷ್ಠರಾದ ಯಜಮಾನ ವೀರಪ್ಪಸೆಟ್ಟರ ಮಾತು ನಮ್ಮ ಮಾತು ಎಂದು ಹೇಳುವುದಕ್ಕಾಗಿ, ಇದೋ, ಈ ನಮ್ಮ ಉಂಗುರವನ್ನು ತಮ್ಮಲ್ಲಿ ಕೊಟ್ಟಿದ್ದೇವೆ. ಪಂಪಾಪತಿಯು ನಿಮ್ಮನ್ನು ಕಾಪಾಡಲಿ. ಭುವನೇಶ್ವರಿಯು ನಿಮಗೆ ಕಾವಲಾಗಿರಲಿ. ತಾವು ನಮ್ಮ

ರಾಜ್ಯಕ್ಕೆ, ನಮ್ಮ ಪ್ರಜೆಗಳಿಗೆ, ನಮಗೆ ಪರಮೋಪಕಾರ ಮಾಡಿರುವಿರಿ. ತಾವು ಗೆದ್ದರೆ, ನಮ್ಮ ರಾಯಭಾರಿಗಳು ಹತ್ತು ಜನ ಗೆಲ್ಲುವುದಕ್ಕಿಂತ ಹೆಚ್ಚಿನ ಗೆಲುವು ತರುವಿರಿ. ತಾವು ನಾಳೆಯದಿನ ಬೆಳಿಗ್ಗೆ ಮೂರನೆಯ ಮುಹೂರ್ತದಲ್ಲಿ, ಪಂಪಾಪತಿಯ ಪ್ರಸಾದಪಡೆದು, ಗೋಬ್ರಾಹ್ಮಣ ಪೂಜೆಮಾಡಿ ಗುರುಹಿರಿಯರ ಆಶೀರ್ವಾದ ಪಡೆದು ಹೊರಡಿ. ನಾಳೆ ತಾವು ಹೊರಡುವುದರೊಳಗಾಗಿ ಗೋಲ್ಕೊಂಡದಲ್ಲಿರುವ ನಮ್ಮ ರಾಯಭಾರಿಗೆ ನಾವುಕೊಡುವ ಆಜ್ಞಾಪತ್ರವು ತಮಗೆ ತಲಪುವುದು. ಈಸಲ ತಾವು ರಾಯಭಾರಿಯಜೊತೆಯಲ್ಲಿ ಇಳಿಯಿರಿ. ತಾವು ಸುಲ್ತಾನರ ಅರಮನೆಗೆ ದಯಮಾಡಿಸುವಾಗ, ರಾಯಭಾರಿಗಳ ರಾಜ ರಥದಲ್ಲಿಯೇ ಹೋಗಿಬನ್ನಿ. ರಾಮರಾಯನು ತನ್ನ ಪ್ರಜೆಗಳ ಸೌಖ್ಯವೇ ತನ್ನ ಜೀವಿತದ ಪರಮಾರ್ಥವೆಂದು ಭಾವಿಸಿರುವವನು ಎಂಬುದು ಸರ್ವತ್ರ ವಿದಿತವಾಗಲಿ.

ಸೆಟ್ಟರು ರಾಯರ ಅಭಿಮಾನವು ತಮಗೆ ಅಡ್ಡಿಯಾಗುವುದು; ಅವರ ದುರ್ಯೋಧನನ ಬಿಂಕವು ತಮ್ಮ ಕಾರ್ಯವನ್ನು ಕೆಡಿಸುವುದು ಎಂದು ಹೆದರಿದ್ದರು. ಚಕ್ರವರ್ತಿಗಳು ಇಷ್ಟು ಸುಮುಖವಾಗಿರುವುದನ್ನು ಕಂಡು, ತಮ್ಮ ರಾಯಭಾರವು ಇಷ್ಟು ಸುಲಲಿತವಾಗಿ, ಸರಾಗವಾಗಿ, ಸುಖವಾಗಿ ಸಿದ್ಧಿಯಾದುದನ್ನುಕಂಡು ಪರಮಾಶ್ಚರ್ಯಪಟ್ಟರು. ಬಹುವಾಗಿ ಅಳೆದು ಸುರಿದು, ತಾವು ಗೆದ್ದುದಕ್ಕೆ ಕಾರಣವೇನಿರಬಹುದು ಎಂದು ಬಹಳವಾಗಿ ಚಿಂತಿಸಿ ಕೊನೆಗೆ ಕಂಡುಹಿಡಿದರು. ಕೈಮೇಲೆ ಕೈಹೊಡೆದು "ನೋಡಿದೆಯಾ? ಈ ಅದೃಷ್ಟ, ಆ ರಂಡೆ ಕೈ ಮುಟ್ಟಿದ್ದರಿಂದ. ಕೈ ಮುಟ್ಟಿದ್ದಕ್ಕೇ ಇಷ್ಟಾದರೆ...." ಎಂದು ಏನೇನೋ ಮುಂದಿನ ಲೆಕ್ಕ ಮಾಡುತ್ತಿದ್ದ ಹಾಗೆಯೇ ಗಾಡಿಯು ಅವರ ಮನೆಗೆ ಬಂದಿತು. ಆಳು ಬಂದು ಬಾಗಿಲು ತೆಗೆದನು. ಸೆಟ್ಟರು ಭಾವಸಮಾಧಿಯಿಂದ ಎಚ್ಚೆತ್ತು, "ಈ ದಿನ ಬೆಳಿಗ್ಗೆ ನರಿ ಮೊಕ ನೋಡಿದೆನೋ ಏನೋ? ಇದೇ ಅದೃಷ್ಟ ಈ ತಿಂಗಳೆಲ್ಲಾ ಇದ್ದುಬಿಟ್ಟರೆ, ನಾವು ಬದುಕಿದ್ದು ಸಾರ್ಥಕವಾಯಿತು" ಎಂದುಕೊಂಡು ಮನೆಯೊಳಕ್ಕೆ ಹೋದರು. ಹೋಗುತ್ತಿದ್ದ ಹಾಗೆಯೇ ಹೆಂಡತಿ ಗೌರಮ್ಮ ಎದುರು ಬಂದರು. "ಅಮ್ಮಣ್ಣಿಯವರೇ, ಹೊಡಿ ನಗಾರಿ ಮೇಲೆ ಕೈ. ಮೊದಲು ಹೋಗಿ ಕೈಕಾಲು ತೊಳೆದುಕೊಂಡು ತುಪ್ಪದ ದೀಪ ಇಡಿ. ನಾಳೆ ನಮಗೆ

ಗೋಲ್ಕೊಂಡದ ಪ್ರಯಾಣ. ನಾವು ಹೋಗಿಬರುವವರೆಗೂ ಆ ದೀಪ ಉರಿಯಲಿ ನಾಳೆ ಬೆಳಿಗ್ಗೆ ಪಂಪಾಪತಿಗೆ ಭಾರಿ ಪೂಜೆ ಕೊಡಿಸಿ" ಎಂದು ಅವಸರವಾಗಿ ತಮ್ಮ ಕೋಣೆಗೆ ಓಡಿದರು.

ಮರುದಿನ ಸೆಟ್ಟರು ವಿಹಿತವಾದ ಕಾಲದಲ್ಲಿ ಎಲ್ಲವನ್ನೂ ಮುಗಿಸಿಕೊಂಡು ರಾಜಪತ್ರವನ್ನು ಭದ್ರವಾಗಿರಿಸಿಕೊಂಡು ಗೋಲ್ಕೊಂಡಕ್ಕೆ ಹೊರಟರು. ಮೊದಲನೆಯ ಮಜಲು ತಲಪುತ್ತಿದ್ದ ಹಾಗೆಯೇ, ಅಲ್ಲಿದ್ದ ರಾಯಸದವನು ಬಂದು ಕಾಣಿಸಿಕೊಂಡು ಕೈಮುಗಿದನು; "ನಿರೂಪ ಬಂದಿದೆ, ಒಂಟೆಯ ಸಾರೋಟು ಸಿದ್ಧವಾಗಿ ಕಾದಿದೆ" ಎಂದು ಅರಿಕೆಮಾಡಿದನು. ಸೆಟ್ಟರು ತಮಗಾಗಿದ್ದ ಆಯಾಸವನ್ನು ಲಕ್ಷಿಸದೆ ಕೂಡಲೆ ಸಾರೋಟು ಹತ್ತಿದರು. ಒಂಟೆಗಳು ತಾರುಗಾಲು ಮಾರುಗಾಲು ಹಾಕಿಕೊಂಡು ನಾಗಾಲೋಟದಿಂದ ಓಡಿದುವು.

ರಾಜಾಜ್ಞೆಯಾದಂತೆ ಸೆಟ್ಟರು ರಾಯಭಾರ ಮಂದಿರದಲ್ಲಿಯೇ ಇಳಿದರು. ಮರುದಿನವೇ ಸುಲ್ತಾನರ ಭೇಟಿಯಾಯಿತು. ಅವರು ಸೆಟ್ಟರು ರಾಯಭಾರಿಯ ರಾಜರಥದಲ್ಲಿ ಬಂದರೆಂದು ಕೇಳಿ ಆಶ್ಚರ್ಯಪಟ್ಟರು. ಅದರಿಂದಲೇ ಅವರಿಗೆ ಅರ್ಥವಾಯಿತು ಸೆಟ್ಟರು ಗೆದ್ದು ಬಂದಿದ್ದಾರೆಯೆಂದು. ಅವರನ್ನು ಬಹಳ ಆದರದಿಂದ ಬರಮಾಡಿಕೊಂಡರು. ಅಣ್ಣನನ್ನು ಕಂಡ ತಮ್ಮನಂತೆ ಗೌರವ ದಿಂದ ವಿಶ್ವಾಸದಿಂದ ಕಂಡು, ಎದುರುಗೊಂಡು, ಆಲಿಂಗನವನ್ನು ಕೊಟ್ಟು, ಕರೆದುಕೊಂಡು ಹೋಗಿ ತಮ್ಮ ಬಳಿಯಲ್ಲಿಯೇ ಸುಖಾಸನದಲ್ಲಿ ಕುಳ್ಳಿರಿಸಿ ಕೊಂಡು ಕೇಳಿದರು "ಕ್ಯಂವ್. ಸೆಟ್ಟಿ ಸಾಹೆಬ್, ಗೆದ್ದು ಬಂದಿರಿ ತಾನೇ ?" "ಜಹಾಪನಾ, ತಮ್ಮ ಕೆಲಸ ಕೆಡುವುದು ಎಲ್ಲಿ ಬಂತು? ಎಲ್ಲವೂ ಸಿದ್ಧ ವಾಗಿದೆ. ತಾವು ಒಂದು ನಿರೂಪ ಹೊರಡಿಸಿ, ಯಾವೊತ್ತೆಂದರೆ ಅವೊತ್ತು ಸಂಗೀತ ಇಟ್ಟುಕೊಳ್ಳಬಹುದು."

"ನಿಜವೇ ? ಸೆಟ್ಟಿ ಸಾಹೆಬ್, ಆ ಜಂಭಗಾತಿ, ನಮ್ಮ ಆಸ್ಥಾನದಲ್ಲಿ ಹಾಡುವುದಕ್ಕೆ ಒಪ್ಪಿದಳೇ ? ವಿಜಯನಗರದ ಚಕ್ರವರ್ತಿಗಳಿಗೆ ಮುಗಿದ ಕೈ ಇನ್ನೊಬ್ಬರಿಗೆ ಮುಗಿಯುವುದಿಲ್ಲ ಎಂದಳಂತಲ್ಲಾ! ಸೆಟ್ಟಿ ಸಾಹೆಬ್, ಆಕೆ ನಮ್ಮ ದರಬಾರಿಗೆ ಬಂದರೆ ಖುರ್ನೀಸಾ ಮಾಡಬೇಕಾಗಿಲ್ಲ. ಆಕೆ ಬಂದು ನಮ್ಮೆದುರಿಗೆ ಹಾಡಲಿ ಅಷ್ಟೇ ಸಾಕು. ಒಂದು ಸಲ ಆಕೆ ಬಂದು ಹೋಗಲಿ.

ಆಮೇಲೆ ನಾವೇ ಚಕ್ರವರ್ತಿಗಳ ದರಬಾರಿಗೆ ಬರುತ್ತೇವೆ. ನಮ್ಮ ಮರ್ಯಾದೆ ಬಿಟ್ಟು ನಾವು ಮೊದಲು ಅಲ್ಲಿ ಬರಬಾರದು. ಅಲ್ಲವೇ ಹೇಳಿ."

"ಹೌದು, ಮಹಾಸ್ವಾಮಿ, ನ್ಯಾಯ. ನಾನು ಸನ್ನಿಧಾನದಲ್ಲಿ ಅರಿಕೆ ಮಾಡುವುದು ಖುರ್ನಿಸಾ ವಿಚಾರವಲ್ಲ. ಯಾರೇ ಆಗಲಿ ದರ್ಬಾರಿಗೆ ಬಂದಮೇಲೆ ಆ ಪಿಸ್ತು ಬಿಡುವುದು ಎಂದರೇನು? ಅದೆಲ್ಲ ಇರಲಿ ಮಹಾಸ್ವಾಮಿ. ಈಗ ಸನ್ನಿಧಾನದಿಂದ ನಮಗೆ ಆಗಬೇಕಾದುದು ಇಷ್ಟು. ನಾವು ಆಕೆಯನ್ನು ಕರೆದು ತಂದು ಮತ್ತೆ ವಿಜಯನಗರ ಮುಟ್ಟಿಸುವವರೆಗೆ ಆ ಹೊಣೆಯೆಲ್ಲ ನಮ್ಮದು. ನಾವು ಆ ಹೊಣೆಗಾರಿಕೆ ಹೊತ್ತುದಕ್ಕೆ ಸಂಕಟ ಪಡುವಂತಾಗಬಾರದು. ಹಾಗೆ ಅರಮನೆಯಿಂದ ತಕ್ಕ ಬಂದೋಬಸ್ತು ಮಾಡಿಸಬೇಕು. ತಾಲ್ಲೂಕುದಾರರಿಗೆಲ್ಲ ಹುಕುಂ ಆಗಬೇಕು."

ಸುಲ್ತಾನರು ಒಪ್ಪಿದರು. ಸುಲ್ತಾನರ ಆನಂದ ಹೇಳತೀರದು. ಸೆಟ್ಟರನ್ನು ತಬ್ಬಿಕೊಂಡರು; "ಸೆಟ್ಟಿ ಸಾಹೆಬ್, ತಮ್ಮಿಂದ ಬಹಳ ಉಪಕಾರ ಆಯಿತು. ಇನ್ನು ತಮಗಾಗಿ ಏನಾಗಬೇಕು ಹೇಳಿ."

"ಜಹಾಪನಾ, ಈ ಗರೀಬನಿಗೆ ಖುದಾ ಬೇಕಾದ್ದೆಲ್ಲ ಕೊಟ್ಟಿದ್ದಾನೆ. ಆದರೂ ನಮ್ಮ ಎರಡು ರಾಜ್ಯಗಳ ಸ್ನೇಹ ಬೆಳೆಯಲೆಂದು ಆದಿನ ಅಪ್ಪಣೆ ಯಾದಂತೆ ಗಣಿಯನ್ನು ನಮಗೆ ಕೊಡಿಸಬೇಕು."

"ಹಾಂ, ಆಗಬಹುದು. ನಾವೇ ಹೇಳಿದ್ದೇವೆ."

"ಮತ್ತೊಂದು ಅರಿಕೆಯುಂಟು ಮಹಾಸ್ವಾಮಿ."

"ಹೇಳಿ."

"ನಮ್ಮ ವ್ಯಾಪಾರಗಳೆಲ್ಲ ಸುಸೂತ್ರವಾಗಿ ನಡೆಯುವಂತೆ ಖಾವಂದರೂ ಚಕ್ರವರ್ತಿಗಳೂ ಹತ್ತುವರುಷದ ಸ್ನೇಹದ ಕರಾರುಮಾಡಿಕೊಳ್ಳಬೇಕು. ಎರಡೂ ಕಡೆಯವರು ಒಬ್ಬರಲ್ಲಿ ಒಬ್ಬರು ನಂಬಿಕೆಯಿಂದ ನಡೆದುಕೊಳ್ಳುವು ದಕ್ಕೆ ಅನುಕೂಲವಾಗಲೆಂದು ಈ ಕೆಲಸ ಆಗಬೇಕು ಪ್ರಭು. ಇದೋ, ನಾನೇ ಒಂದು ಮಾತು ಹೇಳುತ್ತೇನೆ. ಆದಿನ ನಾವು ಕೇಳುವ ಗುತ್ತಿಗೆಗೆ ಗಣಿ ಕೊಡಿಸುತ್ತೇವೆಂದು ಅಪ್ಪಣೆಯಾಗಿತ್ತು. ಈದಿನ ಉಭಯತ್ರರ ಸೌಖ್ಯಕ್ಕಾಗಿ ಆಗುವ ಈ ಕರಾರನ್ನು ಗೌರವಿಸಿ ತಾವು ಹೇಳಿದಷ್ಟು ಗುತ್ತಿಗೆ ಕೊಡುವುದಕ್ಕೆ ನಾವು ಸಿದ್ಧವಾಗಿದ್ದೇವೆ."

ಸುಲ್ತಾನರು ನಕ್ಕರು. “ಸೆಟ್ಟಿಸಾಹೇಬ್, ನಾವು ತಮ್ಮ ಬುದ್ಧಿ ಬಹಳ ದೊಡ್ಡದು ಎಂದು ಕೇಳಿದ್ದೆವು. ಅದರಿಂದಲೇ ತಮ್ಮನ್ನು ಕರೆಯಿಸಿ ಕೊಂಡು ತಮ್ಮ ಮೂಲಕವಾಗಿ ಚಕ್ರವರ್ತಿಗಳಿಗೆ ಈ ಮಾತು ಹೇಳಿಕಳುಹಿಸ ಬೇಕೆಂದು ತಮ್ಮ ಶಕ್ತಿ ಸಾಮರ್ಥ್ಯ ನೋಡಬೇಕೆಂದು ಈ ಸಂಗೀತದ ಮಾತಿ ನಿಂದ ಆರಂಭಿಸಿದೆವು. ನಾವೂ ತಮ್ಮನ್ನು ಕೋರುತ್ತಿದ್ದ ಹಾಗೆಯೇ ತಾವೇ ಬಂದಿರಿ. ನಮಗೂ ಬೇಕಾಗಿರುವುದು ಸಂಧಿ. ಸಮಾಧಾನ. ನಮ್ಮ ರಾಜ್ಯ, ಬಿಜಾಪುರ ರಾಜ್ಯ, ಇವೆರಡೂ ನಿಮ್ಮ ಮಗ್ಗುಲಲ್ಲಿರುವ ರಾಜ್ಯಗಳು. ನಾವೂ ದುಡ್ಡು ಕೊಟ್ಟು ಸೈನ್ಯ ಇಟ್ಟಿದ್ದೇವೆ. ನೀವೂ ಇಟ್ಟಿದ್ದೀರಿ. ಸೈನ್ಯ ಸೈನ್ಯ ಹೊಡೆದಾಡಿದರೆ ನಮಗೆ ನಷ್ಟವಿಲ್ಲ. ಆದರೆ ಸೈನ್ಯ ಹೊಡೆದಾಡುತ್ತಿರುವಾಗ, ಸುತ್ತಮುತ್ತ ಆಗುವ ನಷ್ಟವೆಷ್ಟು ? ಪ್ರಜೆಗಳಿಗೆ ಆಗುವ ಕಷ್ಟವೆಷ್ಟು ? ಯುದ್ಧ ಗಳಿಗೆ ಆಗುವ ಖರ್ಚು ವಹಿಸಿಕೊಳ್ಳುವವರು ಯಾರು ? ನಾವು ನಮ್ಮ ಅರಮನೆ ಯಲ್ಲಿ ಹಣ ಮುಗಿಯಿತು ಎಂದರೆ ಪ್ರಜೆಗಳನ್ನು ತಾನೇ ಸುಲಿಯಬೇಕು ? ಹೀಗೆ ಕೊಲೆ, ಸುಲಿಗೆ, ಇದಕ್ಕಿಂತ ದರೋಡೆ ಉತ್ತಮವಲ್ಲವೇ ? ನನಗಂತೂ ಯುದ್ಧ ಬೇಡ. ಸಲಾಂ. ಅಲ್ಲಾನ ರಾಜ್ಯ ಈ ಜಗತ್ತೆಲ್ಲ. ಚಕ್ರವರ್ತಿ ಯಾಗಲಿ, ಸುಲ್ತಾನನಾಗಲಿ, ಯಾರೇ ಆಳಿದರೂ ಜಗತ್ತಿನ ರಾಜ ಅಲ್ಲಾ. ನಮ್ಮ ರಾಜ್ಯದಲ್ಲಿ ಸುಬೇದಾರ್ ಇದ್ದಹಾಗೆ ನಾವೆಲ್ಲ. ಸುಬೇದಾರ್ ಸುಬೇದಾರ್ ಹೊಡೆದಾಡಿದರೆ ನಾವು ಸುಮ್ಮನಿರುವೆವೆ ? ಇಬ್ಬರನ್ನೂ ಬಲಿ ಹಾಕುತ್ತೇವೆ. ಹಾಗೆ ಅಲ್ಲಾನ ರಾಜ್ಯದ ಸುಬೇದಾರರಾದ ನಾವೂ ಚಕ್ರವರ್ತಿಗಳೂ ಕಾದಾಡಿದರೆ, ಅಲ್ಲಾನ ಪ್ರಜೆಗಳಿಗೆ ಹಿಂಸೆಯಾಗಿ, ಆತನಿಗೆ ಕೋಪ ಬಂದು ನಮ್ಮನ್ನೆಲ್ಲಾ ಧ್ವಂಸಮಾಡುವನು. ಅದರಿಂದ ಅಲ್ಲಿಂದ ಬಂದ ಅಧಿಕಾರ, ಇಲ್ಲಿ ಇರುವವರೆಗೂ ನಾವು ಸರಿಯಾಗಿ ನಡೆಸೋಣ. ಸಾಧ್ಯವಾದ ಮಟ್ಟಿಗೂ ರೈತ ತನ್ನ ಕೈಲಾದದ್ದು ಮಾಡಿ, ಆದಷ್ಟು ಬೆಳೆ ಬೆಳೆಯುವಂತೆ, ನಮ್ಮ ಪ್ರಜೆಗಳ ಸೌಖ್ಯ ಶಾಂತಿ ಹೆಚ್ಚಿಸೋಣ. ಈ ಅಭಿಪ್ರಾಯ ಮನಸ್ಸಿನಲ್ಲಿಟ್ಟುಕೊಂಡು, ತಾವು ಈ ಶಾಂತಿಯ ಕರಾರು ತರುವಿರಿ ಎಂದೂ ನಂಬಿ ತಮ್ಮನ್ನು ಈ ಕಾರ್ಯಮಾಡಿರಿ ಎಂದೆವು. ತಾವೂ ತಂದಿದ್ದೀರಿ. ತಮ್ಮ ಮಾತು ತಮ್ಮ ದೊರೆಗಳಿಗೆ ಒಪ್ಪಿಗೆಯಾಗಿದೆಯೆಂಬು ದನ್ನು ತಮ್ಮ ಕೈಯಲ್ಲಿರುವ ಉಂಗುರ, ತಾವು ಇಲ್ಲಿಗೆ ಬಂದಾಗ ಏರಿ ಬಂದ

ರಾಜರಥ, ನಮಗೆ ಹೇಳುತ್ತಿವೆ. ತಮ್ಮ ರಾಯಭಾರಿಗೂ ನಿರೂಪ ಬಂದೇ ಇರಬೇಕು. ನಾವೂ ನಮ್ಮ ದಿವಾನರಿಗೆ ಹುಕುಂ ಕಳುಹಿಸುತ್ತೇವೆ. ಅವರಿಬ್ಬರೂ ಸಂಧಿ ಪತ್ರ ಬರೆಯಲಿ. ನಾವು ರುಜು ಮಾಡಿ ತಮ್ಮ ವಶ ಕೊಡುತ್ತೇವೆ. ಈ ಸಂಧಿಪತ್ರ ಆದರೆ, ನಮ್ಮ ರಾಜ್ಯದಲ್ಲಿ ಸಂಚಾರಮಾಡು ತ್ತಿರುವ ಪ್ರಜೆಗಳನ್ನು ಕಾಪಾಡುವ ಭಾರ ನಮ್ಮದು ಆಗುತ್ತದೆ. ಆದರೂ ತಮಗೆ ನಂಬಿಕೆಯಾಗಲಿ ಎಂದು, ತಮ್ಮ ಕೆಲಸ ಸುಸೂತ್ರವಾಗಿ ನಡೆಯಲೆಂದು ತಾವು ತಮ್ಮೊಡನೆ ಸಂಗೀತಗಾರರನ್ನು ಕರೆದುಕೊಂಡು ಬರುವಾಗ ಗೋಲ್ಕೊಂಡದ ಒಂಟೆ ಸವಾರರು ಒಂದು ತುಕಡಿ ತಮ್ಮ ಜೊತೆಯಲ್ಲಿ ಇರುವಂತೆ ಹುಕುಂ ಮಾಡುತ್ತೇವೆ. ಇನ್ನು ಗಣಿಯ ಸಮಾಚಾರ. ಈ ಗಣಿ ಮಾತ್ರ ವಲ್ಲ, ಈ ಭೂಮಂಡಲದಲ್ಲಿರುವ ಚಿನ್ನ, ಬೆಳ್ಳಿ, ವಜ್ರ, ಪಚ್ಚೆ, ಇವುಗಳೆಲ್ಲಾ ಅಲ್ಲಾನದು. ಅಲ್ಲಾನ ಪ್ರಜೆಗಳ ಸೌಖ್ಯವನ್ನು ಕೋರುವವರು ಯಾರೋ ಅವರಿಗೆ ಸೇರಬೇಕಾದವು. ತಾವು ಅಂಥಾ ಸತ್ಪುರುಷರು. ತಾವು ತಮಗೆ ತೋರಿದಂತೆ ಗುತ್ತಿಗೆ ಕರಾರು ಬರೆಯಿಸಿ ತೆಗೆದುಕೊಂಡು ಬನ್ನಿ. ನಮ್ಮ ಪರವಾಗಿ ನಮ್ಮ ದಿವಾನರು ಅದನ್ನು ಒಪ್ಪಿಕೊಳ್ಳುವಂತೆ ನಾವು ಹುಕುಂ ಕಳುಹಿಸುತ್ತೇವೆ. ಸೆಟ್ಟಿಸಾಹೆಬ್, ತಾವು ಇಲ್ಲಿ ಗಣಿಯ ಕೆಲಸಕ್ಕೆ ವಿಜಯನಗರದಿಂದ ಒಂದು ಕಾಸೂ ತರಬೇಕಾಗಿಲ್ಲ. ಏನು ಬೇಕಾದರೂ ನಮ್ಮ ಅರಮನೆಯಿಂದಲೇ ತೆಗೆದುಕೊಳ್ಳಬೇಕು. ಜಗತ್ತಿನಲ್ಲಿ ಸೈತಾನನ ಸಂತಾನವಾಗಿ ಲೋಕವನ್ನು ಗೋಳು ಹುಯ್ದುಕೊಳ್ಳುವವರು ಬೇಕಾದಷ್ಟು ಜನಇದ್ದಾರೆ. ಅವರ ವಂಶ ನಾಶವಾಗಲಿ. ತಮ್ಮಂಥಾವರ ವಂಶ ಬೆಳೆಯಲಿ. ತಾವು ಮಾಡಿದ ಉಪಕಾರ ನಮ್ಮ ತಲೆಯ ಮೇಲಿದೆ."

ಸುಲ್ತಾನರ ಭಾಷಣವನ್ನುಕೇಳಿ ಸೆಟ್ಟರು ಬೆರಗಾದರು. ಅವರ ಕಣ್ಣಿನಲ್ಲಿ ನೀರು ಧಾರಾಳವಾಗಿ ಸುರಿಯಿತು. "ಜಹಾಂಪನಾ, ತಾವು ಗೋಲ್ಕೊಂಡಕ್ಕೆ ಮಾತ್ರವಲ್ಲ. ಅಖಂಡ ಜಗತ್ತಿಗೇ ಸುಲ್ತಾನರಾಗಲು ತಕ್ಕವರು. ತಾವು ಅಪ್ಪಣೆಕೊಡಿಸಿದಂತೆ ಇಷ್ಟು ಮೇಲುಮಟ್ಟದ ಮನಸ್ಸಿನಿಂದ ರಾಜ್ಯ ಆಳುವವರು ಎಷ್ಟು ಜನ ಇದ್ದಾರು? ತಮ್ಮ ವಂಶ ಸಾವಿರಕಾಲ ಇರಲಿ. ನಾನು ಇಲ್ಲಿ ನೋಡುತ್ತಿರುವುದು ಸುಲ್ತಾನರನ್ನಲ್ಲ. ಮನುಷ್ಯಕುಲವನ್ನು ಕಾಪಾಡಲು

ಬಂದ ದೇವದೂತರನ್ನು. ತಾವು ಅನುಗ್ರಹಿಸಿರುವ ಈ ಸಂಧಿ ಶಾಶ್ವತವಾಗಿದ್ದು ನಮ್ಮ ಎರಡು ರಾಜ್ಯವನ್ನೂ ಸುಖವಾಗಿಡಲಿ."

ಸುಲ್ತಾನರ ಕಣ್ಣಿನಲ್ಲಿಯೂ ನೀರು ಬಂತು. "ಇಲ್ಲಾ. ಹಾಗಾಗುವ ಹಾಗಿಲ್ಲ. ಬಹಮನೀ ಸುಲ್ತಾನರೆಲ್ಲ ಒಂದೇ ಮನಸ್ಸಿನವರಲ್ಲ. ಬಿಜಾಪುರದವರು ಗೋಲ್ಕೊಂಡದವರು ಒಂದು ದಾರಿಹಿಡಿದರೆ ಮಿಕ್ಕಮೂವರೂ ಇನ್ನೊಂದು ದಾರಿ ಹಿಡಿಯಬೇಕೆಂದಿದ್ದಾರೆ. ಆಗಲಿ. ಲೋಕದಲ್ಲಿ ಕೆಡಿಸುವುದಕ್ಕೆ ಇರುವ ಅನುಕೂಲ ಬದುಕಿಸುವುದಕ್ಕಿಲ್ಲ. ನೋಡಿ. ಸೆಟ್ಟಿಸಾಹೆಬ್, ಖುದಾ ತನ್ನ ಖುಷಿಗಾಗಿ ಲೋಕವನ್ನು ಹುಟ್ಟಿಸಿದ. ಆದರೆ, ಅಮೃತ ತನ್ನಬಳಿ ಇಟ್ಟು ಕೊಂಡು, ವಿಷ ಈ ಲೋಕದಲ್ಲಿ ಇಟ್ಟುಬಿಟ್ಟು ಸೈತಾನವಶಕ್ಕೆ ಕೊಟ್ಟುಬಿಟ್ಟ ಯಾವನು ಸೈತಾನ ಬಿಟ್ಟು ಖುದಾ ಹಿಡಿದ, ಅವನು ತಿನ್ನುವ ವಿಷವೆಲ್ಲ ಅಮೃತ ಯಾವನು ಅದನ್ನು ಬಿಟ್ಟು, ಎಂದರೆ ಖುದಾಬಿಟ್ಟು ಸೈತಾನ ಹಿಡಿದ ಅವನು ತಿಂದದ್ದು ಅಮೃತವೇ ಆದರೂ ವಿಷ. ಈಲೋಕದಲ್ಲಿ ಸೈತಾನ ಹಿಡಿದವರೇ ಬಹಳ. ಏನಾದರೂ ಆಗಲಿ. ಖುದಾನಂಬಿ ಸಂಧಿಮಾಡಿಕೊಂಡು ಸಂಧಿಪತ್ರಕ್ಕೆ ರುಜು ಹಾಕೋಣ."

ಸುಲ್ತಾನರು ಸೆಟ್ಟರನ್ನು ಬೀಳ್ಕೊಟ್ಟರು. ಸುಲ್ತಾನರು ನಿರೀಕ್ಷಿಸಿದಂತೆ ವಿಜಯನಗರದಿಂದ ರಾಯಭಾರಿಗಳಿಗೆ ನಿರೂಪ ಬಂದಿತ್ತು. ರಾಯಭಾರಿಗಳು ಸೆಟ್ಟರ ದಾರಿಕಾಯುತ್ತ ಇದ್ದವರು ಏನಾಯಿತು? ಎಂದರು. ಸೆಟ್ಟರು ಮಂದಹಾಸದಿಂದ, "ಬುದ್ಧಿಯವರು ಹೋಗಿ ಸಂಧಿಪತ್ರ ಬರೆಸಿಕೊಂಡು ಬರಬೇಕು" ಎಂದರು. ರಾಯಭಾರಿಯು ದೊಡ್ಡದಾಗಿ ಕೈತೆಗೆದು ಸೆಟ್ಟರನ್ನು ಬಾಚಿ ತಬ್ಬಿಕೊಂಡು, ಕಣ್ಣಿನಲ್ಲಿ ನೀರು ಅಂಕೆಸಂಕೆಯಿಲ್ಲದೆ ಹರಿಯುತ್ತಿರಲು, "ಸೆಟ್ಟರೇ, ವಿಜಯನಗರ ಉಳಿಸಿದಿರಿ. ಪಂಪಾಪತಿ ನಿಮ್ಮನ್ನು ಕಾಪಾಡಲಿ ಭುವನೇಶ್ವರಿ ನಿಮ್ಮ ವಂಶವನ್ನು ರಕ್ಷಿಸಲಿ. ಬೀರಾರ್, ಬಿದರೆ, ಅಹಮ್ಮದ್ ನಗರಗಳ ಸುಲ್ತಾನರು ವಿಜಯನಗರದಲ್ಲಿ ಕಗ್ಗೊಲೆಮಾಡಿ ಲೂಟಿ ಮಾಡ ಬೇಕೆಂದು ಮಸಲತ್ತುಮಾಡಿ, ಗೋಲ್ಕೊಂಡದ ಸುಲ್ತಾನರ ಒಪ್ಪಿಗೆ ಪಡೆಯಲು ಇಲ್ಲಿಗೆ ತಮ್ಮ ರಾಯಭಾರಿಯನ್ನು ಕಳುಹಿಸಿದ್ದಾರೆ. ಇದೋ ಈಗ ತಾನೇ ನನಗೂ ಸುದ್ದಿಬಂತು" ಎಂದು ಹೇಳಿಕೊಂಡನು.

ಸೆಟ್ಟರಿಗೆ ತಾವು ಈ ಲೋಕದಲ್ಲಿ ಇಲ್ಲ ಎನ್ನಿಸುವಂತಾಯಿತು. ಏನು

ಹೇಳಲೂ ತೋರದೆ ಸುಖಾಸನದಲ್ಲಿ ಸುಮ್ಮನೆ ಕುಳಿತುಬಿಟ್ಟರು. ಎದೆಯನ್ನು ಮುಟ್ಟಿಕೊಂಡಾಗ ಕಿಸೆಯಲ್ಲಿ ಇಟ್ಟುಕೊಂಡಿದ್ದ ಪಂಪಾಪತಿಯ ಪ್ರಸಾದ ಕೈಗೆ ತಗುಲಿ ಅವರ ಮನಸ್ಸು ಎಲ್ಲಿಯೋ ಹಾರಿಹೋಯಿತು. ಮತ್ತೆ ಕಣ್ಣು ಬಿಟ್ಟು ನೋಡಿದಾಗ, ರಾಯಭಾರಿಗಳನ್ನು ನೋಡಲು ಗೋಲ್ಕೊಂಡದ ದಿವಾನರು ಬಂದಿದ್ದರು.

ಸೆಟ್ಟರು ಕಣ್ಣು ಬಿಡುತ್ತಿದ್ದ ಹಾಗೆಯೇ ದಿವಾನರು ಸಲಾಂ ಮಾಡಿದರು. "ಸೆಟ್ಟಿಸಾಹೆಬ್, ಹುಜೂರ್ರವರ ಹುಕುಂ ಆಗಿದೆ. ಗಣಿಯನ್ನು ತಮಗೆ ವರ್ಷಕ್ಕೆ ೫೦ಲಕ್ಷ ಗುತ್ತಿಗೆಗೆ ಕೊಡುವುದು; ತಮಗೆ ಬೇಕಾದ ಹಣವನ್ನು ಕೊಡುವುದು; ಬಂದ ಲಾಭದಲ್ಲಿ ಸರಕಾರವೂ ತಾವೂ ಅರ್ಧ ಅರ್ಧ ಹಂಚಿಕೊಳ್ಳುವುದು ಎಂದು. ಇದೋ, ಗುತ್ತಿಗೆಕರಾರು ತಂದಿದ್ದೇನೆ. ತಾವು ರುಜು ಮಾಡಬೇಕು" ಎಂದು ಕಾಗದನನ್ನು ಮುಂದಿಟ್ಟನು.

ಇವರಿಬ್ಬರೂ ಮಾತನಾಡುತ್ತಿರುವಾಗಲೇ ರಾಯಭಾರಿಯು ಮತ್ತೊಂದು ಕಾಗದವನ್ನು ತಂದು ದಿವಾನರ ಕೈಯಲ್ಲಿಟ್ಟನು. ದಿವಾನರು ಬಹು ಸಂತೋಷದಿಂದ ಅವರಿಗೆ ಸಲಾಂಮಾಡಿ ಕೈಹಿಡಿದು ಕುಲುಕಿದರು. ತಾವು ಮಾಫಿ ಕೊಡಬೇಕು. ಬಲೆ ಬಲೆ ತಕ್ಲೀಫ್ ಆಯಿತು. ಈಗ ಹುಜೂರ್ ಅವರು ಸಂಜೆ ನಮಾಜ್‌ಗೆ ಹೋಗುವವೇಳೆಗೆ ಈಕಾಗದ ನಾನು ತೆಗೆದುಕೊಂಡು ಹೋಗಬೇಕು. ಇದು ಬಹಳ ಜರೂರು. ಅದರಿಂದ ನಾನು ಹೊರಡುತ್ತೇನೆ. ದಫಾ ದಫಾ ಮಾಫಿ ಕೇಳುತ್ತೇನೆ."

ಸೆಟ್ಟರು "ಕಾಗದವು ನನ್ನಲ್ಲಿರಲಿ. ನಾನು ಹುಜೂರ್ ಅವರನ್ನು ಭೇಟಿಮಾಡಿ ಹೇಳುತ್ತೇನೆ. ನಾನು ಈದಿನ ರಾತ್ರಿಯೇ ವಿಜಯನಗರಕ್ಕೆ ಹೊರಡುತ್ತೇನೆ ಎಂದು ಅರಿಕೆಮಾಡಿ" ಎಂದರು.

# ಅಧ್ಯಾಯ ಆರು

ಶಾಂಭವಾನಂದರು ಪೂಜೆಯನ್ನುಮುಗಿಸಿ ಹೋಮಮಾಡಿ ಇಂದು ಬಹು ಸುಖಿಗಳಾಗಿದಾರೆ. ಪೂರ್ಣಾಹುತಿಯ ಕಾಲದಲ್ಲಿ ದೇವಿಯೇ ಬಂದು ಆಹುತಿಯನ್ನು ಸ್ವೀಕರಿಸಿದಳೆಂದು ಅವರ ಆನಂದಕ್ಕೆ ಪಾರವಿಲ್ಲ. ಭರತಾಚಾರ್ಯರು ವಿನಾ ಇನ್ನು ಯಾರೂ ಅಲ್ಲಿ ಇಲ್ಲ. ಅವರೊಡನೆ ಕೂಡ ಮಾತನಾಡುವುದಕ್ಕೆ ಆನಂದರಿಗೆ ಇಷ್ಟವಿಲ್ಲ. ಹಾಗೆಯೇ ಎದ್ದು ಬಂದು ಕಣ್ಣು ಮುಚ್ಚಿಕೊಂಡು ಗೋಡೆ ಒರಗಿಕೊಂಡು ಕುಳಿತಿದ್ದಾರೆ. ಆನಂದದ ಜೊತೆಯಲ್ಲಿಯೇ ಇನ್ನೂ ಏನೋ ಒಂದು ಭಾವ ಪ್ರಬಲವಾಗಿ ಅವರನ್ನು ಆಕ್ರಮಿಸಿದೆ.

"ಶಾಮಣ್ಣ, ನನ್ನ ಕೆಲಸ ಅರ್ಧ ಗೆದ್ದಿದೆ. ಈ ದಿನ ಗೋಲ್ಕೊಂಡದ ಸುಲ್ತಾನರು ಶಾಂತಿ ಸಂಧಾನಕ್ಕೆ ಒಪ್ಪಿದ್ದಾರೆ. ಇನ್ನು ನಿನ್ನ ಕೆಲಸವೇ ಉಳಿದಿರುವುದು. ಎಲ್ಲಿ ಬಾ. ಇನ್ನೂ ಹೋಮಕುಂಡವು ಶಾಂತವಾಗಿಲ್ಲ. ಅಷ್ಟರೊಳಗಾಗಿ ಪ್ರಮಾಣಮಾಡು. ವಿಜಯನಗರದ ರಕ್ಷಣೆಗೋಸ್ಕರವಾಗಿ ಏನುಬೇಕಾದರೂ ಮಾಡುತ್ತೇನೆಂದು ಅಗ್ನಿಯನ್ನು ಮುಟ್ಟಿ ಪ್ರಮಾಣಮಾಡು."

ಭರತಾಚಾರ್ಯರು ಎದ್ದರು. ಏಕೋ ಎದೆ ನಡುಗಿತು. ಮುಂದಕ್ಕೆ ಎರಡು ಹೆಜ್ಜೆ ಇಡುವುದರೊಳಗಾಗಿ ಏಕೋ ಕೈಕಾಲು ನಡುಗಿತು. "ಶಂಭೂ, ಏಕೋ ನನಗೆ ಕೈಕಾಲು ನಡುಗುತ್ತಿದೆ ಕಣೋ" ಎಂದರು. ಆಚಾರ್ಯರು ಯಾವಾಗಲೂ ಯಾವುದಕ್ಕೂ ಹೆದರಿದ್ದಿಲ್ಲ.

ಶಾಂಭವಾನಂದರು ಗೋಡೆ ಒರಗಿ ಕುಳಿತಿದ್ದವರು ಗೋಡೆಬಿಟ್ಟು ಸರಿಯಾಗಿ ಕುಳಿತರು. ಮುಚ್ಚಿದ್ದ ಕಣ್ಣು ತೆಗೆದರು. "ಅಲ್ಲಿರುವ ತೆಂಗಿನಕಾಯಿ ತಾ" ಎಂದರು. ಏನೋ ಮಂತ್ರಿಸಿ, ಆಚಾರ್ಯರಿಗೆ ಇಳಿತೆಗೆದರು; ಅವರಿಗೆ ಧೈರ್ಯ ಬಂತು. ಎದ್ದು ಆಚಮನ ಮಾಡಿ, ಧೈರ್ಯವಾಗಿ ಯಜ್ಞೇಶ್ವರನ ಬಳಿಗೆ ಹೋದರು. ಆನಂದರ ಅಪ್ಪಣೆಯಂತೆ, ಅಲ್ಲಿದ್ದ ಸ್ರುವದಲ್ಲಿ ತುಪ್ಪ ತೆಗೆದುಕೊಂಡು ಯಜ್ಞೇಶ್ವರನಿಗೆ ಆಹುತಿಯಿತ್ತು "ಈ ಯಜ್ಞೇಶ್ವರನ ಸಾಕ್ಷಿಯಾಗಿ ವಿಜಯನಗರದ ಆಪತ್ತು ಕಳೆಯುವುದಕ್ಕೋಸ್ಕರ ಏನು ಬೇಕಾದರೂ ಮಾಡುತ್ತೇನೆ" ಎಂದು ಮೂರು ಸಲ ನುಡಿದರು. ಕೊನೆಯ ಸಲ ನುಡಿದು

ಆಜ್ಯಾಹುತಿಯನ್ನಿತ್ತಾಗ ಏನಾಯಿತೋ ಏನೋ ಹೋಮಕುಂಡದಿಂದ ತಟ್ಟನೆ ಜ್ವಾಲೆಗಳು ಎದ್ದುವು. ಜ್ವಾಲೆಗಳ ಮಧ್ಯದಲ್ಲಿ ಒಂದು ಕರಿಯಬಟ್ಟೆಯುಟ್ಟ ಕಪ್ಪನೆಯ ಹೆಣ್ಣು ಎದ್ದು ವಿಕಾರವಾಗಿ ನಗುತ್ತ, "ಕೊಡು, ಹಾಗಾದರೆ, ನನಗೆ ಬೇಕಾದ ಬಲಿಯನ್ನು ಕೊಡು" ಎಂದು ವಿಚಿತ್ರವಾಗಿ ಚೀರಿದಳು. ಆಚಾರ್ಯರು ಶ್ರೀಹರಿ ಎಂದು ಜ್ಞಾನತಪ್ಪಿ ಕೆಳಕ್ಕೆ ಬಿದ್ದುಹೋದರು.

ಆನಂದರು ಕುಳಿತಿದ್ದ ಸ್ಥಳದಿಂದಲೇ ಒಂದು ಹಿಡಿ ಬೂದಿಯನ್ನು ತೆಗೆದುಕೊಂಡು ಥಟ್ಟನೆ ಹೊಡೆದರು. ಆ ಸ್ತ್ರೀ ರೂಪವು ಕೈನೀಡಿಕೊಂಡು ಬಾಯಿ ತೆರೆದುಕೊಂಡು ಭಯಂಕರವಾದ ಕೋರೆಗಳನ್ನು ತೋರಿಸುತ್ತ, ಹಾಗೆಯೇ ನಿಂತುಬಿಟ್ಟಿತು. ಆ ಬೂದಿಯ ಒಂದು ಭಾಗವು ಆಚಾರ್ಯರ ಮೇಲೆ ಬಿದ್ದು ಅವರಿಗೆ ಎಚ್ಚರವಾಯಿತು. ಆನಂದರು ಗಂಭೀರವಾಗಿ "ಇಕೋ ಇದೇ ವಿಜಯನಗರದ ಮೃತ್ಯು. ಇದಕ್ಕೆ ಬೇಕಾದ ಬಲಿಯನ್ನು ಕೊಟ್ಟು ವಿಜಯನಗರವನ್ನು ಉಳಿಸಿಕೊಳ್ಳಬೇಕು. ನೀನು ಧೈರ್ಯವಾಗಿ ಕೊಡುವೆನೆನ್ನು. ಅದು ಸರಿಯೆಂದು ಹೊರಟುಹೋಗುವುದು. ಹೆದರಬೇಡ. ಅದರಿಂದ ನಿನಗೆ ಏನೂ ಭಯವಿಲ್ಲ. ಧೈರ್ಯವಾಗಿದ್ದೀಯಾ? ಹೆದರಿಕೆಯಿಲ್ಲವಷ್ಟೇ? ಕಟ್ಟು ಬಿಡಲೇ?" ಎಂದು ಕೇಳಿ, ಕೇಳಿ, ಆಚಾರ್ಯರು ಹೂಂ ಎಂದ ಮೇಲೆ, ಇನ್ನೊಂದು ಹಿಡಿ ಬೂದಿಯನ್ನು ಊದಿದರು. ಬೂದಿಯನ್ನು ತಿದಿಯಿಟ್ಟು ಊದಿದ ಹಾಗಾಗಿ ಆ ಕೋಣೆಯನ್ನೆಲ್ಲಾ ಆವರಿಸಿತು. ಆ ಬೂದಿಯು ತನ್ನನ್ನೂ ಮುಚ್ಚಲು ಆ ಮೃತ್ಯು ದೇವತೆಯು ಸೌಮ್ಯಳಾಗಿ ಗಂಭೀರವಾಗಿ "ಬಲಿಯನ್ನು ಕೊಡುವೆಯಾ?" ಎಂದು ಮತ್ತೆ ಕೇಳಿದಳು. ಆಚಾರ್ಯರು ನಡುಗುತ್ತಾ "ಕೊಡುವೆನು" ಎಂದು ಇನ್ನೊಂದು ಆಜ್ಯಾಹುತಿಯನ್ನು ಕೊಟ್ಟರು. ದೇವತೆಯು ಕಣ್ಮರೆಯಾಯಿತು.

ಆನಂದರ ಆನಂದವೇ ಆನಂದ. "ಶಾಮಣ್ಣ, ನೀನೂ ನಾನೂ ಈ ರಾಜ್ಯದಲ್ಲಿ ಹುಟ್ಟಿದುದಕ್ಕೆ ಸಾರ್ಥಕವಾಯಿತು. ಈ ರಾಷ್ಟ್ರದ ಋಣವನ್ನು ತೀರಿಸಿದುದಾಯಿತು. ನನಗೆ ಭೂ ಋಣವು ತೀರಿತು. ನಿನಗೆ ಇನ್ನೂ ಇದೆ. ಇನ್ನುಮುಂದೆ ನೀನು ಮಾಡಬೇಕಾಗಿರುವ ಕಾರ್ಯ ಇಷ್ಟು. ಇಲ್ಲಿ ಇಟ್ಟಿರುವ ಕಲಶದಲ್ಲಿರುವ ಮಂತ್ರೋದಕವನ್ನು ನನ್ನ ತಲೆಯ ಮೇಲೆ ಸುರಿದುಬಿಡು. ಅಲ್ಲಿ ಯಜ್ಞೇಶ್ವರನ ಬಳಿಯಲ್ಲಿರುವ ಹೋಮ ಮಂತ್ರಪೂತವಾದ ಸಮಿತ್ತುಗಳ

ಕಂತೆಯನ್ನು ಹೋಮಕುಂಡದಲ್ಲಿ ಹಾಕಿಬಿಡು. ನೀನು ಬಾಗಿಲನ್ನು ಹಾಕಿಕೊಂಡು ಹೊರಟುಹೋಗು. ಇನ್ನು ಮೂರು ದಿನ ಇತ್ತ ಕಡೆ ಬರಬೇಡ.

" ಈ ಕಲಶೋದಕವನ್ನು ನಿನ್ನ ಮೇಲೆ ಸುರಿದರೆ ಏನಾಗುತ್ತದೆ ? "

" ಆಗುವುದೇನು ? ಜ್ಞಾನತಪ್ಪಿ ಕೆಳಕ್ಕುರುಳುತ್ತೇನೆ."

" ಈ ಸಮಿತ್ತುಗಳು ಸುಮಾರು ಒಂದು ತಬ್ಬಿನಷ್ಟು ಇವೆ. ಕುಂಡದಲ್ಲಿ ಅಗ್ನಿ ಪ್ರಜ್ವಲಿಸುತ್ತಿದೆ. ಈ ಸಮಿತ್ತುಗಳು ಚೆನ್ನಾಗಿ ತುಪ್ಪದಲ್ಲಿ ನೆನೆದಿವೆ ಈ ಕಂತೆ ತೆಗೆದು ಹೋಮಕುಂಡದಲ್ಲಿ ಹಾಕಿದರೆ, ಅಗ್ನಿಯು ಪ್ರಜ್ವಲಿಸುವುದು. ಈ ಗರಿಯ ಗುಡಿಸಲು ಹತ್ತಿಕೊಳ್ಳುವುದು. ನಿನ್ನ ಗತಿ ? "

" ಗತಿಯೇನು ? ಎಂದಾದರೊಂದುದಿನ ಬಿದ್ದುಹೋಗಬೇಕಾಗಿರುವ ಈ ಘಟವನ್ನು ಬಲಿಗೊಟ್ಟು ನನ್ನ ರಾಷ್ಟ್ರದ ಋಣವನ್ನು ಕಳೆದು ಸದ್ಗತಿಗೆ ನಡೆಯುವೆನು. ನೀನು ಕಲಶೋದಕವನ್ನು ನನ್ನ ಮೇಲೆ ಸುರಿಯುವುದಕ್ಕೆ ಮುಂಚೆಯೇ ಸಮಾಧಿಯಲ್ಲಿ ಇರುವೆನಾಗಿ ನನಗೆ ತಪ್ಪದೆ ಸಿದ್ಧಿಯಾಗುವುದು ಇನ್ನು ಏಳು. ಕಾಲಾತೀತವಾಗಬಾರದು "

" ಕಾಲಾತೀತವಾದರೆ ಏನು ಆಗುತ್ತದೆ ?

" ಕಾಲಾತೀತವಾದರೆ ಈಗ ಮೃತ್ಯುವಿಗೆ ಕೊಟ್ಟಿರುವ ಮಾತು ತಪ್ಪಿಹೋಗುತ್ತದೆ. ಆಗ ಮತ್ತೊಂದು ಸಲ ಬರುತ್ತದೆ. ಆಗ ಎರಡು ಬಲಿ ಕೊಡಬೇಕು."

" ಈಗ ತಪ್ಪಿಹೋಗಲಿ. ಇನ್ನೊಂದು ಸಲ ಬಂದಾಗ ಎರಡು ಬಲಿ ಕೊಡೋಣ. ನಿನ್ನ ಜೊತೆಯಲ್ಲಿ ನಾನೂ ಬಲಿಯಾಗುತ್ತೇನೆ."

" ಆಗ ಬಲಿಕೊಡುವವರಾರು ? "

" ನಾವಿಬ್ಬರೂ ಪಕ್ಕಪಕ್ಕದಲ್ಲಿ ಕುಳಿತುಕೊಳ್ಳೋಣ. ಕಲಶೋದಕವನ್ನು ನೀನು ನನಗೆ ಹಾಕು; ನಾನು ನಿನಗೆ ಹಾಕುತ್ತೇನೆ. ಇಬ್ಬರೂ ಬಲಿಯಾಗಿ ಹೋಗೋಣ."

" ಸಮಿತ್ತಿನ ಕಂತೆ ಹೋಮ ಕುಂಡಕ್ಕೆ ಹಾಕುವರಾರು ? "

ಆಚಾರ್ಯರಿಗೆ ಕಷ್ಟಕ್ಕೆ ಬಂತು. ಕೊನೆಗೆ ಕಣ್ಣಲ್ಲಿ ನೀರಿಟ್ಟುಕೊಂಡು " ಶಂಭು, ನಿನ್ನನ್ನು ಕಂಡು ನಲವತ್ತು ವರ್ಷವಾಗಿತ್ತು. ಈಗ ನೋಡಿದೆ.

ಹಾಗೆ ನೋಡಿದುದು ನೀನು ಬದುಕಿರುವಾಗಲೇ ನಿನ್ನನ್ನು ಬೆಂಕಿಗೆ ಹಾಕುವುದಕ್ಕೇನು ? ಇದು ನನ್ನಿಂದ ಆಗುವುದಿಲ್ಲ."

"ಶಾಮಣ್ಣಾ, ನಿನಗೆ ಮೂರು ದಿನಗಳಿಂದ ಹೇಳಿದೆ. ನೀನು ಆಗಲಿ ಎಂದ ಮೇಲೆ ನಾನು ಈ ಕೆಲಸಕ್ಕೆ ಕೈಯಿಟ್ಟೆ."

"ಆದರೆ ನೀನು ನನಗೆ ನಿನ್ನನ್ನು ಬಲಿಕೊಡಬೇಕೆಂದು ಹೇಳಲಿಲ್ಲ ? "

"ಅದು ಹೇಳಕೂಡದು. ಅದರಿಂದ ಹೇಳಲಿಲ್ಲ. ಆಯಿತು. ಈಗ ನೀನು ಬಲಿಕೊಡದಿದ್ದರೆ ಏನಾಗುವುದು ಬಲ್ಲೆಯಾ ? "

"ಆಗಲೇ ಹೇಳಿದ್ದೀಯಲ್ಲ ! ಎರಡು ಬಲಿ. ನಾವಿಬ್ಬರೂ ಯಾವಾಗ ಸಿದ್ಧವಾಗಬೇಕು ಹೇಳು."

"ಶಾಮಣ್ಣಾ, ನನ್ನ ಮಾತು ಕೇಳು. ಏಳು. ವಿದ್ಯಾರಣ್ಯರು ಕಟ್ಟಿದ ವಿಜಯನಗರ, ವಿದ್ಯಾನಗರ, ಶತ್ರುಗಳ ಪಾಲಾಗಿ, ಮನೆ ಮನೆಯೂ ಬೆಂಕಿಯ ಪಾಲಾಗಬೇಕೇ ? ಮಹಾಲಕ್ಷ್ಮಿಯು ಓಲಾಡುತ್ತಿರುವ ಈ ನಗರ ಹಿಂದೂ ಸಂಸ್ಕೃತಿಯನ್ನು ಪುನರುದ್ಧಾರ ಮಾಡಿದ ಈ ಪಟ್ಟಣ, ತುರುಕರು ಉತ್ತರವನ್ನೆಲ್ಲಾ ಸ್ವಾಹಾಮಾಡಿ ದಕ್ಷಿಣಕ್ಕೂ ಕಾಲಿಟ್ಟಾಗ ಕೃಷ್ಣೆಯಿಂದ ಕೆಳಕ್ಕೆ ಅವರು ಬರದಂತೆ ತಡೆದ ಈ ವೀರಪುರ, ಶತ್ರುಗಳ ಪಾಲಾಗುವುದು ನಿನಗೆ ಸಮ್ಮತವೆ ? ನಿನ್ನ ನಗರದಲ್ಲಿ ಬದುಕಿ ಬಾಳುತ್ತಿರುವ ಹೆಣ್ಣುಮಕ್ಕಳನ್ನು ಹಗೆಯವರು ಹಿಡಿದು ಮಾನಭಂಗಮಾಡಿ ಅವರು ಅಯ್ಯೋ ಎಂದು ಬಡಿದುಕೊಳ್ಳುತ್ತಿದ್ದರೆ ಆ ಗೋಳನ್ನು ಕೇಳುವುದು ನಿನಗೆ ಹಿತವೆ ? ನಿಮ್ಮಪ್ಪ ತಾತ ಮುತ್ತಾತಂದಿರು ಸುಮಾರು ಮುನ್ನೂರು ವರ್ಷಗಳಿಂದ ಪೂಜೆಮಾಡುತ್ತಿದ್ದ ಈ ಪವಿತ್ರ ದೇವಾಲಯಗಳ ಮೂರ್ತಿಗಳನ್ನು ಅವರು ಹೊಡೆದು ತುಂಡುಮಾಡಿ ಅಪವಿತ್ರಮಾಡುವುದು ನಿನಗೊಪ್ಪಿಗೆಯೇ ? ಈ ತುಂಬಿದ ಊರು ನರಿಗಳು ಹಗಲುಹೊತ್ತು ಹೆದರಿಕೆಯಿಲ್ಲದೆ ತಿರುಗುವ ಹಾಳು ಭೂಮಿಯಾದರೆ ನಿನಗೆ ಸಂತೋಷವೇ ? ಲಕ್ಷಾಂತರ ಜನಕ್ಕೆ ಅನ್ನೋದಕಗಳನ್ನು ಒದಗಿಸುತ್ತ ಅನ್ನಪೂರ್ಣೆಯಂತೆ ಅನೇಕಾನೇಕರಿಗೆ ಆಶ್ರಯವಾಗಿರುವ ಈ ನಗರಿ, ದಾರಿ ತಪ್ಪಿ ಬಂದ ಕಾಗೆಗೆ ಒಂದು ಅಗಳು ಹಾಕುವರಿಲ್ಲದೆ ಹೋಗುವ ಸ್ಮಶಾನವಾಗುವುದು ನಿನಗೆ ಸಮ್ಮತವೆ ? ಶಾಮಣ್ಣಾ, ನನ್ನ ಮಾತು ಕೇಳು. ಉದುರುವ ಹಣ್ಣೆಲೆಯಂತೆ ಎಂದಾದರೊಂದುದಿನ ಬಿದ್ದೇ ಹೋಗಬೇಕಾಗಿರುವ

ಈ ದೇಶದ ಮೇಲಿನ ಅಭಿಮಾನದಿಂದ, ರಾಜ್ಯಕ್ಕೆ ಒದಗಿರುವ ವಿಪತ್ತನ್ನು ಲಕ್ಷಿಸದಿರುವುದೆ? ನೀನೇ ಹೇಳು. ನಿನ್ನ ಪರಮ ಪ್ರಿಯನಾದ ಸ್ನೇಹಿತ ನಾದರೂ ನಾನು ಒಬ್ಬನು. ನನ್ನೊಬ್ಬನನ್ನು ಬಲಿಗೊಟ್ಟು ಕೋಟಿ ಕೋಟಿ ಪ್ರಜೆಗಳಿಗೆ ಆಶ್ರಯವಾಗಿರುವ ಈ ರಾಜ್ಯವನ್ನು ರಕ್ಷಿಸು. ನಾನು ಉತ್ತರದಿಂದ ಹಿಮಾಲಯದಿಂದ ಬಂದಿರುವೆನು. ವಿಂಧ್ಯಪರ್ವತಕ್ಕೆ ಮೇಲಿನ ಪ್ರದೇಶವೆಲ್ಲ ತುರುಕರ ವಶವಾಗಿದೆ. ವಿಂಧ್ಯದಿಂದ ಕೆಳಗೆ ಗೋದಾವರಿಯವರೆಗೆ ಅವರಿಗೆ ಸೇರಿಹೋಗಿದೆ. ಪೂರ್ವದಲ್ಲಿ ಬಂಗಾಳವೆಲ್ಲ ಖಾನರ ಪಾಲಾಗಿದೆ. ಪಶ್ಚಿಮ ದಲ್ಲಿ ರಾಜಪುಟಾಣದಲ್ಲಿ ಆ ಬೆಂಗಾಡಷ್ಟು ರಾಜಪುತ್ರರ ಕೈಯಲ್ಲಿ ಎಣ್ಣೆ ಸಾಲದ ದೀಪದಂತೆ ಮೊಂಕಾಗುತ್ತಿದೆ. ಇನ್ನು ಈ ಭರತಖಂಡದಲ್ಲೆಲ್ಲಾ ಉಳಿದಿರು ವುದು ಈ ವಿಜಯನಗರ ರಾಜ್ಯವೊಂದು. ಹಿಂದೂಗಳು ಚೆನ್ನಾಗಿ ಬಾಳಿ ಬದುಕಿದ್ದ ಗುರುತಾಗಿ, ಹೊಯ್ಸಳ ಯಾದವ ಕಾಕತೀಯಾದಿ ನೃಪ ಶ್ರೇಷ್ಠರ ಗುರುತಾಗಿ ಉಳಿದಿರುವ ಈ ರಾಜ್ಯವನ್ನು ರಕ್ಷಿಸಲು ನನ್ನನ್ನು ಬಲಿಕೊಡಲು ಹಿಂದೆಗೆಯಬೇಡ. ಹಿಂದಿನ ಬೇಬಿಲಾನ್ ನಗರದಂತೆ, ಇಂದಿನ ಪೀಕಿಂಗ್ ನಗರದಂತೆ ಐದು ಯೋಜನ ಉದ್ದ ಮೂರು ಯೋಜನ ಅಗಲ ಇರುವ ಮಹದೈಶ್ವರ್ಯ ಸಂಪನ್ನವಾದ ಈ ನಗರದಲ್ಲಿ ಲೂಟಿ ಕೊಳ್ಳೆಗಳು ನಡೆಯುವ ವಲ್ಲಾ! ಅದನ್ನು ತಪ್ಪಿಸಲಾರೆಯಾ? ನಿನ್ನ ಅಭಿಮಾನಕ್ಕೆ ಪಾತ್ರವಾದುದು ಯಾವ ಯಾವದು ಇರುವುದೊ ಅದೆಲ್ಲವೂ ನಾಶವಾಗಿ ಹೋಗುವುದು. ಕೇಳು, ಶಾಮಣ್ಣ! ಸೂತ್ರವು ನಿನ್ನ ಕೈಯಲ್ಲಿದೆ. ದೊಡ್ಡ ಮನಸ್ಸುಮಾಡು. ಇನ್ನೂ ಒಂದು ವರ ಕೊಡುವೆನು ತೆಗೆದುಕೊ. ನೀನು ಈ ದಿನ ಇಲ್ಲಿ ಈ ಕೆಲಸ ಮಾಡಿ, ನಿನ್ನ ಶಿಷ್ಯಳ ಮನೆಗೆ ಹೋಗು. ಅಲ್ಲಿ ನಾನು ಪೂಜಿಸುತ್ತಿದ್ದ ದೇವಿಯು ಆ ನಿನ್ನ ಶಿಷ್ಯಳ ಮೇಲೆ ಬಂದು ನಾನು ಈ ಬಲಿಯಾಗುವ ದೀಕ್ಷೆ ಯನ್ನು ವಹಿಸಿದ ಕಥೆಯನ್ನು ಹೇಳುವಳು. ಏಳು ಹೊತ್ತಾಗುತ್ತ ಬಂತು. ಏಳು. ನಾನು ಸನ್ಯಾಸಿ, ನನಗೆ ಹಿಂದಿಲ್ಲ ಮುಂದಿಲ್ಲ. ನಿನಗೆ ಪಾಪ ಬರುವು ದಿಲ್ಲ. ಪುಣ್ಯವು ಅಪಾರವಾಗಿ ಬರುವುದು."

ಶಾಂಭವಾನಂದರ ಮಾತುಗಳನ್ನು ಕೇಳಿ ಆಚಾರ್ಯರು ಮುಗ್ಧರಾಗಿ ಹೋದರು. ಆದರೂ ಇನ್ನೂ ಅವರು ಹಿಂದೆ ಮುಂದೆ ನೋಡುತ್ತಿರಲು, ಆನಂದರು, "ಶಾಮಣ್ಣ, ನಿನ್ನ ಅದೃಷ್ಟ ಚೆನ್ನಾಗಿದೆ. ನಾನು ಈ ಬಲಿಪೀಠ

ಢಲ್ಲಿ ಕುಳಿತಿದ್ದೇನೆ. ಕೋಪಮಾಡಿಕೊಳ್ಳುವಂತಿಲ್ಲ. ಇಲ್ಲದಿದ್ದರೆ ಒಂದೇ ಒಂದು ಹುಂಕಾರ ಮಾತ್ರದಿಂದ ನಿನ್ನನ್ನು ಭಸ್ಮಮಾಡಿಬಿಡುತ್ತಿದ್ದೆ. ಏನು ಮಾಡಲಿ. ಈಗ ಕೋಪ ಮಾಡಿಕೊಳ್ಳುವಂತಿಲ್ಲ. ಅದರಿಂದ ನಿನಗೆ ಅನ್ನ ಕೊಟ್ಟು ನಿನ್ನನ್ನು ಕಾಪಾಡಿರುವ ನಿನ್ನ ಅನ್ನದಾತನ ಮೇಲೆ ಆಣೆ. ಏಳು ಮುಂದಿನ ಕಾರ್ಯವನ್ನು ಮಾಡು" ಎಂದರು.

ಆಚಾರ್ಯರು ಇನ್ನೂ ಮೀನ ಮೇಷ ಎಣಿಸುತ್ತಿರಲು, ಶಾಂಭವಾನಂದರು, "ಗುರುದೇವ, ಕರುಣಿಸು, ನಿನ್ನ ಇಚ್ಛೆಯಿದ್ದಂತಾಗಲಿ" ಎಂದು ಇನ್ನೊಂದು ಹಿಡಿ ಭಸ್ಮವನ್ನು ತೆಗೆದುಕೊಂಡು ಆಚಾರ್ಯರ ಮೇಲೆ ತೂರಿದರು. ಅವರಿಗೆ ಮಂಕು ಹಿಡಿದಂತಾಯಿತು. ಎದ್ದರು. ಮಂತ್ರೋದಕದ ಕಲಶವನ್ನು ತೆಗೆದು ಕೊಂಡರು. ಅದೇನಾಯಿತೋ ಏನೋ ಅದು ಅವರ ಕೈಯಿಂದ ಬಿದ್ದು ಹೋಯಿತು. ಮಣ್ಣಿನ ಮಡಿಕೆ. ಒಡೆದು ನೂರು ಚೂರಾಯಿತು. ಆಚಾರ್ಯರು ಧೊಪ್ಪನೆ ಬಿದ್ದುಹೋದರು. ಆನಂದರು ಜುಗುಪ್ಸೆಯಿಂದ "ಹೋಗಲಿ, ಬಿಡು. ಹಾಳು ದೈವಕ್ಕೆ ಬೇಡವಾದರೆ ನಾನೇಕೆ ಅಳಲಿ?" ಎಂದು ಆಚಾರ್ಯರಿಗೆ ಚಿಕಿತ್ಸೆಮಾಡಿ, ಕರೆದು ತಂದು ಗಾಡಿಯಲ್ಲಿ ಮಲಗಿಸಿದರು. ಮನೆಗೆ ಬರುವ ವೇಳೆಗೆ ಆಚಾರ್ಯರಿಗೆ ಪೂರ್ಣವಾಗಿ ಪ್ರಜ್ಞೆ ಬಂದಿತ್ತು.

ಅಂದು ಅವರು ಮನೆಗೆ ಬಂದ ಮೊದಲು ಏನೋ ಒಂದು ವಿಚಿತ್ರ ಅನು ಭವವಾಗುತ್ತಿದೆ. ಯಾರೋ ಒಬ್ಬರು ಜೊತೆಯಲ್ಲಿದ್ದಂತೆ ಇದೆ. ಇನ್ನು ಯಾವುದೋ ಒಂದು ಕರಾಳ ಸ್ವರೂಪ ಕೊಂಚ ದೂರದಲ್ಲಿ ನಿಂತು "ಎಲ್ಲಿ, ನನಗೆ ಕೊಡಬೇಕಾದುದನ್ನು ಕೊಡುಮುತ್ತೆ. ನನಗೆ ಹಸಿವು ಮೀರುತ್ತಿದೆ." ಎನ್ನುವಂತಿದೆ. ರೂಪ ಕಣ್ಣಿಗೆ ಕಾಣಿಸುವುದಿಲ್ಲ; ಮಾತು ಕಿವಿಗೆ ಕೇಳುವುದಿಲ್ಲ; ಆದರೂ ಮನಸ್ಸಿಗೆ ರೂಪವೂ ವಚನವೂ ಬೋಧೆಯಾಗುತ್ತಿದೆ. ಇನ್ನೊಂದು ಅತಿ ಮನೋಹರವಾದ, ಅತಿ ಶುಭವಾದ, ಮನಸ್ಸಿಗೆ ಹಿತವೂ ಪ್ರಿಯವೂ ಆದ ಒಂದು ಮೂರ್ತಿಯು ಹಿಂದೆ ಹಿಂದೆಯೇ ಅಲೆಯುತ್ತಿರುವಂತೆ ಬೋಧೆಯಾಗು ತ್ತಿದೆ. ಆ ರೂಪವು ಸ್ಪಷ್ಟವಾಗಿ ಕಣ್ಣಿಗೆ ಕಾಣಲೊಲ್ಲದು. ಆದರೂ ಓಡಾಡು ತ್ತಿದ್ದರೆ ತಿರುಗಾಡುವಾಗ ಮೈ ತಗುಲುವುದೇನೋ ಎಂದು ಓರೆಯಾಗುವಷ್ಟು ಸ್ಪಷ್ಟವಾಗಿದೆ. ಆಚಾರ್ಯರು ಊಟಮಾಡುತ್ತಿದ್ದರೆ ಕೈಯಲ್ಲಿರುವ ತುತ್ತಿ ಗಿಂತಲೂ ಮಗ್ಗುಲಲ್ಲಿರುವ ಸದ್ಭಾವವು ಸತ್ಯವೆನ್ನಿಸುವಂತಿದೆ.

ಎಂದಿನಂತೆ ಅವರು ಊಟವಾದ ಮೇಲೆ ಮುಸುಕೆಳೆದುಕೊಂಡು ವಿಶ್ರಾಂತಿಗಾಗಿ ಮಲಗಿದರು. ಅವರು ಕಣ್ಮುಚ್ಚಿಕೊಂಡಿದ್ದಾರೆ. ಅವರ ಆತ್ಮವು ಆ ದೇಹವನ್ನು ಬಿಟ್ಟು ಮೇಲಕ್ಕೆ ಎದ್ದು ಎಲ್ಲಿಯೋ ಹೊರಟಿದೆ. ಕಾಲಚಕ್ರವು ಮುಂದಕ್ಕೆ ಹರಿಯುವುದು ತಪ್ಪಿ ಹಿಂದಕ್ಕೆ ಹೊರಳಿದೆ. ತುಂಗ ಭದ್ರೆಯು ಉಕ್ಕೇರಿ ಬಂದು, ಆಚಾರ್ಯರನ್ನು ಹೊತ್ತುಕೊಂಡು ಹೋಗಿ ತನ್ನ ತೀರದಲ್ಲಿರುವ ಒಂದು ಗವಿಯಲ್ಲಿ ಎಸೆಯುತ್ತಾಳೆ. ಅಲ್ಲಿ ಕತ್ತಲು ತುಂಬಿದ್ದು ಇವರ ಕಣ್ಣು ಕತ್ತಲಿಗೆ ಒಗ್ಗುವುದರೊಳಗಾಗಿ ಒಳಗಿನಿಂದ ಯಾರೋ ಒಂದು ದೀಪವನ್ನು ತೆಗೆದುಕೊಂಡು ಈಚೆಗೆ ಬರುತ್ತಾರೆ. ಇವರಿಗೆ ಅವರ ಗುರ್ತುಸಿಕ್ಕು ತ್ತದೆ. ಅವರೇ ವಿದ್ಯಾರಣ್ಯರು. ಇವರು ಆಶ್ಚರ್ಯಪಡುತ್ತಾರೆ. "ಇದೇನು? ವಿದ್ಯಾ ರಣ್ಯರು ಮುಕ್ತರಾಗಿಲ್ಲವೆ?" ಎಂಬ ಪ್ರಶ್ನೆಯು ಏಳುತ್ತದೆ. ಇವರು ಬಾಯಲ್ಲಿ ಆಡದಿದ್ದರೂ ಅವರಿಗೆ ಅದು ತಿಳಿದು "ನಮೋಕ್ಷೋಽಸ್ತಿ ನಬಂಧೋಽಸ್ತಿ ಜೀವೋಮುಕ್ತಃ ಸ್ಸದಾ ಶಿವಃ—ಮೋಕ್ಷವಿಲ್ಲ; ಬಂಧವಿಲ್ಲ; ಯಾವಾಗಲೂ ಮುಕ್ತನಾಗಿರುವ ಶಿವನೇ ಜೀವನಾಗಿ ಬರುತ್ತಾನೆ" ಎನ್ನುತ್ತಾರೆ. ಹಾಗೆಯೇ ನೋಡುತ್ತಿದ್ದರೆ, ಅವರ ಮೈಯಿಂದ ಎರಡು ಸಣ್ಣ ಕಿಡಿಗಳು ಹಾರಿದಂತಾಗಿ ಈಚೆಗೆ ಬಂದು ಎರಡು ಬೊಂಬೆಗಳಾಗುತ್ತವೆ. ಅವನ್ನು ಅವರು ಮುಟ್ಟುತ್ತಲೂ ಅವು ಸಚೇತನಗಳಾಗಿ ಪ್ರಾಣವಂತಗಳಾಗುತ್ತವೆ. ಎರಡೂ ಕ್ರೀಡಾಪರರಾದ ಇಬ್ಬರು ಸುಂದರ ಬಾಲಕರಾಗಿ ಹಕ್ಕಿಗಳಾಗಿ ಕುಣಿಯುತ್ತಿದ್ದಾರೆ. ಒಬ್ಬನು ಶಂಭು, ಇನ್ನೊಬ್ಬ ಶಾಮಣ್ಣ.

ವಿದ್ಯಾರಣ್ಯರ ಕೈಯಲ್ಲಿ ಹಿಡಿದಿದ್ದ ದೀಪವಾರಿ ಮತ್ತೆ ಹತ್ತುತ್ತದೆ. ಆ ವೇಳೆಗೆ ಶಾಮಣ್ಣನು ಭರತಾಚಾರ್ಯನಾಗಿ ಉತ್ತಮ ವಸ್ತ್ರ ಭೂಷಣ ಭೂಷಿತ ನಾಗಿ ವಾಹನಾದಿಗಳಲ್ಲಿ ತಿರುಗುತ್ತಿದ್ದಾನೆ. ಅತ್ತ ಇನ್ನೊಬ್ಬನು ಗುಹೆಯೊಂದ ರಲ್ಲಿ ಕೌಪೀನಮಾತ್ರಧಾರಿಯಾಗಿ ಒಂದು ಕಮಂಡಲುವಿಟ್ಟುಕೊಂಡು ಏನೋ ಪೂಜೆಯಲ್ಲಿ ಕುಳಿತಿದ್ದಾನೆ. ಪೂಜೆಯನ್ನು ಕೈಕೊಳ್ಳುತ್ತಿದ್ದ ದೇವಿಯು ಇಷ್ಟಾರ್ಥಸಿದ್ಧಿರಸ್ತು ಎನ್ನುತ್ತಾಳೆ. ಮತ್ತೆ ನೋಡಿದರೆ ಇಬ್ಬರೂ ಸೇರಿದ್ದಾರೆ. ಹಿಂದಿನ ದಿನದ ಸವಿ ನೆನಪುಗಳಲ್ಲಿ ಕಲೆತು ಕೆಲೆತು ಮಲೆತು ಆನಂದಸಾಗರದಲ್ಲಿ ಮುಳುಗಿ ತೇಲುತ್ತಿದ್ದಾರೆ.

ಮತ್ತೆ ದೀಪವಾರಿ ಹತ್ತಿತು. ಈಗ ವಿದ್ಯಾರಣ್ಯರು ಒಂದು ಬೆಟ್ಟದಷ್ಟು

ಆಗಿದ್ದಾರೆ. ಅವರು ನೀಡಿರುವ ಕೈಯು ಮಳೆಯ ಮೋಡದಂತೆ ವೃಷ್ಟಿಯನ್ನು ಮಾಡುತ್ತಿದೆ. ಆ ವೃಷ್ಟಿಯು ಕರೆದ ಕಡೆಯಲ್ಲೆಲ್ಲಾ ಸಮೃದ್ಧಿಯಾಗಿ ಮಾಂತ್ರಿಕನ ಮಂತ್ರ ಬಲದಿಂದ ಕಣ್ಣೆದುರಿಗೇ ಬೆಳೆಯುವ ಮಾವಿನ ಗಿಡದಂತೆ ಒಂದು ಸುಂದರವಾದ ನಗರವು ಬೆಳೆಯುತ್ತಿದೆ. ಹೌದು. ಅದೇ ಪಂಪಾಪತಿ ವಿರೂಪಾಕ್ಷನ ಮಂದಿರದ ಭವ್ಯ ಗೋಪುರ. ಅಗೋ ಬೆಳ್ಳಿಯ ಪಟ್ಟಿಯಂತೆ ಬೆಳಗುತ್ತಾ ಹರಿಯುತ್ತಿರುವುದೇ ತುಂಗಭದ್ರಾ ನದಿ. ಸುತ್ತಮುತ್ತಲಿನ ಬೆಟ್ಟ ಕಾಡುಗಳೆಲ್ಲ ಪಟ್ಟಣವಾಗಿವೆ. ಅದೋ ಅಲ್ಲಿಯೋ ವಿಜಯವಿಟ್ಠಲನ ದೇವ ಸ್ಥಾನ ಅಲ್ಲಿಯೋ ಕ್ರೀಡಾಪರ್ವತದಂತೆ ಸುಂದರವಾಗಿ, ಸುಣ್ಣದಿಂದ ಬೆಳ್ಳಗೆ ಬೆಳ್ಳಿಯ ಮುದ್ದೆಯಂತೆ ಕಾಣುತ್ತಾ, ಚಿನ್ನದ ಕಲಶಗಳಿಂದ ಮುದ್ದಾಗಿರುವ ರಾಯರ ಅರಮನೆಯ ಮೇಲೆ ವರಾಹಧ್ವಜವು ಸಂಜೆಯ ಹೂಗಾಳಿಯಲ್ಲಿ ಸಂತೋಷದಿಂದ ನರ್ತಿಸುತ್ತಿದೆ. ಹೌದು. ಇದೇ ವಿಜಯನಗರ.

ಇದ್ದಕ್ಕಿದ್ದಂತೆ ದೀಪವಾರಿ ಹತ್ತಿತು. ಈಗ ವಿದ್ಯಾರಣ್ಯರು ಮತ್ತೆ ಮೂಲರೂಪದಲ್ಲಿ ನಿಂತಿದ್ದಾರೆ. ಯಾರೋ ಕರಾಳ ರೂಪಿನ ರಕ್ಕಸಿಯೊಬ್ಬಳು ಬಂದು ಈ ವಿಜಯನಗರವನ್ನೆಲ್ಲ ತಿನ್ನಲೇ ಎಂದು ಕೇಳುತ್ತಾಳೆ. ವಿದ್ಯಾರಣ್ಯರು ಅಗೋ ಅಲ್ಲಿ ಕುಳಿತಿರುವವರನ್ನು ಕೇಳು ಎಂದು ಕೈತೋರಿಸುತ್ತಾರೆ. ಶಾಮಣ್ಣ ಶಂಭು ಇಬ್ಬರೂ ಅವಳ ಮೇಲೆ ಬೀಳುತ್ತಾರೆ. ಅವಳು ಕಿರಿಚಿಕೊಳ್ಳುತ್ತಾಳೆ. ಆಚಾರ್ಯರಿಗೆ ಆ ಕಿರಿಚಾಟ ಕೇಳಿ ಎಚ್ಚರವಾಗಿಹೋಯಿತು.

ಇದೇನು ಈಕನಸು ಎಂದು ಏನೋ ಕರೆಕರೆ ಪಡುತ್ತಿರುವ ಮನಸ್ಸಿನಲ್ಲಿ ಕೈಕಾಲು ತೊಳೆದುಕೊಂಡು, ಆವೇಳೆಗಾಗಲೇ ಬಂದಿದ್ದ ಗಾಡಿಯಲ್ಲಿ ಶಿಷ್ಯಳ ಮನೆಗೆ ಹೋದರು. ಅಲ್ಲಿ ಚಿನ್ನಳ ಸ್ಥಾನದಲ್ಲಿ ರನ್ನಳು ನಿಂತಿದ್ದಾಳೆ. ಅವಳಿಗೆ ಗಾಬರಿ ತಾನೇ ತಾನಾಗಿದೆ. ಗುರುಗಳು ಬಂದಾರೆ ಎಂದು ಕಾದಿದ್ದಾಳೆ. ಅವರು ಬರುತ್ತಲೂ ಗಾಡಿಯಿಂದ ಇಳಿಸಿಕೊಂಡು, ಏನಿದು ಎಂದು ವಿಚಾರಿಸಿದ ಗುರುಗಳಿಗೆ ಹೇಳಿದಳು "ಅಕ್ಕ ದೇವರಮನೆಯಲ್ಲಿ ಕುಳಿತಿದ್ದಾಳೆ. ಗುರುಗಳು ಬಂದರೆ ಕಳುಹಿಸು ಎಂದು ಹೇಳಿ ಬಾಗಿಲು ಹಾಕಿಕೊಂಡಿದ್ದಾಳೆ. ಏನು ಮಾಡಿದರೂ ಮಾತೇ ಆಡದೆ ಇದ್ದಾಳೆ."

ಗುರುಗಳೂ ಹೋಗಿ ಕೈಕಾಲು ತೊಳೆದುಕೊಂಡು ದೇವರ ಮನೆಗೆ ಹೋದರು. ಚಿನ್ನಳು "ಬಾ, ಶಾಮಣ್ಣ, ಕಥೆಯನ್ನು ಕೇಳು. ನಿನಗಾಗಿ

ಇಲ್ಲಿ ಕಾದಿದ್ದೇನೆ. ನೀನೊಮ್ಮೆ ನನ್ನ ರೂಪವನ್ನು ನೋಡು. ನಿನಗೆ ನಂಬುಗೆಯಾಗಲೆಂದು ನಾನು ದರ್ಶನ ಕೊಡುತ್ತೇನೆ. ನಾನು ಭದ್ರಕಾಳಿ. ಒಮ್ಮೆ ಕಣ್ಣು ಮುಚ್ಚಿಕೊ" ಎಂದಳು. ಅವರೂ ಕಣ್ಮುಚ್ಚಿಕೊಂಡರು. ಕೈಮುಗಿದುಕೊಂಡರು. "ಜಗನ್ಮಾತೇ ರಕ್ಷಿಸು. ಸರ್ವಮಂಗಲ ಮಾಂಗಲ್ಯೇ ಶಿವೆ ಸರ್ವಾರ್ಥ ಸಾಧಿಕೇ ॥ ಶರಣ್ಯೇತ್ರ್ಯಂಬಕೇ ದೇವಿ ನಾರಾಯಣಿ ನಮೋಸ್ತುತೇ" ಎಂದು ಮನಸ್ಸಿನಲ್ಲಿ ಪ್ರಣಾಮಾದಿಗಳನ್ನು ಅರ್ಪಿಸಿ ಪಂಚೋಪಚಾರ ಪೂಜೆಮಾಡಿದರು ಅಲ್ಲಿಯೇ ದೇವಿಯು ಅಂತರ್ಧಾನಳಾದಳು.

"ಶಾಮಣ್ಣ, ಈದಿನ ನಿಮ್ಮ ಎದುರು ನಿಂತಿದ್ದ ಮಹಾಮಾರಿಯನ್ನು ಎದುರಿಸಲು ಶಂಭುವಿಗೆ ಶಕ್ತಿ ಬಂದುದು ನನ್ನ ಕೃಪೆಯಿಂದ. ಆ ಕಥೆಯನ್ನು ಕೇಳು. "ಒಂದು ದಿನ ಶಂಭುವು ಭುವನೇಶ್ವರಿಯ ದೇವಸ್ಥಾನದಲ್ಲಿ ಮಲಗಿದ್ದನು. ಆದಿನರಾತ್ರಿ ಎಂದಿನಂತೆ ದೇವಿಯನ್ನು ಸೇವಿಸಲು ಅರ್ಧ ರಾತ್ರಿಯ ಸಮಯದಲ್ಲಿ ದೇವತೆಗಳು ಬಂದರು. ದೇವತೆಗಳು "ದೇವಿ, ಕಲ್ಯಾಣಮಯಿಯಾಗಿ ನೀನು ಇಲ್ಲಿ ಇರಬೇಕಾದ ಕಾಲವು ಮುಗಿಯುತ್ತಾ ಬಂದಿತು. ವಿದ್ಯಾರಣ್ಯ ಮುನೀಂದ್ರರು ನಿಯಮಿಸಿದ್ದ ಕಾಲವು ಮುಗಿದಾಗ ನೀನು ಬಂದುಬಿಡುವೆಯಷ್ಟೆ ?" ಎಂದು ಕೇಳಿದರು. ದೇವಿಯು ಇದೋ ಅಲ್ಲಿ ಮಲಗಿರುವವನನ್ನು ಕೇಳಿ. ಅವನೂ ವಿದ್ಯಾರಣ್ಯರ ಅಂಶದಿಂದ ಹುಟ್ಟಿದ್ದಾನೆ. ಅವನು ಅಡ್ಡಬೀಳದಿದ್ದರೆ ತಪ್ಪದೇ ಹೊರಟು ಬರುತ್ತೇನೆ ಎಂದಳು. ದೇವತೆಗಳು ಬಂದು ಶಂಭುವನ್ನು ಕೇಳಿದರು. ಶಂಭುವು ಏನೂ ತಿಳಿಯದವನಂತೆ, ಮೊದಲು ನಿಮ್ಮ ರಹಸ್ಯವನ್ನು ಭೇದಿಸುವ ಶಾಸ್ತ್ರವನ್ನು ಅನುಗ್ರಹಿಸಿ. ಅನಂತರ ನಿಮ್ಮ ಪ್ರಶ್ನೆಗೆ ಉತ್ತರ ಹೇಳುತ್ತೇನೆ ಎಂದನು. ಅವರು ನರ್ಮದಾ ತೀರದಲ್ಲಿ ವಿಂಧ್ಯಪರ್ವತದಲ್ಲಿರುವ ಭದ್ರಕಾಳಿಯನ್ನು ಆಶ್ರಯಿಸು. ಆಕೆಯು ನಿನಗೆ ಮಂತ್ರಶಾಸ್ತ್ರವನ್ನು ಅನುಗ್ರಹಿಸುವಳು ಎಂದು ಹೇಳಿದರು. ಅದರಂತೆ, ಅವನು ಯಾರಿಗೂ ಹೇಳದೆ ಕೇಳದೆ ಹೊರಟುಹೋದನು.

"ಅಲ್ಲಿ ಭದ್ರಕಾಳಿಯ ದಯೆಯಿಂದ ಆತನಿಗೆ ಮಂತ್ರಶಾಸ್ತ್ರವೂ ಸಾಂಗವಾಗಿ ವೇದಾಧ್ಯಯನವೂ ಲಭಿಸಿದುವು. ತನ್ನ ತಪೋಬಲದಿಂದ ವಿಜಯನಗರಕ್ಕೆ ಬಂದಿರುವ ಮೃತ್ಯುವನ್ನು ಏನು ಮಾಡಿದರೆ ಅದು ನಿವಾರಣ

ವಾಗುವುದು ಎಂಬುದನ್ನೂ ಅವನು ತಿಳಿದನು. 'ವಿದ್ಯಾವಿನಯ ಸಂಪನ್ನ ನಾಗಿ ತಪಸ್ವಿಯಾಗಿರುವ ಅಸ್ಖಲಿತ ಬ್ರಹ್ಮಚಾರಿಯನ್ನು, ಅವನಮೇಲೆ ಅಕೃತ್ರಿಮವಾದ ವಿಶ್ವಾಸವನ್ನು ಇಟ್ಟುಕೊಂಡಿರುವ ಇನ್ನೊಬ್ಬನು ಬಲಿಕೊಟ್ಟರೆ ಆ ಮಹಾಮಾರಿಯು ಶಾಂತಳಾಗುವಳು' ಎಂಬುದು ಆತನಿಗೆ ತಿಳಿಯಿತು. ತಾನೇ ಬಲಿಯಾಗುವ ಬ್ರಹ್ಮಚಾರಿಯಾದನು. ಬಲಿಯನ್ನು ಒಪ್ಪಿಸುವುದಕ್ಕೆ ನೀನೇ ಸರಿ ಎಂದು ಗೊತ್ತುಮಾಡಿಕೊಂಡು ನಿನ್ನ ಬಳಿಗೆ ಬಂದನು. ಈ ಬೆಳಿಗ್ಗೆ ನಿನ್ನಿಂದ ಆಗಿರುವ ಅನರ್ಥವನ್ನು ಬಲ್ಲೆಯಾ? ಈದಿನ ನೀನು ಶಂಭುವು ಹೇಳಿದಂತೆ ನಡೆದಿದ್ದರೆ. ವಿಜಯನಗರವು ಕಾಶಿಯಂತೆ, ಕಂಚಿಯಂತೆ, ಮಧುರೆ ಯಂತೆ ಅನಂತಕಾಲ ಬಾಳುತ್ತಿತ್ತು. ನೀನು ವಿದ್ಯಾರಣ್ಯರ ಸಮನಾಗುತ್ತಿದ್ದೆ. ಆದರೆ ದೇವತೆಗಳು ನಿನಗೆ ಮೋಸಮಾಡಿದರು. ಶಂಭುವು ನಲವತ್ತು ವರ್ಷ ಮಾಡಿದ್ದ ಅಖಂಡ ತಪಸ್ಸು ನಿನ್ನ ಒಂದುಗಳಿಗೆಯ ಅನವಧಾನದಿಂದ, ದುರಭಿ ಮಾನದಿಂದ ವ್ಯರ್ಥವಾಗಿ ಹೋಯಿತು."

"ತಾಯೆ, ಮತ್ತೆ ಈ ಅವಕಾಶವು ಒದಗುವುದಿಲ್ಲವೆ?"

"ಶಂಭುವು ಇನ್ನೂ ಆರುತಿಂಗಳು ಅಜ್ಞಾತವಾಗಿ ತಪಸ್ಸು ಮಾಡುವನು. ಆಗಲಾದರೂ ಅವನು ಹೇಳಿದಂತೆ ಮಾಡು. ಒಂದಕ್ಕೆರಡು ಕೊಟ್ಟರೆ, ಮಹಾ ಮಾರಿಯು ಈ ನಗರಕ್ಕೆ ಇನ್ನು ಹತ್ತುವರ್ಷದ ಆಯುಸ್ಸನ್ನು ಕೊಡುವಳು. ಇದೋ, ನಿನಗೆ ನನ್ನ ಶಂಭುವಿನಲ್ಲಿ ನಂಬಿಕೆ ಬರಲೆಂದು ಇಷ್ಟೂ ಹೇಳಿದ್ದೇನೆ. ನಿನಗೆ ದರ್ಶನವನ್ನು ಕೊಟ್ಟಿದ್ದೇನೆ. ಇಗೋ, ಸಾಕ್ಷಿಯಾಗಿ ಇನ್ನೂ ಒಂದು ಸುದ್ದಿ ಹೇಳುತ್ತೇನೆ. ನಾಳಿನದಿನ ಸಂಜೆಗೆ ಯಜಮಾನ್ ವೀರಪ್ಪಸೆಟ್ಟಿಯು ನಿಮ್ಮ ರಾಯರಿಗೆ ಗೋಲ್ಕೊಂಡದವರ ಸಂಧಿಪತ್ರವನ್ನು ತಂದು ಕೊಡುವನು. ಇನ್ನು ಹತ್ತುವರ್ಷಗಳು ಈ ಎರಡು ರಾಜ್ಯಗಳೂ ಪರಸ್ಪರ ಸ್ನೇಹದಿಂದ ಬಾಳುವುವು. ಅಲ್ಲಿಂದ ಮುಂದೆ, ಭುವನೇಶ್ವರಿಯೂ, ವಿಜಯವಿಟ್ಠಲನೂ ಈ ನಗರವನ್ನು ಬಿಡುವರು. ಇದು ವಿಶ್ವೇಶ್ವರನ ಆವಾಸಸ್ಥಾನವಾಗುವುದು. ಇಲ್ಲಿ ಒಂದು ಕಂಭ ನಿಂತಿರುವುದಿಲ್ಲ. ಒಂದು ಕಂಭದ ಮೇಲೊಂದು ಬೋದಿಗೆಯು ನಿಲ್ಲು ವುದಿಲ್ಲ. ಎಲ್ಲವೂ ನೆಲಸಮವಾಗುವುದು."

ಇಷ್ಟುಮಾತನಾಡಿ ಚಿನ್ನಳ ದೇಹವು ಹಾಗೆಯೇ ನೆಲದಮೇಲೆ ಒರಗಿತು. ಆಚಾರ್ಯರೂ, ರನ್ನಳೂ ದೇವಿಗೆ ಆರತಿಯನ್ನು ಬೆಳಗಿದರು. ಅಷ್ಟು ಹೊತ್ತಾದ

ಮೇಲೆ ಅವಳಿಗೆ ಎಚ್ಚರವಾಯಿತು. ಬಹುನಿಶ್ಶಕ್ತಳಾಗಿದ್ದ ಅವಳನ್ನು ಇಬ್ಬರೂ ಕರೆದುಕೊಂಡು ಹೋಗಿ ಹಾಸುಗೆಯ ಮೇಲೆ ಮಲಗಿಸಿದರು.

ಚಿನ್ನಳ ಮಂಚದ ತಲೆಯ ಕಡೆಗೆ ಒಂದು ಸುಖಾಸನ. ಅದರಲ್ಲಿ ಆಚಾರ್ಯರು ಬಿದ್ದುಕೊಂಡಿದ್ದಾರೆ. ಅವರಿಗೆ ಕಣ್ಣೀರು ಕೋಡಿಗಟ್ಟಿಕೊಂಡು ಹರಿಯುತ್ತಿದೆ. ರನ್ನಳು ಏಕೆ ಎಂಬುದನ್ನು ತಾನು ಬಲ್ಲಷ್ಟು ಅಕ್ಕನಿಗೆ ಹೇಳಿದಳು. ಅವಳು ಕೈಯಲ್ಲಾಗದಿದ್ದರೂ ಎದ್ದು ಬಂದು ಬೇಕಾದ ಉಪಚಾರ ಮಾಡಿದಳು. ಕೊನೆಗೆ ಏನೇನೊ ಮಾಡಿ ಬೆಳಗಿನ ಸಮಾಚಾರವನ್ನು ನಿಟ್ಟುಸಿರುಬಿಡುತ್ತ, ಬಿಕ್ಕಳಿಸಿ ಬಿಕ್ಕಳಿಸಿ ಅಳುತ್ತ, ಸಾಧ್ಯವಾದಮಟ್ಟಿಗೂ ಆಚಾರ್ಯರು ಹೇಳಿದರು.

ಎಲ್ಲವನ್ನೂ ಕೇಳಿ ಚಿನ್ನಳು ಅವಾಕ್ಕಾದಳು. ತಂಗಿಯನ್ನು ಕರೆದು ಕೊಂಡು ಗುರುಗಳೊಡನೆ ಶಾಂಭವಾನಂದರನ್ನು ನೋಡಲು ಹೊರಟಳು. ಇವರು ಹೋಗುವವೇಳೆಗೆ ಗುಡಿಸಲು ಹತ್ತಿಕೊಂಡು ಉರಿದುಹೋಗಿ ಭಸ್ಮಾವ ಶೇಷವಾಗಿತ್ತು. ಅಲ್ಲಿ ಶಾಂಭವಾನಂದರ ಸುದ್ದಿಯನ್ನು ಹೇಳುವವರು ಯಾರೂ ಇರಲಿಲ್ಲ.

# ಅಧ್ಯಾಯ ಏಳು

ಹೊಸಪೇಟೆ ಮೂಲೆಯಲ್ಲಿ ಒಂದಂಗಡಿ. ಕರೀಂಖಾನನು ಅಂಗಡಿಯ ಒಡೆಯ. ಅವನು ಮಾಡುತ್ತಿದ್ದುದು ಚಿಲ್ಲರೆ ಅಂಗಡಿಯ ವ್ಯಾಪಾರ. ಆದರೂ ಆ ಸುತ್ತಮುತ್ತಲಿನವರು ಯಾರೇ ಆಗಲಿ ಯಾವಾಗ ಬಂದು ಕೇಳಿದರೂ ಐದು-ಹತ್ತು ರೂಪಾಯಿ ಸಾಲಕೊಡುವನು. ರೂಪಾಯಿಗೆ ಒಂದಾಣೆ ಬಡ್ಡಿ ತೆಗೆದುಕೊಳ್ಳುವನು. ಯಾರ ಹತ್ತಿರಲೂ ಅವನು ನಿಷ್ಟುರ ಕಟ್ಟಿಕೊಳ್ಳುತ್ತಿರಲಿಲ್ಲ.

ಈ ದಿನ ರಂಗನಾಥಪುರದಿಂದ ಸೈಯದ್ ಸಾಬಿ ಬಂದಿದ್ದಾನೆ. ಅವನು ಕರೀಂಖಾನನ ಸ್ನೇಹಿತ. ಅವನಿಗೆ ಅಲ್ಲಿ ರಂಗನಾಥಪುರದಲ್ಲಿ ಬಡವರಾದ ಎಷ್ಟು ಜನ ಹಿಂದೂಗಳು ಇದ್ದರೋ ಅವರಲ್ಲೆಲ್ಲ ಬಹಳ ಸ್ನೇಹ.

ಇಬ್ಬರೂ ಸ್ನೇಹಿತರೂ ಶುಕ್ರವಾರದ ದಿನ ಹೊಸಪೇಟೆಯ ಮಸೀದಿಯಲ್ಲಿ ನಮಾಜಿಗೆ ಬರುವರು. ನಮಾಜ್ ಮುಗಿದ ಮೇಲೆ ಇಬ್ಬರೂ ಅದೇ ಬೀದಿಯ ಕೊನೆಯಲ್ಲಿದ್ದ ರಂಗಪ್ಪನ ತಿಂಡಿಯಂಗಡಿಯಲ್ಲಿ ಕುಳಿತು ಅಷ್ಟು ತಿಂದು ಚಾ ಕುಡಿದು ಹೋಗುವರು. ಹೋಗುವುದಕ್ಕೆ ಮುಂಚೆ ಒಂದು ಎರಡು ಬೀಡಿ ಸೇದುವಷ್ಟು ಹೊತ್ತು ರಂಗಪ್ಪನ ಜೊತೆಯಲ್ಲಿ ಒಂದಿಷ್ಟು ಹರಟೆ ಹೊಡೆಯುವರು.

ಆ ದಿನವೂ ಹಾಗೆಯೇ ಅಂಗಡಿಯಲ್ಲಿ ಇಬ್ಬರೂ ಸೇರಿದರು. ಇವರಿಬ್ಬರೂ ಒಂದು ಮೂಲೆಯಲ್ಲಿ ಬೇರೆ ಕುಳಿತಿದ್ದನ್ನು ಕಂಡು ರಂಗಪ್ಪನೇ ಅಲ್ಲಿಗೆ ಬಂದ. "ಏನ್ರೀ ಸಮಾಚಾರ" ಎಂದು ಅವನೇ ಕೇಳಿದ. ಇಬ್ಬರೂ ತಿಳಿಯದಿದ್ದವರಂತೆ, "ಇಲ್ಲ ನಮಗೆ ಏನೂ ತಿಳಿಯದು" ಎಂದರು.

ರಂಗಪ್ಪನು ಅವರನ್ನು ಗೇಲಿಮಾಡುತ್ತಾ ಹೇಳಿದ "ಏನ್ರಿ, ಸೈಯದ್ ಸಾಬರೇ, ನಿಜ ಹೇಳಿರಿ. ನೀವು ಮೊನ್ನೆ ಬಿಜಾಪುರದಿಂದ ಬಂದಿರಿ ಹೌದೋ ಅಲ್ಲವೋ ?"

"ಹೌದು, ಅಲ್ಲಿ ನಮ್ಮ ನೆಂಟರು ಇದ್ದಾರೆ. ಅದಕ್ಕೆ ಹುಣ್ಣಿಮೆ, ಅಮಾಸೆ ಹೋಗ್ತಾನೇ ಇರ್ತೀನಿ."

"ಬಿಜಾಪುರದಲ್ಲಿ ಮುಸಲತ್ತು ನಡೆದಿದೆಯಂತೆ. ನಮ್ಮ ರಾಜ್ಯದ ಮೇಲೆ ಅಲ್ಲಿನ ಸುಲ್ತಾನರು ದಂಡೆತ್ತಿ ಬರುತ್ತಾರೆಯಂತೆ."

" ಇದೀಗ ಸಂಜೋ ಮಾತು. ಅಲ್ಲಿನ ಸೈನ್ಯದಲ್ಲಿ ಎಲ್ಲರೂ ಮುಸಲ್ಮಾನ ರೇನೂ ಅಲ್ಲ. ಹಿಂದೂಗಳು, ಅದರಲ್ಲಿ ಮರಾಠೆಯವರು, ಬೇಕಾದಷ್ಟು ಜನ ಇದ್ದಾರೆ. ನಿಮ್ಮ ಹಿಂದೂ ರಾಜ್ಯದ ಮೇಲೆ ಹಿಂದೂಗಳೇ ಬಿದ್ದಾರೆ ? ಯೋಚನೆಮಾಡಿ. ಸುಲ್ತಾನರಿಗೂ ತಲೇಲಿ ಬುದ್ಧಿ ಇದೆ. ಅವರು ಮಡ ಕೋದಿಲ್ಲ. "

" ಬಿಡಿ ಬಿಡಿರಿ. ನಂಗೆ ಬಾಳ ನೇರವಾದ ಸುದ್ದಿ ಬಂದಿದೆ. ಅಹಮ್ಮದ್ ನಗರದವರು ಗೋವೆ ಹಿಡುಕೊಂಡು ಇತ್ತಲಾಗಿ ಪಶ್ಚಿಮ ಘಟ್ಟಗಳ ಕಡೆ ಬರು ತ್ತಾರಂತೆ. ಆ ವೇಳೆಗೆ ಸರಿಯಾಗಿ ಬಿಜಾಪುರದವರೂ ಗೋಲ್ಕೊಂಡದವರೂ ಕೃಷ್ಣಾ ನದಿ ದಾಟಿ ನುಗ್ಗುವರಂತೆ. ಬೀರಾರ್, ಬಿದರೆಯವರ ಸೈನ್ಯ ಆಗಲೇ ಗೋಲ್ಕೊಂಡದ ಹತ್ತಿರ ಹತ್ತಿರಕ್ಕೆ ಬಂದು ಬಿಟ್ಟಿದೆಯಂತೆ. "

ಕರೀಂಖಾ ಕೇಳುತ್ತಾ ಕುಳಿತಿದ್ದವನು ನಡುವೆ ಬಾಯಿ ಹಾಕಿದ. "ನೋಡ್ರಿ, ರಂಗಪ್ಪ, ಆಗಾಗ ಅವರು ಇವರ ಮೇಲೆ ಬೀಳೋದು, ಇವರು ಅವರ ಮೇಲೆ ಬೀಳೋದು, ಇದಕ್ಕಿಂತ ಇಬ್ಬರಿಗೂ ಒಂದು ವಫಾ ಭಾರಿ ಲಡಾಯಿ ಆಗೋಗಿ ಐಸಾ ವೈಸಾ ಆಗೋದೇ ಒಳ್ಳೇದು. ಈ ರಾಯರೂ ಆ ಸುಲ್ತಾನರೂ ಜಗಳ ಮಾಡೋದು. ಇವರು ಇತ್ತಾಕಡೆ, ಅವರು ಅತ್ತಾಕಡ ಯಿಂದ ಬರೋದು, ನಮ್ಮ ಗರೀಬ್ ಜನನೆಲ್ಲ ಲೂಟಿ ಮಾಡೋದು, ಖೂ ಮಾಡೋದು, ಕೆಡಿಸೋದು. ಲಡಾಯಿ ಬಂತು ಅಂದರೆ ನವಾಬ್ ಜನಾ ಎಲ್ಲ ಕುದುರೆ, ಆನೆ, ಗಾಡಿ, ಸಾರೋಟ್‌ನಲ್ಲಿ ಓಡಿಬಿಡುತ್ತದೆ. ನಾವು ಬಿಟ್ಹೋಗೊಹಂಗೂ ಇಲ್ಲ. ಇಲ್ಲಿ ಇರೋ ಹಂಗೂ ಇಲ್ಲ. ನಮಗೆ ತಾನೇ ಕಷ್ಟ? "

ರಂಗಪ್ಪ ಹತ್ತಿರ ಬಂದ. ಕರೀಂಖಾನನಿಗೆ ರೆಪ್ಪೆಮೊಡೆದ. ಅವನನ್ನೂ ಸೈಯ್ಯದ್‌ನನ್ನೂ ಕರೆದುಕೊಂಡು ಒಳಕ್ಕೆ ಹೋದ. " ಇಲ್ಲಾ ಸಾಬರೆ, ಈ ಸಲ ಇದ ನೋಡಿ, ನಾವು ಒಂದು ಪಂದು ಮಾಡಿಯೇ ಬಿಡಬೇಕು. ಸೈಯ್ಯದ್ ಬಿಜಾಪುರಕ್ಕೆ, ನೀವು ಅಹಮ್ಮದ್‌ನಗರಕ್ಕೆ ಹೋಗಿ ಬರೋದು ನನಗೆ ಚೆನ್ನಾಗಿ ಗೊತ್ತಿದೆ. ಇರಲಿ. ನಿಮ್ಮ ಕಡೆಯವರು ಬಂದು ಹೊಸಪೇಟೆ ಲೂಟಿಮಾಡಿ ದರೆ. ಬೇಕಾದ್ದು ಸಹಾಯ ಮಾಡುವವರು ಇದ್ದಾರೆ. ಅವರಿಂದ ನಿಮಗೆ ಬೇಕಾದ ಕೆಲಸ ಆದರೆ ನೀವು ಅವರಿಗೆ ಏನು ಮಾಡಿಕೊಡ್ತೀರಿ ? "

"ರಂಗಪ್ಪ, ನಮ್ಮನ್ನೇನು ದಿವಾನ್ ಮಾಡಿದ್ದೀರಲ್ಲಾ! ನಾವು ಬಿಜಾಪುರಕ್ಕೆ ಹೋಗೋದೂ ನಿಜ. ಅಹಮ್ಮದ್‌ನಗರಕ್ಕೆ ಹೋಗೋದೂ ನಿಜ. ಆದರೂ ನಾವು ಇಬ್ಬರೂ ರಾಯರ ಪ್ರಜೆಗಳು. ನಾವು ನಮ್ಮಕ್ ಹರಾಂ ಆಗೋಕೆ ಆಗ್ತದಾ? ಹೇಳಿ."

"ಬಿಡಿರಿ, ಖಾನ್ ಸಾಹೇಬರೆ, ನಿಮ್ಮ ಜನ ಇದೆಯಲ್ಲ, ಇನ್ನು ಯಾರೂ ತುರುಕರು ಇಲ್ಲದಿದ್ದರೆ ನಿಮ್ಮಂಥಾ ದೋಸ್ತಿಗಳಿಲ್ಲ. ನಿಮ್ಮ ಜನ ಬಂತೂ ಅಂದ್ರೆ, ಅವರು ಡೆಲ್ಲಿಯಿಂದ ಬರಲಿ, ದ್ವೀಪಾಂತರದಿಂದ ಬರಲಿ ಒಂದಾಗಿ ಬಿಡ್ತೀರಿ. ಅದಕ್ಕೇ ನಾನೂ ಕೇಳಿದ್ದು. ನನ್ನೂ ನಿಮ್ಮ ದೋಸ್ತ್‌ಮಾಡಿ ಕೊಳ್ತೀರಾ? ಎಂತ."

"ಏನು ಹಂಗಾದರೆ ನೀವೂ ಮುಸಲ್ಮಾನರಾಗುತ್ತೀರಾ?"

"ಬಿಡಿರಿ, ನಾವು ಮುಸಲ್ಮಾನರಾದರೇನು? ಹಿಂದೂಗಳಾದರೇನು? ಈ ಎಂಜಲಕೊಟ್ಟಿ ತೊಳಕೊಂಡು, ಈ ಚಿಲ್ಲರೆಕಾಸು ಎಣಿಸಿಕೊಂಡು ಕೂತಿರೋಕಿಂತ, ಇನ್ನೇನೇ ಕೆಲಸ ಮಾಡಿದರೂ ತಪ್ಪೇನು? ಹಿಂದೂ ಆದರೆ ನೋಮಿ ಎಂತ ಅಡ್ಡ ಬೀಳೋದು, ಮುಸಲ್ಮಾನ್ ಆದರೆ ಅಲ್ಲಾ ಅಂತ ನಮಾಜು ಮಾಡೋದು. ಯಾವುದಾದರೇನು? ಈಗಿನ ಕಾಲದಲ್ಲಿ ಯಾರು ಎತ್ತಲಾಗಿ ಹೋದರೇನು? ನಮ್ಮ ಪಾಡು ನಾವು ನೋಡ್ಕೋಬೇಕರಿ."

"ನಮಗೆ ಬಿಜಾಪುರದ ಸೇನೇಲಿ ಆಗಲ, ಅಹಮ್ಮದ್‌ನಗರದ ಸೇನೇಲಿ ಆಗಲಿ, ಯಾರೂ ದೋಸ್ತ್ ಇಲ್ಲ. ನಿಮಗೆ ಹಾಗೆ ಬೇಕಾದರೆ, ಬಿಜಾಪುರಕ್ಕೆ ಹೋದ. ಅಲ್ಲಿ ಯಾರನ್ನಾದರೂ ಜಮಾದಾರ್ ಗಿಮಾದಾರ್ ನೋಡಿದ. ಸೈನ್ಯಕ್ಕೆ ದಾಖಲಾದ. ಅದಕ್ಕೇನಂತೆ, ನೀವು ಹೇಳಿದಂಗೆ ಸೈನ್ಯ ಇಲ್ಲಿಗೆ ಬಂದರೆ, ಬೇಕಾದ್ದು ಲಾಕ್‌ಲೇಕ್ ಮಾಡಿ ಒಂದು ಪಾಳೆಯಪಟ್ಟು ಹೊಡೆದ, ಪಕ್ಷಕ್ಕೆ ಒಂದು ಸಲಾಂ, ಅಷ್ಟು ನಜರಾಣೆ ಕೊಟ್ಟೆ, ಸುಖವಾಗಿದ್ದ. ಅದಕ್ಕೇನು?"

"ಸಾವಿರ ಹೇಳೀ ಸಾಬರೆ, ನಮ್ಮ ರಾಜ್ಯ ಗರಿಕಟ್ಟಬೇಕು ಅನ್ನೋನಿ ಗಲ್ಲ. ಅಂಥಾ ಜೂರತ್‌ಗಾರನಿಗೆ ನಿಮ್ಮ ರಾಜ್ಯಗಳು. ಬಾಳೇ ಸುಳಿ ದಿನ ದಿನಕ್ಕೂ ಬೆಳೆಯೋ ಹಂಗೆ ನಿಮ್ಮಲ್ಲಿ ಬೆಳೆದುಬಿಡಬೋದು."

"ಏನು ರಂಗಪ್ಪಾ! ನಮ್ಮನ್ನು ಅದ್ಮೀಕೋ ಗುಸ್ಸೋ ದೇಖ್ನಾ ಅನ್ನೋ

ಹೆಂಗೆ ಮಾಡ್ತಿದ್ದೀರಿ ಅಲ್ಲಾ. ನಿಮಗೆ ಬಿಜಾಪುರಕ್ಕೆ ಹೋಗೋದು ಬೇಕಾದರೆ ನಮ್ಮನ್ನು ಕೇಳಿ ಹೋಗ್ಬೇಕು? ನಾವು ಸಾಚಾಜನ. ನಮ್ಮನ್ನು ಸತಾಯಿಸಬೇಡಿ."

ರಂಗಪ್ಪನು ಬಿದ್ದು ಬಿದ್ದು ನಕ್ಕನು "ಲೋ ಕರೀಂಖಾನ್, ಯಾರ ಹತ್ತಿರಲೋ ಈ ಆಟವೆಲ್ಲಾ! ಇಲ್ನೋಡು ಈ ಕಾಗದಾನಾ?" ಎಂದು ಉರ್ದುವಿನಲ್ಲಿ ಬರೆದ ಒಂದು ಕಾಗದವನ್ನು ಸೊಂಟದಿಂದ ತೆಗೆದು ಮುಂದೆ ಎಸೆದನು. ಅದರಲ್ಲಿ, ಬರೆದಿರುವುದಿಷ್ಟೆ "ಅಲ್ಲಾಹೋ ಅಕ್‌ಬರ್. ಸೈಯದ್ ನಾಬಿ, ಕರೀಂಖಾನ್, ಇವರನ್ನು ಕೇಳಿ, ಅವರು ಹೇಳಿದ ಹಾಗೆ ನಡೆಯಿರಿ."

ಆ ಕಾಗದವನ್ನು ನೋಡುತ್ತಲೇ ಇಬ್ಬರೂ ಮುಖ ಮುಖ ನೋಡಿಕೊಂಡರು. ಕರೀಂಖಾನನು "ಮುಂದಕ್ಕೆ?" ಎಂದನು. ರಂಗಪ್ಪನು "ಮುಂದಕ್ಕೇನು? ಗೋಲ್ ಗುಂಬಜ್" ಎಂದನು. ಇಬ್ಬರೂ ರಂಗಪ್ಪನನ್ನು ಬಾಚಿ ತಬ್ಬಿಕೊಂಡರು. "ದೋಸ್ತ್ ಮಾಫಿ ಕೊಡಬೇಕು. ಈ ಸೈತಾನ್ ರಾಜ್ಯದಲ್ಲಿ ಯಾರು ಬದ್ಮಾಷ್, ಯಾರು ಸಾಚಾ ಎಂದು ಗೊತ್ತುಮಾಡೋದು ಕಷ್ಟವಾಗಿ ಹೋಗಿದೆ. ಅದಿರಲಿ, ಮುಂದಕ್ಕೆ ಏನು ಮಾಡಬೇಕು ಹೇಳಿ."

"ನಿಮಗೆ ಧೈರ್ಯ ಇದೆಯೋ ಇಲ್ಲವೋ? ಮಾಡೋಕೆ? ನಾನು ಹೇಳಿ ಸುಮ್ಮನೆ ಕೆಟ್ಟೋನಾಗಲೇ?"

"ಇಲ್ಲ ಹೇಳಿ ದೋಸ್ತ್."

ರಂಗಪ್ಪನು ಅತ್ತಕಡೆ ಇತ್ತಕಡೆ ನೋಡಿ ಹೇಳಿದನು. "ಇಲ್ಲಿ ಹೊಸಪೇಟೆಯಲ್ಲಿ ರಾಯರ ಸೂಳೆ ರಂಗನಾಯಕಿ ಇದ್ದಾರೆ. ಶುಕ್ರವಾರ ರಾತ್ರಿ ರಾಯರು ಒಂದು ಕುದುರೆಗಾಡಿಯಲ್ಲಿ ಎರಡೇ ಎರಡು ಆಳು ತೆಗೆದುಕೊಂಡು ಬರುತ್ತಾರೆ. ರಂಗಸ್ವಾಮಿಗುಡಿ ಮೂಲೆ ತಿರುಗಿ ಇತ್ತಕಡೆ ಬರುವಾಗ, ನಾವು ಅವರನ್ನು ಹಿಡಿದು ಮುಗಿಸಿಬಿಡೋಣ. ನಿಮ್ಮ ಸೈನ್ಯ ಬಂದು ಮಾಡಬೇಕೆಂತಿರೋ ಕೆಲಸ ನಾವೇ ಮಾಡಿಬಿಡೋಣ."

ಕರೀಂಖಾನನು ಒಂದು ನೂರು ಸುಲ್ತಾನೀ ಚಿನ್ನದ ಲೋಪಗಳನ್ನು ನಡುವಿನಲ್ಲಿದ್ದ ಚೀಲದಿಂದ ತೆಗೆದು ಎಣಿಸಿದನು.

"ಇದು ಇವೊತ್ತಿನ ಖರ್ಚಿಗೆ. ಗೆದ್ದರೆ, ನಿಮಗೊಂದು ಸುಬೆಕೊಡಿಸುತ್ತೇನೆ. ಸಾಕೋ!"

"ಗೆಲ್ಲದಿದ್ದರೆ ?"

"ನಿಮ್ಮ ತಲೆ ತಗೊತೀನಿ."

ಇಬ್ಬರೂ ರಂಗಪ್ಪನನ್ನು ತಬ್ಬಿಕೊಂಡರು. "ಎಷ್ಟು ಜನ ಇದ್ದಾರೆ. ನಿಮ್ಮ ಹತ್ತಿರ ?"

"ಸದ್ಯದಲ್ಲಿ ನೂರಇಪ್ಪತ್ತು ಜನ ಇದ್ದಾರೆ."

"ಹಾಗಾದರೆ, ಇದು ಸಾಲದು. ಇನ್ನೂ ಐವತ್ತು ಕಳಿಸುತ್ತೀನಿ. ಸಂಜೆ ಬನ್ನಿ."

ಇಬ್ಬರೂ ದಾರಿಯಲ್ಲಿ ಹೋಗುತ್ತಾ ಮಾತನಾಡಿಕೊಂಡರು. "ಅಲ್ಲಿ ರಂಗನಾಥಪುರದಲ್ಲಿ ನಿಮ್ಮ ಹತ್ತಿರ ಎಷ್ಟು ಜನ ಇದ್ದಾರೆ ?"

"ನಮ್ಮ ಹತ್ತಿರ ನೂರು ಜನ ಇದ್ದಾರೆ. ಅವರಿಗೆ ದಿನಾಲು ಒಂದೊಂದು ರೂಪಾಯಿ ಕೊಡಬೇಕು. ಇವರೆಲ್ಲರಿಗಿಂತ ಆ ಹೆಂಡದಂಗಡಿ ಸಂಗಯ್ಯ ಇದ್ದಾನಲ್ಲ. ಅವನು ರುಸ್ತುಂ. ಇವರನ್ನೆಲ್ಲ ಹಿಡಿದಿಟ್ಟಿರೋನೇ ಅವನು. ಅವರು ಕುಡೀತೀನಿ ಅಂದಷ್ಟು ಹೊಯ್ದು ಹೊಯ್ದು ಅವರನ್ನೆಲ್ಲಾ ಬಂದಾ ಮಾಡಿಟ್ಟಿದ್ದಾನೆ. ಅವರೆಲ್ಲ ನಮ್ಮ ಸೈನ್ಯ ಬಂತೂ ಅಂದರೆ ಸಾಕು. ಈಗ ಈ ಊರಲ್ಲಿರುವ ಸೈನ್ಯ ಊರು ಬಿಟ್ಟು ಒಂದು ಮೈಲಿ ದೂರ ಹೋಗಲಿ ಸಾಕು. ಲೂಟಿ ಶುರು ಮಾಡುತ್ತಾರೆ."

"ಹೌದು, ಆದರೆ ಸೈನ್ಯ ಬರೋದೆ ಅನುಮಾನವಾಗಿದೆ."

"ಏಕೆ ?"

"ಇನ್ನೂ ಗೋಲ್ಕೊಂಡದ ನವಾಬರು ಒಪ್ಪಲಿಲ್ಲ. ಅವರು ಒಪ್ಪುವ ವರೆಗೆ ಬಿಜಾಪುರದವರೂ ಒಪ್ಪುವುದಿಲ್ಲ."

"ನಿನ್ನೆ ಒಂದು ಸಂಗತಿ ನಡೆಯಿತು. ಈ ಸೈತಾನ್‌ಕೇಬಚ್ಚೇಸುವರ್ ಕೇ ಬಚ್ಚೇ ಹಿಂದೂಗಳು ಏನಂತಾರೆ ಗೊತ್ತೋ ? ಇತ್ತಲಾಗಿ ನಮ್ಮ ರಾಜ್ಯ ರಾಜಮಹೇಂದರ್‌ತನಕ ಇದೆ. ಇತ್ತಕಡೆ ಗೋವಾತನಕ ಇದೆ. ನಿಮ್ಮ ಬಹಮನೀ ಸುಲ್ತಾನರು ಕಮಕ್ ಅಂದರೆ, ಈ ಎರಡು ತೋಳು ಸೇರಿಸಿ ಹಿಸಕಿ ಹಾಕಿಬಿಡ್ತೀವೆ ಅಂತಾರಲ್ಲ. ನೋಡಿದಿರಾ ?"

"ನೋಡಿ ಕರೀಂಖಾನ್, ನೀವು ಹೆದರಬೇಡಿ. ಈ ಹಿಂದೂಗಳಲ್ಲಿ ಇದ್ದಾರಲ್ಲ ಮೇಲಿನ ಜಾತಿ ಕೆಳಗಿನ ಜಾತೀನ ಲೋ 'ಹೋಗೋ' ಶೂದರ್

ಅಂತದೆ. ಅದರಿಂದ ಅವರಿಗೆ ಮೇಲಿನ ಜಾತಿ ಮೇಲೆ ಮೊಹಬತ್ ಇಲ್ಲ ಏಕೆ? ಅವರಿಗೆ ಇವರ ಮೇಲೆ ಇಜ್ಜತ್ ಇಲ್ಲ. ಅದರಿಂದ, ಅವರು ಯಾರೂ ಲಡಾಯ್‌ಗೆ ಬರೋದಿಲ್ಲ. ನಮ್ಮ ಹಂಗೆ ಅಲ್ಲಾಹೋ ಅಕ್ಬರ್ ಎಂದರೆ ಎಲ್ಲರೂ ಸೇರೋದಿಲ್ಲ! ದೊರೆ ಉಪ್ಪುತಿಂದಿರೋರು ಮಾತ್ರ ಬರತಾರೆ. ಮಿಕ್ಕೋರೆಲ್ಲ ನೋಡತಾನಿಂತಿರ್‌ತಾರೆ. ಲಡಾಯ್ ಆದರೆ ಇವು ನಿಂತಾವೇನು? ಬಕರಾ ಹೊಡೆಯೋಂಗೆ ಹೊಡೆದಾಕಿಬಿಡಬೋದು."

"ಆದರೆ, ಈ ಜನ ರೇಗಿದರೆ ಮಾತ್ರ ಬಾಳಾ ಹಟಗಾರ ಜಾತಿ, ನೋಡಿದೀರೋ ಇಲ್ಲವೋ? ಲಡಾಯ್‌ನಲ್ಲಿ ನಮ್ಮೋರ ಸಮ ಸಮ, ರೂಬ್ ರೂಬ್ ನಿಂತು ಹೇಗೆ ಜಗಳ ಮಾಡತಾರೆ?"

"ಹೌದು. ಆದರೂ ಬಕರಾ ಹಂಗೇನೆ! ಘೂ ಬಿಡೋರು ಒಬ್ಬರು ಇರಬೇಕು. ಯಜಮಾನ ಹೋದರೆ ಹೋಯಿತು. ಮುಂದಿನ ಲಡಾಯ್ ನಲ್ಲಿ ಏನು ಮಾಡ್ತೀವೆ ಗೊತ್ತೆ? ಎಲ್ಲಾ ಬಿಟ್ಟು ಈ ರಾಯರಿಗೆ ಮೊದಲು ನೋಡಿಕೊಳ್ಳೋದು. ರಾಯರ ತಲೆ ಬಿತ್ತು ಎಂತ ಷುರುನಿಂದಲೇ ಕೂಗೋದು. ರಾಯರ ತಲೆ ಹಂಗೇ ಇರೋ ತಲೇ ಒಂದು ಮಾಡಿಸೋದು. ಅದನ್ನು ಒಂದು ಭರ್ಜಿಗೆ ಚುಚ್ಚೋದು. ಆನೆ ಮೇಲೆ ಎತ್ತಿ ಹಿಡಿದು ಬಿಡೋದು. ದೇಖೋ, ಹೆಂಗಾಗತದೆ ಮಾಲುಂ?"

"ಹೆಂಗಾಗತದೆ?"

"ಆಗೋದೇನು? ಎಲ್ಲರೂ ಹೇಳದೆ ಕೇಳದೆ ಪರಾರಿ ಆಗಿಹೋಗ್ತಾರೆ"

"ಆಹಾ! ಬಹಳ ಒಳ್ಳೆಯ ಯೋಚನೆ, ಮಾಡಿಬಿಡಿ."

"ಮಾಡಿಬಿಡಿ? ಮಾಡಲೇಬೇಕು. ಈಗ ಡೆಲ್ಲಿಯಲ್ಲಿ ನಮ್ಮ ರಾಜ್ಯ ಬಂದದೆ. ಅದು ಬೆಳೆದು ಆ ಗಂಗಾ ಯಮುನಾ ಕಣಿವೆಯನ್ನೆಲ್ಲ ಹಿಡೀತದೆ. ಇಲ್ಲಿ ಪಶ್ಚಿಮದಲ್ಲಿ ಸಿಂಧೂ ನದಿ ಕೊನೆಯಲ್ಲಿ ಇರುವ ರಾಜ್ಯ ಮೇಲೆ ಹತ್ತಿ ಹೋಗುತ್ತದೆ. ಈಗ ಇಲ್ಲಿ ಕೃಷ್ಣಾ ಗೋದಾವರೀ ತೀರದಲ್ಲಿರುವ ರಾಜ್ಯ ಬೆಳೆದು ತಪತೀ ನರ್ಮದಾ ದಾಟಿ ಪರ್ವತದವರೆಗೂ ಹೋಗುತ್ತದೆ. ಅಲ್ಲೆಲ್ಲಾ ಏನೂ ಅಡ್ಡ ಇಲ್ಲ. ಈಗ ದಕ್ಷಿಣದಲ್ಲಿ ಈ ವಿಜಯನಗರ ಗೆದ್ದುಬಿಟ್ಟರೆ ಸಮುದ್ರದ ತಂಕ ನಮ್ಮ ರಾಜ್ಯ ಸಲೀಸಾಗಿ ಹೋಗುತ್ತದೆ. ಅದರಿಂದ

ಇದನ್ನು ಮಾಡಿಯೇಬಿಡಬೇಕು. ಆಮೇಲೆ ಎಲ್ಲಾ ಮುಸಲ್ಮಾನ್ ರಾಜ್ಯವೇ ಆಗಿಹೋಗುತ್ತದೆ."

"ಆಗ ನವಾಬ್‌ನವಾಬ್‌ರು, ಸುಲ್ತಾನ್‌ಸುಲ್ತಾನರು ಜಗಳ ಮಾಡೋ ದಿಲ್ಲವೆ ?"

"ಆಗ ಆಗುವ ಲಡಾಯ್ ಶತ್ರುಗಳ ಲಡಾಯ್ ಅಲ್ಲ. ಭಾಯ್ ಭಾಯ್ ಜಗಳ. ಮನುಷ್ಯ ಇರೋತನಕ ಈ ಜಗಳ ಬಿಡೋದೆ ಇಲ್ಲ. ಖಲೀಫ್ ಖಲೀಫ್‌ಗೇ ಜಗಳ ಆಗಿಹೋಯಿತು. ಆದರೂ ಅದು ಪರವಾ ಇಲ್ಲ. ಅತ್ತಾಕಡೆಯಿಂದ ನೀರು ಬರುತ್ತದೆ; ಇತ್ತಾಕಡೆಯಿಂದ ನೀರು ಬರುತ್ತದೆ; ಎರಡೂ ಸೇರಿ ಲಡಾಯ್ ಮಾಡ್ತಾ ಮಾಡ್ತಾ ಸೇರಿ ಮುಂದೆ ಹೋಗುತ್ತವೆ. ಹಾಗೆ ನಮ್ಮ ನಮ್ಮ ಜಗಳ. ಇಗೋ, ಕರೀಂಖಾನ್ ಸಾಹೇಬ್, ಈ ರಾತ್ರಿ ಯೆಲ್ಲ ಎಚ್ಚರವಾಗಿರಿ. ಏನೇನಾಗ್ತದೆ ನೋಡೋಣ. ರಂಗಪ್ಪ ಇವೊತ್ತು ಈ ಕೆಲಸ ಗೆದ್ದುಬಿಟ್ಟರೆ, ಯುದ್ಧ ನಿಂತೇಹೋಯಿತು. ಈ ವಿಜಯನಗರ ಎಲ್ಲಾ ಸೂರೆ ಮಾಡಿ ಪುರಿ ತಿಂದಂಗೆ ತಿಂದುಬಿಡೋಣ. ಅಂತೂ ಈ ಷಹರ್ ನಿಲ್ಲೋದಿಲ್ಲ. ನಮ್ಮ ಬಾಜೀ ಸಾಹೇಬರು ಶಾಸ್ತ್ರ ನೋಡಿ ಹೇಳಿದ್ದಾರೆ. ಈ ರಾಮರಾಯ ಇದಾನಲ್ಲ ಇವನೇ ಕೊನೆಯ ಬಾದ್‌ಷಾ."

ಇಬ್ಬರೂ ಹೀಗೇ ಇನ್ನೂ ಅಷ್ಟು ಹೊತ್ತು ಮಾತನಾಡುತ್ತಿದ್ದು ಹೊರಟುಹೋದರು.

ಸುಮಾರು ರಾತ್ರಿಯಾಗಿ ಒಂದು ಝಾವ ಆಗಿರಬಹುದು. ಹೊಸಪೇಟೆ ಕಡೆಗೆ ಒಂದು ಕುದುರೆ ಸಾರೋಟ್ ಓಡುತ್ತಿದೆ. ರಂಗನಾಥನ ದೇವಸ್ಥಾನ ಕಳೆದು ಮೂಲೆ ತಿರುಗಿತೋ ಇಲ್ಲವೋ, ಯಾರೋ ಒಬ್ಬನು ಗಾಡಿ ಹೊಡೆಯು ವವನನ್ನು ನಿಲ್ಲಿಸೋ ಎಂದು ಅಡ್ಡ ಬಂದನು.

ಅವನಿಗೆ ಹಾಗೆ ಬೀದಿಯವರಿಂದ ಆಡಿಸಿಕೊಂಡು ಅಭ್ಯಾಸವಿಲ್ಲ. ಕುದುರೆಯ ಚಾಟಿ ಅವನ ಮೇಲೆ ಇಳಿಯಿತು. ಅವನು ವಾಚಾಮಗೋಚರ ವಾಗಿ ಬಯ್ಯಲಾರಂಭಿಸಿದನು. ಅದನ್ನು ಕೇಳಿ ಇನ್ನು ಕೆಲವರು ಕೀಳು ಜನರು ಎಲ್ಲಿಂದಲೋ ಬಂದರು. ಎಲ್ಲರೂ ಸಾಯುಧರಾಗಿದ್ದಾರೆ. ಹೊಡೆದು ಹಾಕುತ್ತೇನೆ ಎಂದು ಆ ಮೊದಲನೆಯವನು ಹಾರಾಡುತ್ತಿದ್ದಾನೆ.

ಈ ಗದ್ದಲವನ್ನು ಕೇಳಿ ಗಾಡಿಯಲ್ಲಿದ್ದವನು ಇಳಿದು ಬಂದನು. ಅವನು

ಇಳಿಯುತ್ತಿದ್ದ ಹಾಗೆಯೇ ಹಿಂದಿದ್ದವನು ಒಬ್ಬನು ಮುಂದೆ ಬಂದು, ಆ ಬಯ್ಯುತ್ತಿದ್ದವನನ್ನು ತಡೆದು ಏನೋ ಗದ್ದಲವನ್ನು ನಿಲ್ಲಿಸುವವನಂತೆ ಅಡ್ಡ ಬಂದು, ಗಾಡಿಯಿಂದ ಇಳಿದವನ ಹತ್ತಿರ ಬಂದು "ಬುದ್ಧಿ, ಕುಡಿದಿದ್ದಾನೆ. ಅವನ ಕೈಯಲ್ಲೇನು? ತಾವು ಹೋಗಿ" ಎಂದನು.

ಗಾಡಿಯಿಂದ ಇಳಿದವನು ಗೋಪಾಲರಾಯ. ಆ ದಿನ ಹೊಸಪೇಟೆಯಲ್ಲಿ ನಾಟಕ. ಅಲ್ಲಿಗೆ ಹೋಗಬೇಕೆಂದು ಹೊರಟಿದ್ದಾನೆ. ಹೊತ್ತಾಗಿದೆ. ಅಲ್ಲಿ ನಿಲ್ಲುವಂತಿಲ್ಲ. ಹಾಗೆಂದು ಬಿಟ್ಟುಹೋಗುವಂತೆಯೂ ಇಲ್ಲ. ಯಾವೊತ್ತೂ ಹೀಗಾಗಿರಲಿಲ್ಲ. ಕುಡಿದವನು ಬಂದು ಅಡ್ಡ ಹಾಕಿದನೆಂದು ಹಗುರವಾಗಿ ಗಣಿಸುವಷ್ಟು ಸಣ್ಣ ವಿಷಯವಾಗಿ ತೋರಲಿಲ್ಲ. "ಯಾವದೋ ಕಾಣದ ಕೈ ತುಂಟತನವನ್ನಿಲ್ಲಿ ಆರಂಭಿಸಿರಬೇಕು. ಇದನ್ನು ಇಲ್ಲಿಗೇ ಬಿಡಬಾರದು" ಎಂದು ಮನಸ್ಸಿನಲ್ಲಿ ಗೊತ್ತುಮಾಡಿಕೊಂಡು, ಅಲ್ಲಿ ನಿಂತಿದ್ದವರನ್ನೆಲ್ಲ ನಗುನಗುತ್ತ ಮಾತನಾಡಿಸಿದನು.

"ಅಯ್ಯೋ ಪಾಪ, ನಿಮಗೆಲ್ಲ ತೊಂದರೆಯಾಯಿತು. ನೀವೆಲ್ಲ ಬರದಿದ್ದರೆ ಇಲ್ಲಿ ಏನೇನು ರಾದ್ಧಾಂತವಾಗುತ್ತಿತ್ತೋ?"

ಮೊದಲು ಮಾತನಾಡಿದವನೇ ಮಾತನಾಡಿದನು: "ಉಂಟಾ ಬುದ್ಧಿ? ಇವನು ಯಾವನೋ ಕುಡಿದು ಬಂದು ತಮ್ಮನ್ನು ಅಡ್ಡ ಹಾಕಿ ರಂಪ ಮಾಡುತ್ತಿದ್ದರೆ, ನಾವು ನೋಡಿಕೊಂಡಿರೋದಾ? ತಾವು ದೊಡ್ಡ ಮನುಷ್ಯರು. ನಮ್ಮ ಊರು ಅಂದರೆ ಅಷ್ಟು ಅನಾಯಕವಾಗೋಯ್ತಾ?"

ಗೋಪಾಲರಾಯನ ಅನುಮಾನ ಇನ್ನೂ ಬಲಿಯಿತು. ತನ್ನ ಭಾವವನ್ನು ತಿಳಿಯಗೊಡಿಸದೆ, "ನೀವೆಲ್ಲ ಇಲ್ಲಿಯವರೇನೇನು? ಎಲ್ಲಿದ್ದೀರಿ?" ಎಂದನು.

ಮತ್ತೆ ಆತನೇ ಉತ್ತರಕೊಟ್ಟನು. "ಇಲ್ಲ ಬುದ್ಧಿ, ಇವೊತ್ತು ಶುಕ್ರವಾರವಲ್ಲವಾ? ಅದಕ್ಕೆ ದೇವರ ಪೂಜೆಗೆ ಹೋಗಿದ್ದು ಬರತಾಇದ್ದೋ? ಅಷ್ಟರಲ್ಲೇ ಇವನು ಕೂಗಾಡುತಾಇದ್ದದ್ದು ಕೇಳಿಸಿ ಓಡಿಬಂದೋ. ಅಷ್ಟೇ!"

ಗೋಪಾಲರಾಯನು ಅವರಿಂದ ತನಗೇನೋ ಮಹೋಪಕಾರವಾದ ಹಾಗೆ ಹೊಗಳಿ, ಅವರಿಗೆ ಒಂದೆರಡು ರೂಪಾಯಿ ಕೊಡುವ ನೆವದಿಂದ ಹತ್ತಿರಕ್ಕೆ ಬಂದು ಅವರ ಮುಖಗಳನ್ನು ನೋಡಿದನು. ಆತನ ಅನುಮಾನಕ್ಕೆ ಅವರ ಮುಖದಲ್ಲಿ ಏನೋ ಬೇಕಾದಷ್ಟು ಆಧಾರವಿದ್ದಂತೆ ಕಂಡಿತು. ಅವರನ್ನು

ಇನ್ನಷ್ಟು ಮಾತನಾಡಿಸಬೇಕು ಎನ್ನಿಸಿ, "ಅಯ್ಯಾ, ನೀವೆಲ್ಲ ಒಂದೇ ಗುಂಪೋ? ನಿಮ್ಮಲ್ಲಿ ಯಾರ ಕೈಗೆ ಕೊಡಲಿ? ಇಗೋ ಎರಡು ರೂಪಾಯಿ ಇದೆ. ತಗೊಳ್ಳಿ ನೀವೆಲ್ಲ ದಾರಿಯುದ್ದಕ್ಕೂ ಬಾಯಿತುಂಬಾ ಅಡಕೆಲೆ, ಹೊಗೆಸೊಪ್ಪು ಹಾಕಿಕೊಂಡು ಹೋಗಿ. ಅವನಿಗೂ ಏನಾದರೂ ಕೊಡಿ. ಪಾಪ, ಬುದ್ಧಿಯಿಲ್ಲ." ಎಂದನು.

ಮತ್ತೆ ಗುಂಪಿನವನೊಬ್ಬನು, "ಈ ಅಪ್ಪನೋರಕಡೆ ಕೊಡಿ. ಅವನಿಗೂ ಅಷ್ಟು ಕೊಡುತ್ತೇವೆ" ಎಂದನು.

ರಾಯನು ಕೇಳಿದನು "ಏನಯ್ಯಾ? ನನ್ನ ಮುಖನೋಡಿ, ನನ್ನ ಮಾತು ಕೇಳಿಯೂ ನಾನು ಯಾರು ಎನ್ನುವುದು ಗೊತ್ತಾಗಲಿಲ್ಲವೆ?"

"ಇಲ್ಲಾ ಬುದ್ಧಿ. ನಾವು ಬಡವರು. ನಾವು ತಮ್ಮನ್ನು ಎಲ್ಲಿ ನೋಡಿದ್ದೇವು?"

"ನಾಟಕದ ಗೋಪಾಲರಾಯನ ಹೆಸರಾದರೂ ಕೇಳಿದ್ದೀರೋ?"

"ತಾವೇನಾ ಬುದ್ಧಿ ಅವರು?"

"ಹೌದು. ಬರುವಹಾಗಿದ್ದರೆ ಬನ್ನಿ. ಇವೊತ್ತು ನಮ್ಮ ನಾಟಕ ಇದೆ. ನೋಡುವಿರಂತೆ."

ಮೊದಲು ಮಾತಾಡಿದವನು ಹೇಳಿದನು. "ಇವೊತ್ತು ನಮಗೇನೋ ಕೆಲಸ ಅದೆ ಬುದ್ಧಿ. ಇವೊತ್ತು ಬೇಡಿ. ಇನ್ನೊಂದು ದಿನ ಬರುತೇವಿ."

ರಾಯನು ತನ್ನೊಳಗೇ ಯೋಚಿಸಿಕೊಳ್ಳುತ್ತಾ "ನೀವು ಬೇಕಾದ ದಿನ ಬನ್ನಿ. ಬಂದು ಬಾಗಿಲಲ್ಲಿ ಇರುವವರ ಹತ್ತಿರ ಯಜಮಾನನನ್ನು ಕಾಣಬೇಕು ಎಂದು ಹೇಳಿ. ನಾನು ಹೇಳಿರುತ್ತೇನೆ. ನಾನು ಬರಲೇ?"

"ಹುಂ. ಹೋಗಬುಟ್ಟು ಬನ್ನಿ. ನಿಮ್ಮ ಪಾದ."

ಗೋಪಾಲರಾಯನು ಒಂದೇ ಗಳಿಗೆಯೊಳಗೆ ನಾಟಕಮಂದಿರದ ಹತ್ತಿರ ಬಂದನು. ಬಂದವನೇ ನಗರ ರಕ್ಷಕನನ್ನು ಕರೆಸಿ, ದೇವರಗುಡಿಯ ಹತ್ತಿರ ಆದುದನ್ನು ತಿಳಿಸಿ, ಅಲ್ಲಿ ತನಗೆ ಬಂದ ಅನುಮಾನವನ್ನು ಹೇಳಿ, ಅಲ್ಲಿನವರನ್ನು ಹಿಡಿದು ಹಾಕಬೇಕು ಎಂದನು.

"ಒಂದು ವೇಳೆ ಆ ಬಂದವರು ಹೇಳುವಹಾಗೆ ಅವೆಲ್ಲ ಒಬ್ಬ ಕುಡುಕನ ಅಧಿಕ ಪ್ರಸಂಗವಾಗಿದ್ದರೆ?"

" ಅವರೆಲ್ಲರೂ ಒಂದೇಗುಂಪು ಎನ್ನುವುದರಲ್ಲಿ ಸಂದೇಹವಿಲ್ಲ. ಏನಾದ ರಾಗಲಿ. ನೀವು ಮನಸ್ಸು ಮಾಡಿದರೆ ನಾನೊಂದು ಆಟಕಟ್ಟುತ್ತೇನೆ."

" ನೀವು ಏನು ಮಾಡಿದರೂ ನಾನು ನಿಮ್ಮ ಹಿಂದೆ."

ಗೋಪಾಲರಾಯನು ಅವನ ಕಿವಿಯಲ್ಲಿ ಏನೋ ಹೇಳಿದನು. ಅವನು ಒಪ್ಪಿದನು. ಇನ್ನೊಂದು ಗಳಿಗೆಯಲ್ಲಿ ನಾಟಕದ ಮಂದಿರದಲ್ಲಿ ಗೋಪಾಲ ರಾಯನಿಗೆ ಜ್ವರ ಬಂದಿದೆ. ಅದರಿಂದ ಆತನ ಪಾತ್ರವನ್ನು ಮತ್ತೊಬ್ಬನು ಅಭಿನಯಿಸುವುದಾಗಿ ಸುದ್ದಿ ಹಬ್ಬಿತು. ಮತ್ತೊಂದು ಗಳಿಗೆಯೊಳಗಾಗಿ, ಸಾಮಾನ್ಯವಾದ ಉಡುಪುಗಳನ್ನು ಉಟ್ಟು, ಸಾಮಾನ್ಯವಾದ ಒಡವೆಗಳನ್ನು ಇಟ್ಟುಕೊಂಡಿರುವ ಅಂದಗಾತಿಯೊಬ್ಬಳು ರಂಗಮಂಟಪದ ಮಗ್ಗುಲ್ಲಿರುವ ನೇಪಥ್ಯಶಾಲೆಯಿಂದ ಒಬ್ಬ ಗೆಣೆಯನೊಡನೆ ಹೊರಬಿದ್ದಳು. ಇಬ್ಬರನ್ನೂ ರಾಯನ ಗಾಡಿಯು ಕರೆದುಕೊಂಡು ಹೋಗಿ ಅಷ್ಟು ದೂರ ಬಿಟ್ಟುಬಂತು.

ಕುಡಿದವನ ಗೆಳೆಯರು ಇನ್ನೂ ಅಲ್ಲಿಯೇ ಇದ್ದರು. ರಾಯನ ನಿರೀಕ್ಷೆ ಯಂತೆ ಅವರು ಆತನು ಕೊಟ್ಟಿದ್ದ ಎರಡು ರೂಪಾಯಿಗೆ ಏನೇನೋ ತಿಂಡಿಗಿಂಡಿ ಅಡಕೆಲೆ ತಂದು ಅಲ್ಲಿಟ್ಟುಕೊಂಡಿದ್ದಾರೆ.

ಹೆಣ್ಣೂ ಅವಳಗೆಣೆಯ ಇಬ್ಬರೂ ರಂಗುಪದಗಳನ್ನು ಹಾಡಿಕೊಂಡು ಅಲ್ಲಿಗೆ ಬಂದರು. ಹೆಣ್ಣು ಬಹಳ ಬಜಾರಿಯಿದ್ದ ಹಾಗಿತ್ತು. ಅವಳು ಸುಳಿದ ಕಡೆಯೆಲ್ಲಾ, ಆ ಗಾಳಿಗೆ ಮತ್ತು ಹಿಡಿಯುವಷ್ಟು ಮದ್ಯದವಾಸನೆ. ಅದರ ಜೊತೆಗೆ ಅವಳು ಮುಡಿದಿರುವ ಜಾಜಿಯಹೂವಿನ ಪರಿಮಳ. ಅದರ ಸಂಗಡವೇ ಅವಳು ಹಚ್ಚಿಕೊಂಡಿರುವ ಪಸಿಯ ಗಂಧದ ಸುಗಂಧ. ಅವಳ ಜೊತೆಯಲ್ಲಿರುವ ಗೆಣೆಯನಕೈಯಲ್ಲಿ ಒಂದು ಚೀಲ. ಅದರಲ್ಲಿ ಒಳ್ಳೆ ಒಳ್ಳೆಯ ತಿಂಡಿಗಳು.

ಇವರೆಲ್ಲ ತಿಂಡಿ ತಿನ್ನುತ್ತ ಕುಳಿತಿರುವುದನ್ನು ನೋಡಿ ಅವಳು ತಾನು ನಿಂತಿರುವ ಕಡೆಯಿಂದಲೇ ಒಳ್ಳೆಯ ದಿಮಾಕಿನಿಂದ ಕೇಳಿದಳು : " ಯಾರೋ ಅವ ಅಲ್ಲಿ ಕೂತವ."

ಇವರಿಗೆ ಅವರು ಕೇಳಿದುದು ಪ್ರಿಯವಾಗಲಿಲ್ಲ. " ನೀನಾರು ಬಜಾರಿ ನಮ್ಮನ್ನು ಕೇಳೋಳು ?"

" ಯಾರ ಅವ ನನ್ನ ಬಜಾರಿ ಅನ್ನೋವ ?"

ಅವಳೇ ಹತ್ತಿರ ಬಂದಳು ಕೈಯಲ್ಲಿದ್ದ ವುಷಾಲ್ಪಿ ಅವನ ಮುಖ ಸುಡು

ವಷ್ಟು ಹತ್ತಿರಕ್ಕೆ ತೆಗೆದುಕೊಂಡು ಹೋಗಿ "ಯಾರಾ ನೀನು ? ಕಿಷ್ಣಪ್ಪನ ಮಗ ಸೊಣ್ಣಪ್ಪನೇನೋ ?" ಎಂದು ಮುಖದ ಹತ್ತಿರ ಹಿಡಿದು ನೋಡಿದಳು.

ಅವನು ಆ ಮಷಾಲ್ಟಿಯನ್ನು ಅತ್ತ ನೂಕಿ, "ಏ ಸೋಡು ಮತ್ತೆ ?" ಎಂದನು.

"ಏನಾ ನೋಷೋದು. ಹೊಟ್ಟೆಗಿಲ್ಲದ ಬಡಿ ಮಕ್ಕಳು ಕುಂತಿದ್ದೀರಿ. ಕೊಡೋ, ಸೂಳೆ ಮಕ್ಕಳು ತಿನ್ಲಿ. ಏನರೋ ಸಜ್ಜಾ ಒಡೆಬೇಕೇನ್ರೋ ? ನೋಡಿ ಮಾಂಸ ಗೀಂಸ ಎಲ್ಲ ಹಾಕವೆ. ನಿಮ್ಮ ಹುಟ್ನಲ್ಲೀ ತಿಂದಿಲ್ಲಾ ಅಂಥಾ ವಡೆ ? ತಿಂದರೆ ತಲೆ ತಿರುಗತವೆ. ಬೊಡ್ಡೀಮಕ್ಕಳಾ, ತಿನ್ನೋ ಹಂಗಿದ್ದರೆ ಹೇಳಿ."

ಅವರೆಲ್ಲ ಒಬ್ಬನ ಕಡೆ ತಿರುಗಿದರು. ಅವನು, "ನಾವು ಏನೋ ಏನೋ ಕೆಲಸ ಇಟ್ಕೊಂಡಿದ್ದೀವಿ. ನಾವು ಸಜ್ಜಾ ಒಡೆ ತಿನ್ನೋಕಿಲ್ಲ" ಎಂದನು.

ಆ ಹೆಣ್ಣು ಗದರಿದಳು. "ಎಂಥಾ ಗಂಡುಸೋ ನೀನು ? ಮೀಸೆ ಹೊತ್ತವನೆ. ನಾಚಿಕೆಯಿಲ್ಲದೆ ಒಡೆ ಕೊಟ್ಟರೆ ಬೇಡಾ ಅಂತಾನೆ. ತಿನ್ಲೆ ಮುಂಡೆ ಹೆತ್ತದ್ದೇ !" ಎಂದು ಅವನ ಬಾಯಿಗಿಟ್ಟಳು. ಅವನೂ ಬೇಡ ನೋಡು ಬೇಡ ನೋಡು ಅಂತಲೇ ಅದನ್ನು ಮುಗಿಸಿದನು. ಅವನ ಗುಂಪಿನವರು ಒಂದು ಚೀಲದ ಒಡೆಯನ್ನು ಮುಗಿಸಿಯೇ ಬಿಟ್ಟರು. ರಾಯನ ಗಾಡಿ ಬಂದಾಗ ಅಡ್ಡ ಕಟ್ಟಿದವನು ಇನ್ನೂ ಎರಡು ಒಡೆ ಹೆಚ್ಚಾಗಿ ತಿಂದನು. ಅವನು ಆಗ ಕುಡಿದವನಂತೆ ಆಡಿದ್ದರೂ ಈಗ ಸರಿಯಾಗಿದ್ದನು.

ಹೆಣ್ಣು ಕೂತುಬಿಟ್ಟಳು. ಗೆಣೆಯನು ಹೊತ್ತಾಗೋಕಿಲ್ವಾ ಎಂದನು. ಅವಳು ಅವನ ನೋಟೆ ನೋಟೆ ತಿವಿದು "ಇಂಥಾ ಮೀಸೆ ರಾಪ್ರುತ ಸಿಕ್ಕವ್ನೆ. ಬಿಟ್ಟು ಹೋಗೂದಾ ? ಚೆನ್ನಾಯಿತು. ಏಳು. ಮೂದೇವಿ. ನೀ ಬೇಕಾದರೆ ಹೋಗು. ನಾ ಬರೋಕಿಲ್ಲ. ಏನಲ್ಲಾ, ಇವ ಹೊರಟು ಹೋದರ ನೀನೂ ನನ್ನ ಜೊತೆಯಲ್ಲಿ ಮನೇ ತನಕ ಬರೋಕಿಲ್ವಾ ?" ಎಂದಳು.

ಅವನಿಗೆ ಕಷ್ಟಕ್ಕಿಟ್ಟುಕೊಂಡಿತು. ಅವನ ಮುಖದಲ್ಲಿಯೂ ಆ ಕಷ್ಟ ಕಾಣಿಸಿತು. ಏನೋ ಭಾರಿ ಕೆಲಸ ಇದ್ದವನು ವಹಿಸಿರುವ ಜೋಕೆಗಾರಿಕೆ ಅವನ ಮುಖದಲ್ಲಿ ಇದೆ. ಸಜ್ಜಾ ಒಡೆ ತನ್ನ ಕೆಲಸವನ್ನು ಮಾಡಿರುವುದಾಗಿ ಅವನ ಕಣ್ಣಿಗೆ ಹಿಡಿಯುತ್ತಿರುವ ಕೆಂಪು ಹೇಳುತ್ತಿದೆ. ಆ ಎರಡು ಒಡೆ ತಿಂದಿ

ದ್ದವನಂತೂ ತಲೆ ತೂಗುತ್ತಿದ್ದಾನೆ. ಇನ್ನೊಂದು ಗಳಿಗೆಯೊಳಗಾಗಿ ಅವನು ಬಾಯಿಬಿಟ್ಟನು. "ಲೇ ಹೋಗಲೇ! ನಾವೊಂದು ಭಾರಿ ಬೇಟೆ ಕಾದು ಕುಳಿತೀವಿ. ಇದೊಂದು ಸಸಿ ಬಂದಂಗೆ ಬಂದವಳೆ. ನೀನು ಇಲ್ಲಿರಬೇಡ. ಮೊದಲು ಕಾಲಿಗೆ ಬುದ್ದಿ ಹೇಳು. ಇಲ್ಲದಿದ್ದರೆ ನೋಡು, ಕುಂಬಳಕಾಯಿ ಎತ್ತಿಟ್ಟಂಗೆ ನಿನ್ನ ಎತ್ತಿ ಕುಕ್ಕಿಬಿಡುತ್ತೇನೆ, ನೋಡು."

"ಅವನು ಯಾವನೋ ಗೆಣೆಯ ನನ್ನೆತ್ತಿ ಕುಕ್ಕೋನ?" ಎಂದು ಇವನ ಕಡೆ ಬರುವುದಕ್ಕೆ ಎದ್ದಳು. ತಲೆ ತಿರುಗಿತು. ಮೈ ಒಲಿಯಿತು. ಕಾಲು ನಡುಗಿ ಒಬ್ಬನ ಮೇಲೆ ಬಿದ್ದುಬಿಟ್ಟಳು. ಅವನು ಕವಚದಲ್ಲಿ ಬಚ್ಚಿಟ್ಟು ಕೊಂಡಿದ್ದ ಮುಚ್ಚುಕತ್ತಿಗೆ ಇವಳು ತೊಟ್ಟಿದ್ದ ಬಳೆಗಳು ತಗುಲಿ ಎಲ್ಲವೂ ಪುಡಿ ಪುಡಿಯಾದವು. ಅವಳ ಸೀರೆಯ ಮದ್ಯದ ಗಂಧ ಅವನಿಗೆ ಹಿಡಿಸಿ, ಸಬ್ಬಾ ಒಡೆ ಆರಂಭಿಸಿದ್ದ ಕಾರ್ಯವನ್ನು ಮುಂದುವರಿಸಿತು.

ಇದುವರೆಗೂ ಕುಳಿತಿದ್ದ ಗೆಣೆಯನು ತನ್ನ ಬಳಿಯಿದ್ದ ಬುರುಡೆಯನ್ನು ತೆಗೆದು, "ಸರಿ. ಬಿಡು. ಬಿದ್ದೋದಳು. ಅವ್ಳ ಕೆಲಸ ಮುಗೀತು. ಇನ್ನು ಬೆಳಗಾಗೋತಂಕ ಅವಳು ಏಳೋ ಹಂಗಿಲ್ಲ. ಬನ್ನಿರೋ, ಇದನಾದರೂ ಮುಗಿಸೋಣ" ಎಂದನು.

ಮೊದಲು ಮಾತನಾಡಿದವನು "ಲೇ, ಕೂಡದು. ನಾವು ಬಂದಿರೋ ಕೆಲಸ ಕೆಟ್ಟೋದ್ರೆ ನೋಡಿಕೊಳ್ಳಿ. ನಿಮಗೆಲ್ಲ ಸೊನ್ನೆಯೇ" ಎಂದು ಗದರಿಸಿ ಕೊಂಡನು. ಮಿಕ್ಕವರು "ಏನು ರಂಗಪ್ಪಾ, ಏನೋ ದೇವರು ಬಂದಂಗೆ ಬಂದು ಇವನು ಕರೀತಿದ್ದರೆ, ಬೇಡಾ ಅಂತೀಯಲ್ಲಾ?" ಎಂದು ಅಂಗಲಾಚಿ ಕೊಂಡರು. ಕೊನೆಗೆ ಆ ಹೊಸಬ "ಹೋಗಲೋ, ನಂಗೇ ಸಾಲದು, ನಿಮಗೆಲ್ಲಿ ಕೊಡಲಿ?" ಎಂದು ಬುರುಡೆಯನ್ನೆತ್ತಿ ಗಟಗಟನೆ ಎಲ್ಲವನ್ನೂ ಕುಡಿದು, ಹಾಡುತ್ತ ಕುಳಿತುಬಿಟ್ಟನು. ಇನ್ನೊಂದು ಗಳಿಗೆಯೊಳಗಾಗಿ ಅವನಿಗೂ ಜ್ಞಾನತಪ್ಪಿತು. ಅವನೂ ಬಿದ್ದುಹೋದನು.

ಅವರವರೇ ಕುಳಿತು ಮಾತನಾಡಿಕೊಂಡರು. "ನೋಡಿದೆಯೇ? ನೀನು ಕುಡಿದಿದ್ದರೂ, ಹೀಗೆ ಬಿದ್ದು ಹೋಗುತ್ತಿದ್ದೆ. ಬಂದ ಕೆಲಸ ಕೆಟ್ಟು ಹೋಗುತ್ತಿತ್ತು."

"ಆಯಿತು. ಇನ್ನೂ ಎಷ್ಟು ಹೊತ್ತಿಗೆ ಸಾರೋಟು ಬರೋದು?"

“ಯಾವಾಗಲೂ ಇಷ್ಟು ಹೊತ್ತಿಗೆ ಬಂದು ಬಿಡಬೇಕು. ಇದೇನೋ ಇವೊತ್ತು ಕೊಂಚಹೊತ್ತಾಗಿದೆ. ಅಷ್ಟೆ!”

“ಆಯಿತು. ಇನ್ನೊಂದು ಸಲ ಹೇಳಬುಡಪ್ಪ. ಮೊದಲಿನಂಗೆ ಆದಾತು. ಈ ಸಲ ನೀನು ಹೇಳೋತನಕ ನಾನು ಅಡ್ಡ ಕಟ್ಟೋಲ್ಲ. ಇನ್ನೂ ಚಾವಟಿ ಏಟು ಚುರು ಚುರು ಅಂತಾ ಅದೆ.”

“ಏನೂ ಇಲ್ಲ ಕಣ್ರೋ. ಈ ಸಲ ಹತ್ತಿರ ಹೋಗೋದೇ ಬೇಡ. ಅಲ್ಲಿ ನೋಡು, ಹಗ್ಗಣದ ಬಳೆ ತಂದಿದ್ದೀನಿ. ಅದನ್ನ ಅಡ್ಡ ಕಟ್ಟಿಬುಡೋದು. ಕುದುರೆ ಕಾಲು ತೊಡರುತದೆ. ಕುದುರೆ ಬಿದ್ದರೆ ಎಲ್ಲರೂ ಕೆಳಕ್ಕೆ ಬೀಳತಾರೆ. ಬಿದ್ದವ್ರ ಕಮುಕ್ ಕಿಮುಕ್ ಅನ್ನದೆ ಹೊಡೆದುಹಾಕಿ. ತಲೆತಂದು ನನ್ನ ಕೈಗೆ ಕೊಟ್ಟುಬಿಡಿ. ನಿಮ್ಮದೇನದೆಯೋ ತಕೊಂಡು ಹೊಂಟೋಗಿ.”

“ಬರೋರು ಯಾರು?”

“ಇನ್ನು ಯಾರು? ಸೂಳೆಮನೆಗೆ ಹೋಗೋ ರಾಯರು.”

“ಗಾಡಿ ಬರುವ ಸದ್ದಾಗತ್ತೈತೆ.”

“ಅದು ಹೊಸಪೇಟೆ ಕಡೆಯಿಂದ ಬರುತಿರುವ ಗಾಡಿ. ಅದು ನಮಗೆ ಬೇಕಿಲ್ಲ. ನಮಗೆ ಬೇಕಾಗಿರೋ ಗಾಡಿ ಹೊಸಪೇಟೆಗೆ ಹೋಗೋ ಗಾಡಿ.”

ಗಾಡಿಯು ಬಂತು. ಅಲ್ಲೇ ನಿಂತಿತು. ಒಬ್ಬರೊಬ್ಬರಾಗಿ ಐದು ಜನ ಇಳಿದರು. ನೇರವಾಗಿ ಇವರ ಹತ್ತಿರಕ್ಕೆ ಬಂದರು. “ಕೈಮೇಲಕ್ಕೆತ್ತಿ” ಎಂದು ಒಂದು ಕೂಗು ಕೇಳಿಸಿತು. ಇವರಿನ್ನೂ ಆ, ಊ, ಎನ್ನುವುದರೊಳಗಾಗಿ ಬಂದವರು ಮೇಲೆ ಬಿದ್ದರು. ಇವರೂ ವಶವಾಗಲಿಲ್ಲ. ತಪ್ಪಿಸಿಕೊಳ್ಳುವುದಕ್ಕೆ ಯತ್ನಮಾಡಿದರು. ಆವೇಶದಲ್ಲಿ ಮಚ್ಚುಗಳಿಂದ ಎರಡು ಏಟೂ ಹೊಡೆದರು. ಆದರೂ ಸಾಧ್ಯವಾಗಲಿಲ್ಲ.

ಕೆಳಗೆ ಬಿದ್ದಿದ್ದ ಹೆಣ್ಣೂ, ಗಣೆಯನೂ ಎದ್ದು ನಿಂತಿದ್ದರು. ಇಬ್ಬರ ಕೈಯ್ಯಲ್ಲಿಯೂ ಪಟ್ಟಾಕತ್ತಿಗಳಿದ್ದವು. ರಂಗಪ್ಪನು ಓಡಿಹೋಗುವುದಕ್ಕೆ ಯತ್ನಿಸಿದ್ದನು. ಅವನಿಗೆ ಕಾಲಿಗೆ ಏಟು ಬಿದ್ದು ಕತ್ತರಿಸಿ ಹೋಗಿತ್ತು. ಗಾಡಿ ತಡೆದವನಿಗಂತೂ ಒಂದು ಕೈ ಒಂದು ಕಾಲು ಹೋಗಿತ್ತು.

ನಗರ ರಕ್ಷಕರು ಅವರನ್ನೆಲ್ಲಾ ಹೆಡೆಮುರಿ ಕಟ್ಟಿ ಗಾಡಿಯಲ್ಲಿ ತುಂಬಿದರು. ಆ ದಳದ ಜೊತೆಯಲ್ಲಿ ಬಂದಿದ್ದ ಅಧಿಕಾರಿಯು ಮುಂದೆ ಬಂದು,

ಆ ಹೆಣ್ಣನ್ನು ಮಾತನಾಡಿಸಿದನು. "ಏನು ಸಮಾಚಾರ, ಗೊತ್ತಾಯಿತೇನು ?"

"ಹೊಸಪೇಟೆಗೆ ಹೋಗುವ ರಾಯರ ಸವಾರಿಯನ್ನು ಅವರು ಕಾಯ್ದುಕೊಂಡಿದ್ದರು."

"ಹಾ ! ಹಾಗೆಯೇ ? ಅದೃಷ್ಟ ! ಅದೃಷ್ಟ ! ಗೋಪಾಲ್‌ರಾವ್ ! ತಾವು ಇವೊತ್ತು ನಮ್ಮನ್ನೆಲ್ಲ ಕಾಪಾಡಿದಿರಿ. ವಿಜಯನಗರದ ಆಪತ್ತು ಕಳೆಯಿತು ಇರಲಿ. ನೋಡುವಿರಂತೆ. ನಾಳೆ ಬೆಳಗಾಗುವುದರೊಳಗಾಗಿ ಈ ದ್ರೋಹಿಗಳನ್ನೆಲ್ಲ ಹಿಡಿದುಹಾಕುತ್ತೇನೆ. ನಾನೇ ರಾಯರ ಸನ್ನಿಧಿಗೆ ಹೋಗಿ ತಾವು ಎಂತಹ ಉಪಕಾರ ಮಾಡಿದಿರಿ ಎಂಬುದನ್ನು ಮಹಾಪಾದದಲ್ಲಿ ಬಿನ್ನವಿಸಿ ಬರುತ್ತೇನೆ. ಆಯಿತು ತಾವು ಹೇಗೆ ಹೋಗುತ್ತೀರಿ."

"ಇನ್ನೆಷ್ಟು ದೂರ ಹೋಗಬೇಕು ? ನಾವು ಹೋಗುತ್ತೇವೆ. ತಾವು ತಮ್ಮ ಕೆಲಸ ಮಾಡಿ."

"ನಾನು ಇಲ್ಲಿ ಇನ್ನೂ ಅಷ್ಟುಹೊತ್ತು ಕಾದಿದ್ದು ಸವಾರಿ ದಯಮಾಡಿಸಿದ ಮೇಲೆ ಹೋಗುತ್ತೇನೆ. ನಾಳೆ ನೋಡೋಣ. ತಾವು ಈ ಗಾಡಿಯಲ್ಲಿ ಹೋಗಿ. ಹಿಂತಿರುಗಿ ಬರುವವರೆಗೂ ಈ ದ್ರೋಹಿಗಳು ಇಲ್ಲೇ ಬಿದ್ದಿರುವರು."

ಹೆಣ್ಣೂ ಗೆಳೆಯನೂ ಗಾಡಿಯಲ್ಲಿ ಹೊಸಪೇಟೆಗೆ ಹೋದರು.

# ಅಧ್ಯಾಯ ಎಂಟು

ವಿಜಯನಗರದ ಅರಮನೆಯಲ್ಲಿ ಓಡಾಟವೋ ಓಡಾಟ. ಮಂತ್ರಿಗಳೆಲ್ಲರೂ ಗುಸಗುಸ ಪಿಸಪಿಸಮಾಡುತ್ತಿದ್ದಾರೆ. ಅಷ್ಟರಲ್ಲಿಯೇ ಸಮ್ಮುಖಕ್ಕೆ ಬರಬೇಕೆಂದು ಅಪ್ಪಣೆಯಾಯಿತು. ಎಲ್ಲರೂ ಒಬ್ಬರೊಬ್ಬರಾಗಿ ರಾಯರ ಸನ್ನಿಧಿಗೆ ಬಂದು ಕಾಣಿಸಿಕೊಂಡು ಭಯಭಕ್ತಿಗಳಿಂದ ನಮಸ್ಕಾರಮಾಡಿ ಕುಳಿತುಕೊಂಡರು.

ನಗರರಕ್ಷಕ ದಳದ ಅಧ್ಯಕ್ಷನು ರಾಜಾಜ್ಞೆಯಿಂದ ಬಂದು ಹಿಂದಿನ ದಿನ ನಡೆದುದು ಎಲ್ಲವನ್ನೂ ಮಂತ್ರಿಸಭೆಗೆ ತಿಳಿಸಿದನು. ಅದೇ ಸಂಬಂಧದಲ್ಲಿಯೇ ನೂರಾರು ಜನರನ್ನು ಹಿಡಿದುಹಾಕಿರುವುದಾಗಿಯೂ ಅರಿಕೆಮಾಡಿದನು. ರಾಜಧಾನಿಯಲ್ಲಿಯೇ, ಸಮ್ರಾಜರ ಪ್ರಾಣಹರಣ ಪ್ರಯತ್ನವು ನಡೆದುದನ್ನು ಕೇಳಿ ಎಲ್ಲರೂ ಅವಾಕ್ಕಾದರು.

ಬಿಜಾಪುರದಿಂದ ರಾಯಭಾರಿಯು ಕಳುಹಿಸಿದ ಪತ್ರವೂ ಮಂತ್ರಿಮಂಡಲದ ಮುಂದೆ ಬಂತು. "ಬಿಜಾಪುರದವರಿಗೆ ಯುದ್ಧವನ್ನು ಆರಂಭಿಸಲು ಹೆದರಿಕೆ. ಆದರೆ ಅ ಹ ಮ್ಮ ದ್ ನ ಗ ರ, ಬಿದರೆ, ಬೀರಾರಿನ ಸುಲ್ತಾನರು ಬಿಜಾಪುರದ ಸುಲ್ತಾನನ ಪ್ರಾಣ ಹಿಂಡುತ್ತಿದ್ದಾರೆ. ಉತ್ತರದಿಂದ ಸೈನ್ಯವು ಹೊರಟುಬಿಟ್ಟಿತು ಎಂಬ ಸುದ್ದಿ ದಿನದಿನವೂ ಬರುತ್ತಿದೆ. 'ಈ ಸಲ ಯುದ್ಧವಾದರೆ ದಳವಾಯಿಗಳು ಮೊದಲಾದ ಮುಖಂಡರಮೇಲೆಯೇ ಬೀಳುವುದು. ಸಣ್ಣ ಪುಟ್ಟ ಸೈನಿಕರ ತಂಟೆಗೆ ಹೋಗುವುದಿಲ್ಲ' ಎಂದು ಇನ್ನೊಂದು ಸುದ್ದಿ. ಎಲ್ಲದಕ್ಕಿಂತ ಹೆಚ್ಚಾಗಿ 'ಹೊರಗಿನವರು ವಿಜಯನಗರದಲ್ಲಿ ಬೇಕಾದ ಹಾಗೆ ಸೇರಿಕೊಂಡಿದ್ದಾರೆ. ಸೇನೆಯು ಅಲ್ಲಿಂದ ಹೊರಟಕೂಡಲೇ ರಾಜಧಾನಿಯನ್ನು ಲೂಟಿ ಮಾಡುತ್ತಾರೆ' ಎಂಬ ಸುದ್ದಿ ಬಹಳ ಬಲವಾಗಿದೆ. ಆ ಮೂರು ರಾಜ್ಯದವರು ಸುಲ್ತಾನರ ಹತ್ತಿರ ಬಂದು ಹೋಗುವುದು ಬಹಳ ಹೆಚ್ಚಾಗಿದೆ. ನಾವು ಸುಲ್ತಾನರ ದರ್ಶನವನ್ನು ಅಪೇಕ್ಷಿಸಿದರೆ ಕಾರಣಗಳನ್ನು ಹೇಳದೆಯೇ ಮುಂದಕ್ಕೆ ತಳ್ಳುತ್ತಿದ್ದಾರೆ. ಉತ್ತರದ ಮೂರು ಜನ ಸುಲ್ತಾನರ ಪ್ರತಿನಿಧಿಗಳು ಗೋಲ್ಕೊಂಡಕ್ಕೆ ಹೋಗಿದ್ದಾರೆ. ಅಲ್ಲಿ ಅವರು ಗೆದ್ದರೆ, ಯುದ್ಧವು ತಪ್ಪುವ ಹಾಗಿಲ್ಲ" ಎಂಬುದು ಆ ಪತ್ರದ ಸಾರಾಂಶ.

ಅದೆಲ್ಲ ಮುಗಿದಮೇಲೆ ಯಜಮಾನ್ ವೀರಪ್ಪಸೆಟ್ಟರು ತಂದಿರುವ ಸಂಧಿಯಪತ್ರದ ವಿಚಾರವೂ ಬಂತು. ಸಚಿವರಲ್ಲಿ ಎರಡು ಪಕ್ಷಗಳಾಯಿತು. "ಈಗಲೇ ಯುದ್ಧವಾಗುವುದೇ ಸರಿ. ಯಾವತ್ತಾದರೂ ಆಗಲೇ ಬೇಕಾಗಿರುವ ಯುದ್ಧ ಇವೊತ್ತೇ ನಡೆಯುವುದೇ ಒಳ್ಳೆಯದು. ಬಿಜಾಪುರ, ಗೋಲ್ಕೊಂಡ ಗಳನ್ನು ಗೆದ್ದುಕೊಂಡು, ಗೋದಾವರಿಯವರೆಗೂ ನಮ್ಮ ಮೇರೆಗಳನ್ನು ಒತ್ತಿಯೇ ಬಿಡಬೇಕು" ಎಂದು ಒಂದು ಪಕ್ಷ. "ಈಗ ಅವರೆಲ್ಲ ಸಿದ್ಧವಾಗಿ ದ್ದಾರೆ. ಅಲ್ಲದೆ ಡೆಲ್ಲಿಯ ಕಡೆಯಿಂದಲೂ ಅವರಿಗೆ ಸಹಾಯ ಬರುವುದಾಗಿ ವದಂತಿಯಿದೆ. ಅದರಿಂದ ಈ ಗೋಲ್ಕೊಂಡದವರ ಸಂಧಿಪತ್ರವನ್ನು ಒಪ್ಪಿಕೊಳ್ಳುವ ನೆಪದಲ್ಲಿ ಯುದ್ಧವನ್ನು ತಳ್ಳೋಣ ಸದ್ಯಮದಲ್ಲಿ ಇನ್ನೂ ಕೆಲವು ದುರ್ಗಗಳನ್ನು ಕಟ್ಟಿಕೊಂಡು ಪುಣ್ಯನಗರದವರೆಗೂ ನಮ್ಮ ಪ್ರಭಾವ ವನ್ನು ಬೆಳೆಸಿಕೊಂಡು, ಅನಂತರ ಯುದ್ಧಮಾಡಿ ಈ ಐವರು ಸುಲ್ತಾನರ ನಡು ಮುರಿದುಹಾಕಿಬಿಡುವುದು" ಎಂದು ಇನ್ನೊಂದು ಪಕ್ಷ. ಎರಡು ಪಕ್ಷದವರೂ ತಮ್ಮ ತಮ್ಮ ವಾದಗಳನ್ನು ರಾಯರ ಸುಹಾಪಾದಗಳಲ್ಲಿ ಬಿನ್ನವಿಸಿದರು.

ರಾಯರು ಎರಡುಗಳಿಗೆ ಸುಮ್ಮನಿದ್ದು ಹೇಳಿದರು. "ನಿನ್ನೆಯದಿನ ಯಜಮಾನ್ ಸೆಟ್ಟರು ಸಂಧಿಪತ್ರವನ್ನು ತರುತ್ತಿದ್ದ ಹಾಗೆಯೇ ನಮ್ಮ ದಳವಾಯಿ ರುಸ್ತುಂಖಾನನನ್ನು ಕರೆಸಿ ಅವನ ಅಭಿಪ್ರಾಯವನ್ನು ಕೇಳಿದೆ. ರುಸ್ತುಮನನ್ನು ಸರ್ವ ಸೇನೆಗಳಿಗೂ ದಳಪತಿಯಾಗಿ ನಿಯಾಮಕ ಮಾಡಿದ್ದ ರಿಂದ ಕೆಲವರಲ್ಲಿ ಅಸಮಾಧಾನ ತಲೆದೋರಿದೆ. ಅವನನ್ನು ಆ ಅಧಿಕಾರದಿಂದ ತೆಗೆದು ನಾವೇ ಸೇನಾಧಿಕಾರವನ್ನು ವಹಿಸಿಕೊಳ್ಳುವುದಾದರೆ, ಈಗಲೇ ಯುದ್ಧ ಮಾಡುವುದುತ್ತಮ; ಇಲ್ಲದಿದ್ದರೆ, ಇನ್ನು ಅಷ್ಟುಕಾಲ ಬಿಟ್ಟು ಸೈನಿಕರೂ ದಳವಾಯಿಗಳೂ ಆತನಲ್ಲಿ ವಿಶ್ವಾಸಪಡುವಹಾಗೆ ಆದಮೇಲೆ ಯುದ್ಧಮಾಡು ವುದು ಒಳ್ಳೆಯದು ಎಂದು ಆತನ ಅಭಿಪ್ರಾಯ. ನಮ್ಮ ಅಭಿಪ್ರಾಯದಲ್ಲಿ ಈಗ ಯುದ್ಧಕ್ಕೆ ಕಾಲ ಸರಿಯಾಗಿದೆ. ಇನ್ನು ಅಷ್ಟು ವರ್ಷಗಳ ಮೇಲೆ ನಮಗೆ ಈಗ ಇರುವ ಉತ್ಸಾಹವು ಹೀಗೇ ಇರುತ್ತದೆ ಎನ್ನುವುದಕ್ಕೆ ಆಗುವು ದಿಲ್ಲ. ಅದರಿಂದ ಯುದ್ಧವೇ ಏಕಾಗಬಾರದು ಎಂದು ನಾವೂ ಯೋಚಿಸು ತ್ತಿದ್ದೇವೆ" ಎಂದರು.

ವೃದ್ಧಮಂತ್ರಿಯು ಎದ್ದು ಕೈಮುಗಿದನು ; "ಮಹಾಸ್ವಾಮಿ ವಿಜಯ ನಗರದ ಮಂತ್ರಿಮಂಡಲದಲ್ಲಿ ಇದುವರೆಗೆ ನನ್ನ ಸಲಹೆಗೆ ವಿರೋಧವಾಗಿ ನಡೆದುದಿಲ್ಲ. ಮಹಾಪ್ರಭುಗಳಲ್ಲಿ ಈ ರಾಜಭಕ್ತನು ಮಾಡಿದ ಬಿನ್ನಪಗಳು ಯಾವಾಗಲೂ ಅನುಕೂಲವಾಗಿಯೇ ಪರಿಣಮಿಸಿವೆಯಲ್ಲದೆ ವಿರೋಧವಾಗಿಲ್ಲ. ಆದರಿಂದ ನನ್ನ ಮಾತನ್ನು ಕೇಳಲೇ ಬೇಕು. ಈಗ ಎರಡು ಕಾರಣಗಳಿಂದ ಯುದ್ಧವು ಕೂಡದು. ಮೊದಲನೆಯದು, ಇಲ್ಲಿ ಅರಮನೆಯಲ್ಲಿ ಯಾರಿಗೂ ಸ್ವಾಸ್ಥ್ಯವಿಲ್ಲ. ಮುಂದೆ ಸಿಂಹಾಸನವನ್ನು ಏರುವವರು ಯಾರು? ಎಂಬ ಪ್ರಶ್ನೆಯು ಇನ್ನೂ ಇತ್ಯರ್ಥವಾಗಿಲ್ಲ. ಆ ಪ್ರಶ್ನೆಯು ಇತ್ಯರ್ಥವಾಗಿ, ಮುಂದಿನ ಚಕ್ರವರ್ತಿಗಳು ಇಂಥವರು ಎಂಬುದು ಗೊತ್ತಾಗಿ, ಪ್ರತ್ಯಕ್ಷ ಪರೋಕ್ಷಗಳಲ್ಲಿ ಆ ಮೂರ್ತಿಯಲ್ಲಿ ಜನರಿಗೆ ಅನುರಾಗ, ವಿಶ್ವಾಸ, ಭಕ್ತಿಗಳು ಬೇರೂರುವುದಕ್ಕೆ ಅವಕಾಶ ಬೇಕು. ಈಗ ಯುದ್ಧವಾದರೆ, ಜನವರ್ಗದ ಅನಿಶ್ಚಿತಭಾವದಿಂದ ಏನೇನಾದರೂ ಅನರ್ಥವಾಗಬಹುದು. ಎರಡನೆಯದಾಗಿ, ಈ ಐವರೂ ಸುಲ್ತಾನರಲ್ಲಿ ಗೋಲ್ಕೊಂಡದವನೇ ಪ್ರಬಲ. ಆತನು ಯುದ್ಧಕ್ಕೆ ಒಪ್ಪಿದ ಹೊರತು ಇವರು ಧೈರ್ಯವಾಗಿ ಯುದ್ಧಕ್ಕೆ ಬರುವುದಿಲ್ಲ. ಆತನು ಏನೋ ಕಾರಣಾಂತರದಿಂದ ಯುದ್ಧವು ಬೇಡ ಎನ್ನುತ್ತಿರುವಾಗ, ಆತನಾಗಿ ಸಂಧಿಯನ್ನು ಅಪೇಕ್ಷಿಸುತ್ತಿರುವಾಗ ನಾವು ಈ ಸಮಯವನ್ನು ಕಳೆದುಕೊಳ್ಳುವುದು ಸೂಕ್ತವಲ್ಲ. ಅಲ್ಲದೆ ಗೋಲ್ಕೊಂಡದ ನವಾಬನು ದೈವಭಕ್ತ. ಮೋಸಗಾರನಲ್ಲ. ಆದರಿಂದ ಆತನು ಅಪೇಕ್ಷಿಸುವ ಶಾಂತಿಯು, ನಿಜವಾಗಿ ಶಾಂತನಾದವನು ಅಕೃತ್ರಿಮವಾಗಿ ಸಹಜವಾಗಿ ಕೋರುವ ಶಾಂತಿಯೇ ಹೊರತು, ಕಳ್ಳರು ಯುದ್ಧಸನ್ನಾಹಕ್ಕಾಗಿ ಕೋರುವ ಕಾಲಯಾಪನದ ಶಾಂತಿಯಲ್ಲ. ಆದರಿಂದ ಮಹಾಸ್ವಾಮಿಯವರು ಶಾಂತಿಯನ್ನು ಕೋರಿ ಗೋಲ್ಕೊಂಡದವರೊಡನೆ ಸಂಧಿಯನ್ನು ಮಾಡಿಕೊಳ್ಳಿ. ಈ ನಾಲ್ವರೂ ಒಂದು ವೇಳೆ ದುಡುಕಿದರೂ ಗೋಲ್ಕೊಂಡದವರು ನಮ್ಮೊಡನೆ ಇರುವುದರಿಂದ ನಾವು ಇವರನ್ನು ಮುರಿಯುವುದು ಅಷ್ಟು ಕಷ್ಟವಾಗಲಾರದು."

ಎಲ್ಲರೂ ಮುಖ ಮುಖ ನೋಡಿಕೊಂಡರು. ವೃದ್ಧ ಮಂತ್ರಿಯ ಮಾತುಗಳನ್ನು ಎಲ್ಲರೂ ಗೌರವಿಸಿದರು. ರಾಯರೂ ಯುದ್ಧೋತ್ಸಾಹವನ್ನು ಹಿಂದಿಟ್ಟು ಸಂಧಿಪತ್ರಕ್ಕೆ ಸಹಿ ಹಾಕಲು ಮಂತ್ರಿಗಳಿಗೆ ಅಪ್ಪಣೆಯನ್ನಿತ್ತರು.

ಯಜಮರ್ಾ ವೀರಪ್ಪಸೆಟ್ಟರೂ, ನಟರಾಯ ಕಂಠೀರವ ಗೋಪಾಲರಾಯರೂ ಕೂಡಲೇ ಬರಬೇಕೆಂದು ಸಿರೂಪವನ್ನು ಕಟ್ಟಿಗೆಯವರು ತೆಗೆದುಕೊಂಡು ಹೋದರು. ಭರತಾಚಾರ್ಯರೂ, ಚಿನ್ನಾಸಾನಿಯೂ ಬರಬೇಕೆಂದು ಅವರಿಗೆ ಅರಮನೆಯಿಂದ ಕರೆಯು ಹೋಯಿತು.

ಮಧ್ಯಾಹ್ನ ಒಂದು ಝಾವವಾಗಿರಬಹುದು. ನಟರಾಯ ಕಂಠೀರವ ಗೋಪಾಲರಾಯರು ರಾಜಾಜ್ಞೆಯಂತೆ ಬಂದು ಸಮ್ರಾಜರ ದರ್ಶನವನ್ನು ಮಾಡಿದರು. ಸಮ್ರಾಜರು ಹಿಂದಿನ ರಾತ್ರಿಯ ಕಥೆಯನ್ನೆಲ್ಲ ಕೇಳಿದರು. "ಆಯಿತು, ಅಂತು ನಮಗೋಸ್ಕರವಾಗಿ ನೀವು ಹೆಣ್ಣಿನವೇಷ ಕೂಡ ಧರಿಸಬೇಕಾಯಿತು."

"ತಪ್ಪೇನು? ಮಹಾಸ್ವಾಮಿಯವರ ಸೇವೆಗಾಗಿ ಏನಾದರೂ ಮಾಡಲೇ ಬೇಕು ನನ್ನೊಡೆಯ."

"ತಮ್ಮಂತಹ ರಾಜಭಕ್ತರು ಇರುವವರೆಗೂ ವಿಜಯನಗರಕ್ಕೆ ಚ್ಯುತಿಯಿಲ್ಲ."

"ವಿಜಯನಗರವು ಯಾವಾಗಲೂ ವಿಜಯನಗರವೇ ಆಗಿರಬೇಕೆಂದು ನಮ್ಮ ಕೋರಿಕೆ ಬುದ್ಧಿ."

"ರಾಯರ ರಾಜಭಕ್ತಿಯು ಅಪಾರವಾದುದು. ನಿಮ್ಮಿಂದ ಆಗದ ಒಂದು ಕೆಲಸವನ್ನು ಸಾಧಿಸಬೇಕಾಗಿ ತಮ್ಮನ್ನು ಕೋರಿದ್ದೇನೆ ರಾಯರೇ!"

"ಅಪ್ಪಣೆಯಾಗಬೇಕು ಮಹಾಸ್ವಾಮಿ!"

"ಚಿನ್ನಳ ಹಟಮಾರಿತನ ತಮಗೆ ಗೊತ್ತಿದೆ. ಅವಳು ಗೋಲ್ಕೊಂಡಕ್ಕೆ ಹೋಗಿ ಬರಬೇಕು"

ರಾಯರ ಮುಖ ಕೆಂಪಾಯಿತು. ಏನು ಹೇಳಬೇಕೋ ತೋರದೆ ಧರಿಸಿದ್ದ ರುಮಾಲನ್ನು ಹಿಂದಕ್ಕೂ ಮುಂದಕ್ಕೂ ಸರಿಸಿದರು. ರಾಯರು ನಗುತ್ತ "ನಮ್ಮ ಅಭಿಮಾನಕ್ಕೆ ಪಾತ್ರವಾದ ವಸ್ತುವಿನಲ್ಲಿ ಸ್ವಾತಂತ್ರ್ಯ ವಹಿಸುವುದು ಕೊಂಚ ಕಷ್ಟ. ಆದರಿಂದ ಆ ಕೆಲಸ ನಿರ್ವಹಿಸಬೇಕೆಂದು ತಮಗೆ ಹೇಳುತ್ತಿದ್ದೇನೆ. ನಮ್ಮ ಅಭಿಮಾನಕ್ಕೆ ಪಾತ್ರವಾದ ವಸ್ತು ಅದು. ಅವಳ ಅಭಿಮಾನಕ್ಕೆ ಪಾತ್ರವಾದ ವಸ್ತು ತಾವು. ಅವಳು ತಮ್ಮ ಮಾತು ಮೀರುವುದಿಲ್ಲ. ಈ ಕಾರ್ಯ,

ಹಿಂದಿನ ರಾತ್ರಿ ತಾವು ಸಾಧಿಸಿದ ಕಾರ್ಯವಷ್ಟೇ ಗುರುತರವಾದುದು ಎಂಬುದನ್ನು ತಾವು ಮನಗಾಣುವಿರಂತೆ. ಈ ತೆರೆಯಹಿಂದೆ ಇರಿ" ಎಂದು ಅವರನ್ನು ತೆರೆಯ ಮರೆಯಲ್ಲಿ ಕುಳ್ಳಿರಿಸಿ, ಯಜಮಾನ್ ವೀರಪ್ಪ ಸೆಟ್ಟರನ್ನು ಬರಮಾಡಿಕೊಂಡರು. ಆದರದಿಂದ ಗೌರವಿಸಿ, ಆಸನದಲ್ಲಿ ಕುಳ್ಳಿರಿಸಿ, ವಿಶ್ವಾಸದಿಂದ ಹೇಳಿದರು. "ಸೆಟ್ಟರೇ ಪ್ರಜಾವರ್ಗಕ್ಕೆ ತಮ್ಮಿಂದ ಆಗಿರುವ ಉಪಕಾರವು ಅಷ್ಟಿಷ್ಟಲ್ಲ. ನಾವು ಯುದ್ಧವೇ ಸರಿಯೆಂದು ನಿಶ್ಚಯಿಸಿ ಗೋವೆಗೆ ಸೈನ್ಯವನ್ನೂ ಕಳುಹಿಸಿದ್ದೆವು. ಇತ್ತ ಆದವಾನಿಯಲ್ಲಿದ್ದ ಸೈನ್ಯವೂ ಹೊರಡಲು ಸಿದ್ಧವಾಗಿದ್ದುವು. ಮಂತ್ರಿ ಮಂಡಲದಲ್ಲಿಯೂ ಅನೇಕರಿಗೆ ಯುದ್ಧವೇ ಸರಿಯೆಂಬ ಅಭಿಪ್ರಾಯವಿತ್ತು. ಅಲ್ಲಿ ಗೋಲ್ಕೊಂಡದಿಂದ ನಮ್ಮ ರಾಯಭಾರಿಗಳು "ಸುಲ್ತಾನರಿಗೆ ಯುದ್ಧವು ಇಷ್ಟವಿಲ್ಲ. ಶಾಂತಿಗೆ ಸಂಧಾನ ನಡೆಸುತ್ತಿದ್ದೇನೆ" ಎಂದು ಬರೆದಿದ್ದರು. ತಾವು ಶಾಂತಿಯ ಸಂಧಿಪತ್ರವನ್ನು ತಂದೇ ಬಿಟ್ಟಿರಿ. ಇದೋ, ಈ ಪತ್ರಕ್ಕೆ ಮಂತ್ರಿಗಳ ರುಜುವಾಗಿದೆ ತಾವೇ ತೆಗೆದುಕೊಂಡು ಹೋಗಿ. ಈ ಸಂಧಿಪತ್ರದ ಜೊತೆಯಲ್ಲಿ ಕಳುಹಿಸುವ ಮರ್ಯಾದೆಗಳನ್ನೆಲ್ಲ ತಾವೇ ತೆಗೆದುಕೊಂಡು ಹೋಗಿ, ಸುಲ್ತಾನರು ಅಪ್ಪಣೆಕೊಡಿಸಿದ ಶುಭವಾಕ್ಯಗಳೆಲ್ಲ ನಮಗೂ ಬಹಳ ಮೆಚ್ಚಿಕೆಯಾದುವು. ಅವುಗಳಂತೆ ನಾವು ನಾವು ನಡೆದುಕೊಳ್ಳಲು ದೇವರು ನಮಗೆ ಸಾಮರ್ಥ್ಯವನ್ನು ಕೊಡಲಿ ಎಂದು ನಾವು ಹಗಲೂ ರಾತ್ರಿ ಪ್ರಾರ್ಥನೆ ಮಾಡುತ್ತೇವೆಂದು ನಾನೇ ಹೇಳಿದೆನೆಂದು ಅವರಲ್ಲಿ ಅರಿಕೆಮಾಡಿ. ಅವರು ನಮ್ಮಕಡೆ ನೀಡಿದ ಸ್ನೇಹ ಹಸ್ತವನ್ನು ನಾವು ಅಂಗೀಕರಿಸಿರುವುದು ಮಾತ್ರವಲ್ಲ, ಅವರು ನಮ್ಮಲ್ಲಿ ಸ್ನೇಹ ಮಾಡಿದರೆಂದು ಇತರರು ಅವರಲ್ಲಿ ವಿರೋಧನಾಗಿ ವರ್ತಿಸಿದರ, ವಿಜಯನಗರದ ಸರ್ವಸ್ವವೂ ಅವರ ಪರವರ್ತಿಯಾಗಿರುವುದು ಎಂದು ಅವರಲ್ಲಿ ಹೇಳಿ. ಇನ್ನು ತಾವು ಗೋಲ್ಕೊಂಡಕ್ಕೆ ಯಾವೊತ್ತು ಹೊರಡುವಿರಿ ?"

ಸೆಟ್ಟರು ರಾಯರ ಮುಖವನ್ನು ನೋಡಿ ಸಣ್ಣ ನಗು ನಗುತ್ತ "ಮಹಾಪಾದದ ಅಪ್ಪಣೆಯಾದಾಗ" ಎಂದರು.

ರಾಯರು ನಗುತ್ತ, "ಸೆಟ್ಟರೇ, ರಾಜ್ಯಗಳನ್ನು ಗೆಲ್ಲಬಹುದು. ರಮಣಿಯರನ್ನು ಗೆಲ್ಲುವುದು ಕಷ್ಟ. ಅರಸರಿಗೆ ಆಜ್ಞಾಭಂಗವಾದೀತು ಎಂಬ ದಿಗಿಲು ಯಾವಾಗಲೂ ಇದ್ದೇ ಇರುವುದು. ಏನು ಮಾಡಬೇಕೋ ತಾವೇ ಅಪ್ಪಣೆ ಕೊಡಿಸಿ" ಎಂದರು.

"ಸನ್ನಿಧಾನದಲ್ಲಿ ಮಾತನಾಡುವಾಗ ಎದೆ ಡವಡವ ಎನ್ನುತ್ತದೆ. ಮಹಾಸ್ವಾಮಿ, ಅಪ್ಪಣೆಯಾದರೆ ಧೈರ್ಯವಾಗಿ ಅರಿಕೆಮಾಡುತ್ತೇನೆ."

"ಏನೂ ಚಿಂತೆಯಿಲ್ಲ. ನಿಶ್ಚಿಂತೆಯಿಂದ ಅರಿಕೆಮಾಡಿ."

"ಮಹಾಸ್ವಾಮಿ ಜನ ಆಡಿಕೊಳ್ಳುವ ಮಾತು. ಮಹಾಪಾದವಲ್ಲಿ ಅರಿಕೆಯೇನೋ ಮಾಡುತ್ತೇನೆ. ಕ್ಷಮಿಸಬೇಕು ಆ ಚಿನ್ನಾನಾಸಿ ಈ ಲೋಕದಲ್ಲಿ ಯಾರಮಾತಾದರೂ ಕೇಳುವಹಾಗಿದ್ದರೆ, ಅದು ಇಬ್ಬರ ಮಾತಂತೆ ಮಹಾಸ್ವಾಮಿ. ಒಂದು ಭರತಾಚಾರ್ಯರದು: ಇನ್ನೊಂದು ಗೋಪಾಲ ರಾಯರದು."

ಚಕ್ರವರ್ತಿಗಳು ಬಾಯಿಬಿಟ್ಟು ಗಹಗಹಿಸಿ ನಕ್ಕುಬಿಟ್ಟರು. "ಹಾಗಾದರೆ ನಮ್ಮ ಮಾತೂ ಅವಳಲ್ಲಿ ನಡೆಯುವುದಿಲ್ಲವಂತೋ? ಚಿಂತೆಯಿಲ್ಲ. ಜನ ಏನು ಹೇಳುತ್ತಾರೋ ಕೇಳೋಣ. ಹೇಳಿಬಿಡಿ."

"ಮಹಾಪಾದಗಳು ಎನ್ನುವ ವೀಣೆಯನ್ನು ಅವಳು ಬಲು ಚೆನ್ನಾಗಿ ಬಾರಿಸುತ್ತಾಳೆ ಎಂದು ವದಂತಿ ಪ್ರಭು"

ರಾಯರು ಆ ಮಾತಿನರ್ಥವನ್ನು ಸಂಪೂರ್ಣವಾಗಿ ಗ್ರಹಿಸಿ, ನಕ್ಕು, ಆ ವಿನೋದವನ್ನು ಆನಂದವಾಗಿ ಅನುಭವಿಸಿ, ಹೇಳಿದರು. "ಸೆಟ್ಟರು ಹೇಳಿದುದು ನಮಗೂ ಗೊತ್ತಿದೆ. ಆದರಿಂದ ಆ ಆನೆಯನ್ನು ಆಳುವ ಅಂಕುಶ ಬೇಕಾದರೆ ಇರಲಿ ಎಂದು ನಾವು ಆಗಲೇ ಸಂಗ್ರಹಿಸಿಟ್ಟಿದ್ದೇವೆ. ನೋಡಿ" ಎಂದು ತಾವೇ ಎದ್ದು ತೆರೆಯನ್ನು ಅತ್ತ ಎಳೆದರು. ಒಳಗೆ ಗೋಪಾಲರಾಯರು. ಸೆಟ್ಟರು ಅವನ್ನು ಕಂಡು ಅವಾಕ್ಕಾಗಿ ಹೋದರು.

ಚಕ್ರವರ್ತಿಗಳು ಸೆಟ್ಟರ ಭಾವಪ್ರಳಯವನ್ನು ಕಂಡು, ಮುಸಿಮುಸಿ ನಗುತ್ತಾ, "ಆಜ್ಞೆಯನ್ನು ನಿರೀಕ್ಷಿಸುತ್ತಿರುವವರು ತಾವು. ಆಜ್ಞೆಯಾದಾಗ ಭಂಗವಾಗದಂತೆ ಕಾಪಾಡುವವರು ಇವರು. ತಾವಿಬ್ಬರೂ ಸೇರಿ ನಮ್ಮ ಕಾರ್ಯವನ್ನು ಮಾಡಬೇಕಾಗಿದೆ. ಸಮ್ಮತವಷ್ಟೇ?" ಎಂದರು.

ರಾಯರಿಗೆ ಹಠಾತ್ತಾಗಿ ಸಂಭವಿಸಿದ ಈ ಘಟನೆಯನ್ನು ನೋಡಿ ನಾಲಗೆಯು ಅಂಗುಳಿಗೆಹತ್ತಿಹೋಗಿತ್ತು. ಸೆಟ್ಟರು ಬೀಗ ಹಾಕಿದಷ್ಟು ಭದ್ರ ವಾಗಿ ಹಿಡಿದುಕೊಂಡಿದ್ದ ನಾಲಗೆಯನ್ನು ಬಹು ಕಷ್ಟದಿಂದ ಸಡಲಿಸಿಕೊಂಡು

ಹೇಳಿದರು, "ಮಹಾಸ್ವಾಮಿ. ಸಮಯಕ್ಕೆ ಒದಗಲಿ ಎಂದು ನಾನೂ ಅಷ್ಟು ಕಾಣಿಕೆ ಕಟ್ಟಿದ್ದೇನೆ."

"ಹಾಗೆಂದರೆ ?"

"ಮೊದಲನೆಯ ಸಲ ಮಹಾಪಾದಪಲ್ಲಿ ವಜ್ರದಗಣಿಯ ವಿಚಾರ ಮಾತನಾಡುವುದಕ್ಕೆ ಬಂದ ದಿವಸ, ಬೇಕು ಎಂದು ಚಿನ್ನಾಸಾನಿಯ ಮನೆಗೆ ಹೋಗಿ ಇಪ್ಪತ್ತೈದುಸಾವಿರ ರೂಪಾಯಿನ ವಜ್ರಗಳನ್ನು ಕೊಟ್ಟು ಇದು ನಮ್ಮದಾಗಿ ನಿಮ್ಮಲ್ಲಿರಲಿ ಎಂದು ಹೇಳಿಬಂದೆ ಮಹಾಸ್ವಾಮಿ. ಆ ದಾಕ್ಷಿಣ್ಯ ಒಂದು ದಿನವಲ್ಲದಿದ್ದರೆ ಇನ್ನೊಂದು ದಿನವಾದರೂ ಕಾರ್ಯಕಾರಿಯಾದೀತು ಎಂದು ನಂಬಿಕೆ."

"ನಮ್ಮ ಅನುಗ್ರಹವನ್ನು ಪಡೆದ ಚಿನ್ನಾಸಾನಿಯು ನಮ್ಮ ಮಾತನ್ನು ನಡೆಯಿಸದೆ ಹೋದರೆ ನಾವು ಅದನ್ನು ಪ್ರಕಾರಾಂತರವಾಗಿ ಗ್ರಹಿಸಲಾಗುವುದಿಲ್ಲ, ಗ್ರಹಿಸುವುದೂ ಇಲ್ಲ. ಆದರೆ, ವಿಜಯನಗರ ಸಾಮ್ರಾಜ್ಯದ ಪ್ರಜೆಯಾದ ಚಿನ್ನಾಸಾನಿಯೂ ಸಾಮ್ರಾಜ್ಯದ ಹಿತಕ್ಕೋಸ್ಕರ, ಸಮ್ರಾಜರ ಅಪ್ಪಣೆಯನ್ನು ಪಾಲಿಸದಿದ್ದರೆ ಅದು ಗುರುತರವಾದ ಅಪರಾಧವಾದೀತು· ಅಕ್ಷಮ್ಯವಾದೀತು. ಅದನ್ನು ಅರಿಯದಷ್ಟು ಅಜ್ಞಾನಿಯಲ್ಲ ಚಿನ್ನಾಸಾನಿ. ಇರಲಿ. ತಾವಿಬ್ಬರೂ ಒಳಗೆ ಇರಿ. ಈಗ ಭರತಾಚಾರ್ಯರು ದಯಮಾಡುವರು. ನೋಡೋಣ."

ಅವರಿಬ್ಬರೂ ತೆರೆಯ ಮರೆಯನ್ನು ಸೇರುತ್ತಿದ್ದ ಹಾಗೆಯೇ ಕಟ್ಟಿಗೆಯವನು ಭರತಾಚಾರ್ಯರನ್ನು ಕರೆತಂದನು. ಸಮ್ಮುಖದ ಅಧಿಕಾರಿಯು ಆಚಾರ್ಯರನ್ನು ಕರೆದುಕೊಂಡು ಬಂದು ಚಕ್ರವರ್ತಿಗಳ ಸಮೀಪದಲ್ಲಿ ಬಿಟ್ಟನು. ಆಚಾರ್ಯರು ಶಾಸ್ತ್ರೋಕ್ತವಾದ ಅಭಯಮುದ್ರೆಯನ್ನೂ, ವರದಮುದ್ರೆಯನ್ನೂ ಹಿಡಿದು ಸ-ರಾಗವಾಗಿ, ಸ-ತಾಳವಾಗಿ, "ಮಂಗಲಮಾತನೋತು ಸಾ ಶ್ರೀ ಭುವನೇಶ್ವರೀದೇವೀ" ಎಂದು ಆಶೀರ್ವಾದಮಾಡಿ, ಸಮ್ರಾಜನು ತೋರಿಸಿದ ಆಸನವನ್ನು ಅಲಂಕರಿಸಿದರು.

ಚಕ್ರವರ್ತಿಗಳ ಬಾಯಿಂದ ಏನು ಆಜ್ಞೆಯು ಹೊರಟೀತೋ ಎಂದು ಆಜ್ಞೆಯನ್ನು ನಿರೀಕ್ಷಿಸುತ್ತ ಕುಳಿತಿರುವ ಆಚಾರ್ಯರನ್ನು ಚಕ್ರವರ್ತಿಗಳೇ

ಮೊದಲು ಮಾತನಾಡಿಸಿದರು. ಆ ಮಾತಿನಲ್ಲಿ ತನಗಿಂತ ದೊಡ್ಡವರನ್ನು ಅವರಿಗೆ ಅನುಚಿತವಾದ ಕಾರ್ಯದಲ್ಲಿ ನಿಯೋಜಿಸಬೇಕಾಗಿರುವ ಚಿಕ್ಕವನು ಪಡುವ ಶ್ರಮವೆಲ್ಲ ತುಂಬಿತ್ತು. ಮುಖವನ್ನು ಹಿಂಡಿಕೊಳ್ಳುತ್ತ, ಅತ್ತಿತ್ತ ನೋಡುತ್ತ, ಸಂಶಯವೇ ಮೂರ್ತಿಯಾದಂತೆ ತೋರುತ್ತ, ಚಕ್ರವರ್ತಿಗಳು "ಆಚಾರ್ಯರು ನಮ್ಮ ಅಪಚಾರವನ್ನು ಕ್ಷಮಿಸಬೇಕು. ಸಾಮ್ರಾಜ್ಯದ ಹಿತಕ್ಕಾಗಿ ತಮಗೆ ಪ್ರಿಯವಲ್ಲದ ಕಾರ್ಯವೊಂದನ್ನು ಮಾಡಬೇಕಾಗಿ ಬಂದರೆ ದೊಡ್ಡವರು ಏನು ಮಾಡುವರು ?" ಎಂದು ಕೇಳಿದರು.

ಆಮಾತನ್ನು ಕೇಳಿ ಆಚಾರ್ಯರಿಗೆ ದೊಡ್ಡದಾಗಿ ಅಳು ಬಂದುಬಿಟ್ಟಿತು. ದೊಡ್ಡದಾಗಿ ಬಿಕ್ಕಳಿಸಿ ಅತ್ತುಬಿಟ್ಟರು. "ಮಹಾಪ್ರಭು, ಸಾಮ್ರಾಜ್ಯವು ಶಾಶ್ವತವಾಗಿರುವಂತೆ ಮಾಡುವ ಅವಕಾಶವು ಒಂದು ಸಿಕ್ಕಿತ್ತು. ಅದನ್ನು ಕಳೆದು ಕೊಂಡ ಪರಮಪಾಪಿಯು ನಾನು. ಮತ್ತೆ ಅಂತಹ ಅವಕಾಶವು ಸಿಕ್ಕಿದರೆ, ಶ್ರೀ ಗುರುಚರಣಗಳ ಮೇಲಾಣೆ, ಕಳೆದುಕೊಳ್ಳುವುದಿಲ್ಲ. ಏನಾದರೂ ಆಗಲಿ ಸಾಧಿಸುವೆನು" ಎಂದರು. ಅವರಾಡಿದ ಮಾತು ಅಸತ್ಯವಲ್ಲ ಎಂಬುದನ್ನು ನಿಜ ಎಂದು ಹೇಳಬೇಕೆಂದೋ ಎಂಬಂತೆ, ಕಣ್ಣುಗಳಿಂದ ನೀರು ಹನಿಹನಿಯಾಗಿ ಕೆಳಕ್ಕೆ ಇಳಿಯಿತು.

ಆಚಾರ್ಯರ ಕಣ್ಣಲ್ಲಿ ನೀರು ಧಾರೆಯಾಗಿ ಹರಿದುದನ್ನು ಕಂಡು ರಾಯರಿಗೆ ಆಶ್ಚರ್ಯವಾಯಿತು. ಅವರೂ ನೊಂದುಕೊಂಡು ವಿಶ್ವಾಸದಿಂದ ವಿಚಾರಿಸಿದರು. ಆಚಾರ್ಯರು ಶಾಂಭವಾನಂದರ ಕತೆಯನ್ನು ಸೂಕ್ಷ್ಮವಾಗಿ ಹೇಳಿದರು. ಆದರೆ ಹತ್ತುವರುಷದ ವಾಯಿದೆಯನ್ನು ಮಾತ್ರ ಹೇಳಲಿಲ್ಲ. ಅದನ್ನು ಕೇಳಿ ರಾಯರಿಗೆ ಆಶ್ಚರ್ಯವಾಯಿತು. ಅವರಿಗಿಂತಲೂ ಹೆಚ್ಚಾಗಿ ತೆರೆಯ ಮರೆ ಯಲ್ಲಿದ್ದವರು ಆಶ್ಚರ್ಯಪಟ್ಟರು. "ಹಾಗಾದರೆ ಕಾಣದ ಕೈಯಾಡಿಸಿ ದೈವವು ತಮ್ಮನ್ನೆಲ್ಲ ಕುಣಿಸುತ್ತಿರುವುದೇನು ? ತಾವು ಮರೆಯಲ್ಲಿ ಸೂತ್ರ ಹಿಡಿದು ಆಡಿಸುತ್ತಿರುವ ಸೂತ್ರಧಾರಿಯ ಕೈಗೊಂಬೆಗಳೇನು ?" ಎಂದು ಎಲ್ಲರೂ ವಿಚಾರಪರರಾದರು.

ಹಾಗೆಯೇ ಒಂದು ಗಳಿಗೆ ಕಳೆಯಿತು. ರಾಯರು ದೈವದ ಅದ್ಭುತ ವ್ಯಾಪಾರದ ಒಂದಂಶವನ್ನು ಪರ್ಯವಲೋಕಿಸಿ, ತಮ್ಮ ಸಂಕಲ್ಪಗಳೆಲ್ಲ ಅದರ ಪ್ರಚೋದನವೇ ಎಂದು ಮನಸ್ಸಿನಲ್ಲಿ ಭಾವಿಸುತ್ತ "ಹಾಗಾದರೆ ಮಾನವನ

ಸ್ಥಾನವೇನು ? ” ಎಂಬ ಬಗೆಹರಿಯದ, ಮುಳ್ಳುಮುರಿಯುವ ಪ್ರಶ್ನಕ್ಕೆ ಬಂದಿದ್ದರು. ಆಚಾರ್ಯರು ಆ ದಿನದ ನೆನಪಿನಲ್ಲಿ ಕರಗಿಹೋಗಿ ತಮ್ಮ ಅಸ್ತಿತ್ವವನ್ನೇ ಮರೆತು ಕುಳಿತಿದ್ದರು.

ಮತ್ತೆ ಆಚಾರ್ಯರಿಗೆ ಪ್ರಜ್ಞೆಯು ಮರಳಿ ಬಂದಂತಾಯಿತು. ಕಣ್ಣೂ ಮೂಗೂ ಒರೆಸಿಕೊಂಡು, ಹೊಸಬರಾದಂತಾಗಿ, ಅರಿಕೆ ಮಾಡಿದರು “ಅಪ್ಪಣೆಯಾಗಬೇಕು. ಮಹಾಪಾದದ ಅಪ್ಪಣೆಯೇ ವೇದವಾಕ್ಯವೆಂದು ತಲೆಯ ಮೇಲಿಟ್ಟುಕೊಂಡು ನೆರವೇರಿಸುತ್ತೇನೆ.”

ರಾಯರು ಅನ್ಯಮನಸ್ಕರಾಗಿದ್ದರು. ಆಚಾರ್ಯರು ತಾವು ಆಡಿದ ಮಾತನ್ನು ಇನ್ನೂ ಒಮ್ಮೆ ಆಡಿದರು. ಆಗಲೂ ರಾಯರು, “ಆಗಲಿ. ಹೇಳುತ್ತೇನೆ. ಪಂಪಾಪತಿಯೂ, ಭುವನೇಶ್ವರಿಯೂ ತಮ್ಮದೆಂದು ಪಾಲಿಸುವ ರಾಜ್ಯವನ್ನು ನನ್ನದು ಎಂಬ ಅಹಂಕಾರದಿಂದ ನಾನು ಹಾಳುಮಾಡುತ್ತಿರುವೆನೋ ಎಂಬ ದಿಗಿಲು ಹುಟ್ಟಿದೆ. ಶ್ರೀ ವಿದ್ಯಾರಣ್ಯಗುರುವರೇಣ್ಯರು ತಮ್ಮ ತಪೋಬಲವನ್ನೆಲ್ಲಾ ದಾನಮಾಡಿ ಸ್ಥಾಪಿಸಿದ ವಿಜಯನಗರದ ಸೇವಕನು ನಾನು, ರಕ್ಷಕನಲ್ಲ, ಎಂಬ ಉದಾತ್ತಭಾವ ನನಗಿದುವರೆಗೂ ಇರಲಿಲ್ಲವಲ್ಲಾ ಎಂದು ವ್ಯಥೆಪಡುತ್ತಿದ್ದೇನೆ. ಯೋಗೀಂದ್ರರು ರಕ್ಷಕರಾಗಿ ತೆರೆಯಮರೆಯಲ್ಲಿ ಇರುವಾಗ, ಕೈಗೆ ಸಿಕ್ಕಿದುದನ್ನು ಕೊಳ್ಳೆಹೊಡೆಯುವ ಪಾಳೆಗಾರನ ದುರ್ಬುದ್ಧಿಯು ನನಗೆ ಬಂತಲ್ಲಾ ! ಎಂದು ಸಂಕಟಪಡುತ್ತಿದ್ದೇನೆ. ದೈವ, ಅದರ ಸಂಕಲ್ಪವನ್ನು ಅರಿತು ಅದರಂತೆ ವರ್ತಿಸುವ ದೈವ ಸಮಾನರಾದ ತಪಸ್ವಿಗಳು, ಇವರು ವಹಿಸಿರುವ ಜಗತ್ತಿನ ಯೋಗಕ್ಷೇಮಭಾರವನ್ನು ನಾನೇ ಏಕಾಕಿಯಾಗಿ ವಹಿಸಿರುವಂತೆ ಭಾವಿಸಿಕೊಂಡು ಕುರೋಹಪಕ್ಷಿಯ ಗೂಳಿಗಿಂತ ಕಡೆಯಾಗಿ ಮೆರೆಯುತ್ತಿರುವೆನಲ್ಲಾ, ಎಂದು ಕೊರಗುತ್ತಿದ್ದೇವೆ. ಆಚಾರ್ಯ, ತಮ್ಮ ಕಥೆಯು ಇಂದು ನನಗೆ ಹೊಸಕಣ್ಣು ತಂದಿದೆ. ಇದ್ದ ಕಣ್ಣು ಬಿಡಿಸಿದೆ. ಇನ್ನು ಹೊಸ ಮನುಷ್ಯನಾಗಲು ಪ್ರಯತ್ನಿಸುತ್ತೇನೆ” ಎಂದು ಸಮಾಧಾನವಾಗಿ, ನಿಧಾನವಾಗಿ, ಮಾತು ಮಾತು ಎಣಿಸಿ ಈಚೆಗೆ ಇಡುವವರಂತೆ ನುಡಿದರು.

ಇನ್ನೂ ಒಂದು ಗಳಿಗೆ ಹಾಗೆಯೇ ಮೌನವು, ಸ್ತಬ್ಧತೆಯು ಆ ದರ್ಶನ ಮಂದಿರವನ್ನು ಆವರಿಸಿತ್ತು. ರಾಯರು ಆ ಸ್ತಬ್ಧತೆಯನ್ನು ಪ್ರಯತ್ನ

ಪೂರ್ವಕವಾಗಿ ಪರಿಹರಿಸುವವರಂತೆ ಥಟ್ಟನೆದ್ದು, "ಜೈ ಪಂಪಾಪತೇ! ಪ್ರಕೃತ ಮನುಸರಾಮಃ" ಎಂದು ನಗುತ್ತಾ, ಕಣ್ಣಿನಲ್ಲಿದ್ದ ಒಂದು ತೊಟ್ಟು ನೀರನ್ನು ಒರೆಸಿಕೊಳ್ಳುತ್ತಾ, "ನಿಜ, ವಿದ್ಯಾರಣ್ಯರು ಹೇಳಿದ್ದು ನಿಜ. 'ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಕೌಶಲಂ' ರಾಜ್ಯವನ್ನು ಕೌಶಲ್ಯದಿಂದ ಆಳಬೇಕಾದರೆ ಜ್ಞಾನಿಗೊಬ್ಬನಿಗೇ ಶಕ್ಯ. ಶ್ರೀ ಕೃಷ್ಣದೇವರಾಯರು ವ್ಯಾಸರಾಯ ಗುರುಗಳನ್ನು ಆಶ್ರಯಿಸಿದ್ದುದು ಸುಮ್ಮನಲ್ಲ. ನಾವು ನಮ್ಮ ಅಹಂಕಾರದಲ್ಲಿ ಅವರನ್ನೆಲ್ಲಾ ಕಡೆಗಣಿಸಿ ವಿಜಯನಗರಕ್ಕೆ ಮೃತ್ಯುಗಳಾದೆವು" ಎಂದು ಮನಸ್ಸಿನ ಸಂಕಟವನ್ನು ಅಷ್ಟು ಹೊರಗೆಡಹಿ, "ಆಚಾರ್ಯ, ಹಾಗಾದರೆ ನಮ್ಮ ಮಾತು ನಡೆಯಿಸಿಕೊಡುವಿರಷ್ಟೆ?" ಎಂದು ವಿನಯವಾಗಿ ಕೇಳಿದರು.

ಆಚಾರ್ಯರು ರಾಯರೆದ್ದಾಗಲೇ ಎದ್ದಿದ್ದರು. ಅವರ ಬಾಯಿಂದ ಹೊರಟ ಒಂದೊಂದು ಮಾತೂ ತಾನು ಹುಟ್ಟಿದೆಡೆಯಲ್ಲಿದ್ದ ಸಂಕಟವನ್ನು ಅವರ ಕಿವಿಗೂ ತಂದಿಟ್ಟು ಅದನ್ನು ಅವರ ಎದೆಗೆ ತುಂಬಿತು. ಈಗ ಇಬ್ಬರೂ ಸಮಾನದುಃಖಿಗಳಾಗಿದ್ದಾರೆ. ಆಚಾರ್ಯರು ಆ ತುಂಬಿದ ಮನದಲ್ಲಿ ಬೇರೆ ಯೋಚನೆಯೇ ಮಾಡದೆ, ತಡವೂ ಇಲ್ಲದೆ ಕೂಡಲೇ ಹೇಳಿದರು, "ಅಪ್ಪಣೆಯಾಗಲಿ ಪ್ರಭು."

"ಗೋಲ್ಕೊಂಡದ ಸುಲ್ತಾನರು ಸಂಗೀತಪ್ರಿಯರು. ಚಿನ್ನಾಸಾನಿಯ ಸಂಗೀತವನ್ನು ತಮ್ಮ ದರ್ಬಾರಿನಲ್ಲಿ ನಡೆಸುವುದಕ್ಕಾಗಿ ತಮ್ಮ ಬಂಧುಗಳಾದ ಷಾಹಿ ಸುಲ್ತಾನರ ದ್ವೇಷವನ್ನು ಕಟ್ಟಿಕೊಳ್ಳುವುದಕ್ಕೂ ಸಿದ್ಧರಾಗಿದ್ದಾರೆ. ನಾವು ಇದುವರೆಗೂ ಬೆಕ್ಕಿನ ಮೇಲೆ ನಾಯಿ, ನಾಯಿಯ ಮೇಲೆ ಬೆಕ್ಕು ಹಾಕಿ, ಅವವೇ ಕಾದಾಡಿಕೊಳ್ಳುವಂತೆ ಮಾಡಿ ನಮ್ಮ ರಾಜ್ಯವನ್ನು ರಕ್ಷಿಸಿಕೊಂಡಿದ್ದೇವೆ. ಈಗ ದೈವಾಯತ್ತವಾಗಿ ಗೋಲ್ಕೊಂಡದ ಸುಲ್ತಾನರ ಶಾಂತಿ ಸಂಧಾನಪ್ರಯತ್ನ ನಡೆದಿದೆ. ಅದರಲ್ಲಿ ಒಂದು ನಿರ್ಬಂಧವಿದೆ. ಅದು ಚಿನ್ನಳು ಅಲ್ಲಿಗೆ ಹೋಗಿ ಸಂಗೀತದ ಕಛೇರಿಮಾಡಬೇಕು. ಅವಳು ಹೋಗಬೇಕಾದರೆ ತಾವೂ ಹೋಗಬೇಕು. ಅಲ್ಲಿ ತಮ್ಮ ಮನಸ್ಸಿಗೆ ವಿರುದ್ಧವಾಗಿ ಮ್ಲೇಚ್ಛರೊಡನೆ ವ್ಯವಹಾರಮಾಡಬೇಕು. ತಮ್ಮನ್ನು ಆ ಕೆಲಸಕ್ಕೆ ನಿಯೋಜಿಸಲೂ ಆರೆ: ಹಾಗೆಂದು ಸುಮ್ಮನೆ ಇರಲೂ ಆರೆ. ಇದು ನನ್ನ ಧರ್ಮಸಂಕಟ."

ಆಚಾರ್ಯರು ನಿಟ್ಟುಸಿರು ಬಿಟ್ಟು ಹೇಳಿದರು, "ಮಹಾಪ್ರಭು, ಶಾಂಭವಾನಂದರು ಬಂದುಹೋದಮೇಲೆ ನನಗೆ ಜ್ಞಾನೋದಯವಾಗಿದೆ. ನಾವು ಈಶ್ವರನನ್ನು ಪೂಜೆ ಮಾಡುವಾಗ ಜಗದೀಶ್ವರ ಎನ್ನುತ್ತೇನೆ. ಆ ಈಶ್ವರನು ಈಶ್ವರನಾಗಿರುವ ಜಗತ್ತಿನಲ್ಲಿ ಮ್ಲೇಚ್ಛನೂ ಸೇರಿಲ್ಲವೆ? ಆ ಬ್ರಹ್ಮಾಂಡ ಭಾಂಡೋದರನೆಂಬ ಮಹಾಪ್ರಭುವಿನ ಜಗತ್ತಿನಲ್ಲಿ ಅಣುರೇಣುತೃಣಕಾಷ್ಟಗಳು ಅವನೇ ಎನ್ನುವ ನಾವು ಮ್ಲೇಚ್ಛನಲ್ಲಿ ಅವನನ್ನು ಕಾಣದಿದ್ದರೆ ಅದು ನಮ್ಮ ತಪ್ಪೇ ಹೊರತು ಅದು ಸ್ವಾಮಿಯ ದ್ರೋಹವಲ್ಲ. ಅಲ್ಲದೆ ಮಹಾಪ್ರಭು, ವ್ಯಕ್ತಿವ್ಯಕ್ತಿಯೆಂಬ ಸಾಮಾನ್ಯದೃಷ್ಟಿಯಿಂದ ನೋಡಿಕೊಂಡು ಬಂದ ಪ್ರಜ್ಞೆಯಲ್ಲಿ ಭೇದವನ್ನು ಒಪ್ಪಿಕೊಳ್ಳಲೇಬೇಕಾದವರೂ, ಅಲ್ಲಿರುವ ವಿಶೇಷಗಳನ್ನು ಕಂಡಾಗ ಆ ವಿಶೇಷಗಳೆಲ್ಲವೂ ಸ್ವಾಮಿಯದೇ ಎಂದು ಅಂಗೀಕರಿಸಬೇಕಲ್ಲವೇ? ಯದ್ಯದ್ವಿಭೂತಿಮತ್ಸತ್ವಂ ಶ್ರೀ ಮದೂರ್ಜಿತಮೇವವಾ । ತತ್ತದೇವಾವ ಗಚ್ಛತ್ವಂ ಮಮತೇಜೋಂಶಸಂಭವಂ ॥ ಎಂದು ಎಲ್ಲಿ, ಏನು ವಿಶೇಷವನ್ನು ಕಂಡರೂ ಅದು ನನ್ನ ಅಂಶ ಎಂದು ತಿಳಿ ಎಂದು ಸ್ವಾಮಿಯೇ ಅಪ್ಪಣೆ ಕೊಡಿಸಿರುವಾಗ, ಭೇದ, ಅಭೇದ ಎರಡನ್ನೂ ಒಪ್ಪಿಕೊಳ್ಳುವುದೇ ಸರಿ ಎಂದು ನನಗೆ ತೋರುತ್ತಿದೆ ಮಹಾಸ್ವಾಮಿ. ಆಚಾರನಿಷ್ಠೆಗಳಲ್ಲಿ, ವ್ಯವಹಾರಗಳಲ್ಲಿ ಅವರೂ ನಾವೂ ಬೇರೆ ಬೇರೆಯೇ ನಿಜ. ನಾವು ಪತಿ ಎಂದರೆ ಅವರು ಪ್ರೇತಿ ಎನ್ನುವುದೂ ನಿಜ. ಆದರೂ ಅವರೂ ದೇವರ ಮಕ್ಕಳೇ ಎಂಬ ಭಾವನೆ ಸತ್ಕುಲಪ್ರಸೂತರೂ, ಸತ್ಸಂಪ್ರದಾಯದಲ್ಲಿ ಸುಶಿಕ್ಷಿತರೂ ಆದ ನಮಗೆ ಬರದಿದ್ದರೆ ಅದು ನಿಜವಾಗಿಯೂ ದ್ರೋಹ ಎನ್ನಿಸುತ್ತಿದೆ. ಮಹಾಸ್ವಾಮಿ, ಅದರಿಂದ ಇದುವರೆಗೂ ಇದ್ದ ಹಟವನ್ನು ಬಿಟ್ಟುಕೊಟ್ಟಿದ್ದೇನೆ. ಇನ್ನುಮೇಲೆ ಎಲ್ಲಿ ಯಾರಿಗೆ ಕೈಮುಗಿದರೂ ಅಲ್ಲಿ ಆ ನಮಸ್ಕಾರವನ್ನು ಪರಿಗ್ರಹಿಸುವವನು ಸ್ವಾಮಿಯೇ! ಸ್ವಾಮಿಗಲ್ಲದೆ ಇನ್ನು ಇತರರು ಯಾರಿಗೂ ನಮಸ್ಕಾರ ಸ್ವೀಕಾರ ಮಾಡಲು ಅರ್ಹತೆಯಿಲ್ಲ ಎಂದುಕೊಂಡು ಅದೇ ನಂಬಿಕೆಯಿಂದ ಕೈಮುಗಿಯುತ್ತೇನೆ. ಇಲ್ಲಿ ತಮ್ಮ ಉಪ್ಪು ತಿಂದು ಬೆಳೆದವನಾದ್ದರಿಂದ, ತಾವು ಏನು ಕೆಲಸ ಮಾಡಿಕೊಂಡು ಬಾ ಎಂದರೆ ಅದನ್ನು ಮಾಡುತ್ತೇನೆ. ಇನ್ನು ಮುಂದೆ ನನ್ನ ಅಹಂಕಾರವನ್ನು ಮುರಿದು ಒಟ್ಟುತ್ತೇನೆ. ಇದುವರೆಗೆ ಧರ್ಮದ ಹೆಸರಿನಲ್ಲಿ ನಾನು ಮೋಸ ಮಾಡಿಕೊಂಡುದು ಸಾಕು. ಇನ್ನು ಎಲ್ಲೆಲ್ಲೂ

ಇರುವನೆಂದು ಬಾಯಲ್ಲಿ ಹೇಳುತ್ತಿದ್ದ ಮಾತು ನಿಜವಾಗಲೆಂದು ಆ ನನ್ನ ಈಶ್ವರನನ್ನು ಎಲ್ಲೆಲ್ಲೂ ಕಾಣಲು ಯತ್ನಿಸುತ್ತೇನೆ. ಈ ದೃಷ್ಟಿಯಿಂದ, ವಾಸನಾತ್ ವಾಸುದೇವಸ್ಯವಾಸಿತಂ ತೇ ಜಗತ್ತ್ರಯಂ । ಸರ್ವಭೂತನಿವಾಸೋಸಿ ವಾಸುದೇವ ನಮೋಸ್ತುತೇ ॥ ಎಂದು ಎಲ್ಲರಿಗೂ ಕೈ ಮುಗಿಯುತ್ತೇನೆ. ಅದರಿಂದ, ಗೋಲ್ಕೊಂಡಕ್ಕೆ ಹೋಗಿಬರುವುದು ನನ್ನ ಪ್ರತಿಜ್ಞೆಗೆ ವಿರೋಧವಲ್ಲ. ಅಪ್ಪಣೆಯಾಗಲಿ" ಎಂದು ಕೈಮುಗಿದರು.

ರಾಯರಿಗೆ ಹೃದಯದ ಭಾರವೆಲ್ಲ ಇಳುಹಿದಂತಾಗಿ ನೆಮ್ಮದಿಯ ನಿಟ್ಟುಸಿರು ಬಂತು. ನಿಟ್ಟುಸಿರು ಕರೆದು, "ಆಚಾರ್ಯ, ತಾವು ಇಷ್ಟು ಸುಲಭವೆಂದು ನಾನು ಭಾವಿಸಿರಲಿಲ್ಲ. ತಾವು ನಮಗೆ, ನಮ್ಮ ರಾಜ್ಯಕ್ಕೆ, ನಮ್ಮ ಪ್ರಜಾವರ್ಗಕ್ಕೆ ಬಲುದೊಡ್ಡ ಉಪಕಾರ ಮಾಡಿದಿರಿ. ಈ ಉಪಕಾರ ನಮಗಿಂತಲೂ ನಮ್ಮ ಮುಂದಿನ ಪೀಳಿಗೆಯವರು ಹೆಚ್ಚಾಗಿ ಹೊಗಳುವರು. ತಾವು ಒಂದು ಯುದ್ಧವನ್ನು ತಪ್ಪಿಸಿದಿರಿ. ಬಂದಿದ್ದ ಮಾರಿಯನ್ನು ಹೊರಕ್ಕೆ ನೂಕಿದಿರಿ" ಎಂದು ಬಹುವಾಗಿ ಉಪಚಾರಮಾಡಿ, ಕೊನೆಯ ಮಾತಾಗಿ, "ಆಯಿತು, ತಮ್ಮ ಶಿಷ್ಯಳು ಏನೆನ್ನುವಳೋ? ಅವಳು ಜಪ್ಪಯ್ಯಾ ಎಂದರೆ ಒಪ್ಪುವವಳಲ್ಲವಲ್ಲ! ಅದನ್ನು ಹೇಗೆ ಮಾಡುವುದು? ಅವಳನ್ನು ಒಪ್ಪಿಸುವುದು ಹೇಗೆ?" ಎಂದು ಕೇಳಿದರು.

ಆಚಾರ್ಯರು ಚಿನ್ನಳ ಹೆಸರನ್ನು ಕೇಳುತ್ತಲೇ ಬಿಸಿ ಹಾಲಿನಲ್ಲಿ ಅದ್ದಿದ ರೊಟ್ಟಿಯಂತೆ ಮೃದುವಾಗಿ ಹೋದರು. "ಮಹಾಪ್ರಭು, ಎಷ್ಟೇ ಆಗಲಿ ಹೆಂಗಸು. ಅಲ್ಲದೆ ಏಕಾಂತದಲ್ಲಿ, ಅಂತಃಪುರದಲ್ಲಿ ಲೋಕವ್ಯವಹಾರ ಜ್ಞಾನವಿಲ್ಲದೆ ಬೆಳೆದವಳು. ಆಶ್ರಿತರ ಮೇಲೆ ಪ್ರಭುವಿಗೆ ಅಪಾರವಾದ ಮಮತೆಯಿಲ್ಲದಿದ್ದರೆ ಅವರು ಉಳಿಯುವುದಾದರೂ ಹೇಗೆ? ಮಹಾಪ್ರಭುಗಳು ಈ ವಿಚಾರದಲ್ಲಿ ಮಾತೃವಿಗಿಂತ ಹೆಚ್ಚು ವಾತ್ಸಲ್ಯವನ್ನು ತೋರಿಸಬೇಕು. ಅವಳು ಹಟ ಹಿಡಿದರೂ ನಯಭಯಗಳಿಂದ ಒಪ್ಪಿಸಬೇಕು. ದೇವರು ಮನಸ್ಸು ಮಾಡಬೇಕು. ಸನ್ನಿಧಾನದ ಅಪ್ಪಣೆಗೆ ಅವಳು ಎಂದಿಗೂ ವಿರೋಧವಾಗಿ ಹೋಗಲಾರಳು. ಅಲ್ಲದೆ ರಾಜ್ಯಕ್ಷೇಮಕ್ಕಾಗಿ ಈ ಕೆಲಸವೆಂದರೆ ಆತ್ಮಾರ್ಪಣ ಮಾಡುವುದಕ್ಕೂ ಸಿದ್ಧರಾಗಿರುವವರು ತಾನೇ ತಮ್ಮ ಪ್ರಜೆಗಳೆಲ್ಲ!" ಎಂದು ವಿನಯವಾಗಿ ಹೇಳಿದರು.

ಆಚಾರ್ಯರ ಶಿಷ್ಯವಾತ್ಸಲ್ಯ, ಅವಳನ್ನು ವಹಿಸಿಕೊಂಡು ಅವರು ನುಡಿಯುವ ರೀತಿ, ಮೊದಲಾದವೆಲ್ಲ ಅವರ ಮನಸ್ಸಿಗೆ ಬಹಳ ಹಿಡಿಯಿತು. ಆ ಮೃದುವಾದ ಭಾವದಲ್ಲಿ ಅವರಿರುವಾಗ, ಆಚಾರ್ಯರು, "ಮಹಾಸ್ವಾಮಿಯವರು ಆಕೆಯನ್ನು ಕರೆಸೋಣವಾಗಲಿ. ಏನು ಹೇಳುವಳೋ ನೋಡೋಣ" ಎಂದರು.

ಚಕ್ರವರ್ತಿಗಳ ಅಪ್ಪಣೆಯಾಯಿತು; ಚಿನ್ನಾಸಾನಿಯು ಸಮ್ಮುಖಕ್ಕೆ ಬಂದಳು.

# ಅಧ್ಯಾಯ ಒಂಭತ್ತು

ಚಿನ್ನಾಸಾನಿಯು ಚಕ್ರವರ್ತಿಗಳ ಸನ್ನಿಧಿಯಲ್ಲಿ ತಲೆಬಾಗಿ ನಿಂತು, "ಮಹಾಪಾದಗಳಿಗೆ ಜಯವಾಗಲಿ, ಈಗ ನಾನು ಮೊದಲು ಯಾರಿಗೆ ನಮಸ್ಕಾರ ಮಾಡಬೇಕು ಎನ್ನುವುದನ್ನು ಪ್ರಭುಗಳೇ ಅಪ್ಪಣೆ ಕೊಡಿಸಬೇಕು. ಇಲ್ಲಿ ಗುರುಗಳು. ಇಲ್ಲಿ ಸನ್ನಿಧಾನ. ಅಪ್ಪಣೆಯಾದಂತೆ ನಡೆಯಲು ಸಿದ್ಧಳಾಗಿದ್ದೇನೆ" ಎಂದು ಕೈಮುಗಿದಳು. ಚಕ್ರವರ್ತಿಗಳು "ಮೊದಲು ಅಲ್ಲಿ, ಆಮೇಲೆ ಇಲ್ಲಿ" ಎಂದರು. ಅದರಂತೆ ಅವಳು ನಾಟ್ಯದಿಂದ ಮೊದಲು ಗುರುಪೂಜೆಯನ್ನು ಒಪ್ಪಿಸಿ, ಅವರ ಅಪ್ಪಣೆ ಪಡೆದು ಸಮ್ರಾಜರಿಗೂ ನಾಟ್ಯದಿಂದಲೇ ಪೂಜೆ ಕಾಣಿಕೆಗಳನ್ನು ಒಪ್ಪಿಸಿದಳು. ಅವರ ಅಪ್ಪಣೆ ಯಾದಂತೆ ಹಾಸಿದ್ದ ರತ್ನಗಂಬಳಿಯಮೇಲೆಯೇ ಕುಳಿತುಕೊಂಡಳು. ಅವಳ ವಿನಯವನ್ನು ಕಂಡು ರಾಯರು "ನಿಜವಾಗಿಯೂ ಇವಳಲ್ಲಿ ನಮ್ಮ ಮಾತು ಕೇಳದಿರುವಷ್ಟು ಹಟವಿದೆಯೇ ?" ಎಂದು ಆಶ್ಚರ್ಯಪಟ್ಟರು.

ಚಿನ್ನಳು ಮತ್ತೆ ಎದ್ದು ಕೈಮುಗಿದುಕೊಂಡು "ಮಹಾಸನ್ನಿಧಾನದ ಅಪ್ಪಣೆಯಾಯಿತಂತೆ. ಮಹಾಪಾದದ ಉಪ್ಪಿಂದ ವಾಸಿ ಅಪ್ಪಣೆಯನ್ನು ನೆರವೇರಿಸಲು ಸಿದ್ಧಳಾಗಿದ್ದಾಳೆ" ಎಂದು ಭಕ್ತಿಯಿಂದ ಕೈಮುಗಿದಳು.

ರಾಯರು ಕೇಳಿದರು. "ಚಿನ್ನಾಸಾನಿ, ನಿನ್ನಿಂದ ಈ ಸಲ ಈ ಸಾಮ್ರಾಜ್ಯವು ಒಂದು ಸೇವೆಯನ್ನು ಬಯಸುತ್ತಿದೆ. ಒಂದು ರಾಜಕಾರ್ಯವು ನಿನ್ನಿಂದ ಆಗಬೇಕಾಗಿದೆ. ಮಾಡಿಕೊಡುವೆಯಾ ?"

"ಮೊದಲೇ ಅರಿಕೆಮಾಡಿದ್ದೇನೆ. ಮಹಾಪಾದದಲ್ಲಿ ನಮ್ಮಂಥವರ ಸ್ಮರಣೆ ಬರುವುದೇ ನಾವು ಮಾಡಿದ ಪುಣ್ಯದ ಗುರುತು. ಯಾವ ಜನ್ಮದಲ್ಲಿ ಮಾಡಿದ ಮಹತ್ಪುಣ್ಯದ ಫಲವೋ ಈ ಪಂಪಾಕ್ಷೇತ್ರದಲ್ಲಿ ಜನಿಸಿ, ಭಕ್ತ ಪರಾಧೀನನಾದ ಪಂಪಾಧೀಶ್ವರನ ಅನುಗ್ರಹಮೂರ್ತಿಯೆನ್ನಿಸಿಕೊಂಡಿರುವ ವಿಜಯನಗರಾಧೀಶ್ವರರನ್ನು ಸೇವಿಸುವ ಭಾಗ್ಯ ದೊರೆತಿದೆ. ಅದೇ ಪುಣ್ಯವೇ ಈಗ ಇನ್ನೂ ಒಂದು ವಿಧವಾಗಿ ಅತಿಶಯವಾದ ಸೇವೆಯನ್ನು ಸಲ್ಲಿಸಿ, ಕೃತಾರ್ಥಳಾಗುವ ಅವಕಾಶವನ್ನು ಒದಗಿಸಿಕೊಟ್ಟಿದ್ದರೆ ಅದನ್ನು ಬೇಡವೆನ್ನು

ವಷ್ಟು ಮೂರ್ಖಳಾಗಲೇ ? ದಾಸಿಯು ಚರಣ ಸೇವೆಗೆ ಸರ್ವಥಾ ಸಿದ್ಧಳು."

ರಾಯರು ಆಚಾರ್ಯರ ಮುಖ ನೋಡಿದರು. ಅವರ ಅಭಿಪ್ರಾಯದಂತೆ ಅವರು ಕೇಳಿದರು, "ರಾಜಾಜ್ಞೆಯು ನಿನ್ನ ಮನಸ್ಸಿನಲ್ಲಿರುವುದಕ್ಕೆ ವಿರುದ್ಧ ವಾಗಿದ್ದರೂ ನಡೆಸುವೆಯಾ ಚಿನ್ನಮ್ಮ ?"

"ಗುರುದೇವ, ಗುರುಗಳೂ ರಾಜರೂ ವಿನಿಯೋಗವನ್ನು ಸರ್ವಥಾ ಬಲ್ಲರು. ನಹಿ ಚೂಡಾಮಣಿಃ ಪಾದೇ ಪ್ರಭವಾಮೀತಿ ಬಧ್ಯತೇ. ಚೂಡಾ ಮಣಿಯನ್ನು ಯಾರೂ ಕಾಲಿಗೆ ಕಟ್ಟಿಕೊಳ್ಳುವುದಿಲ್ಲವಷ್ಟೆ ?"

ಆಚಾರ್ಯರು ಅವಾಕ್ಕಾಗಿ, ಪೆಚ್ಚುನಗೆ ನಗುತ್ತಾ ಮುಂದಿನ ಮಾತು ತಮ್ಮಿಂದ ಸಾಧ್ಯವಿಲ್ಲವೆಂಬುವನ್ನು ದೃಷ್ಟಿಯಿಂದಲೇ ಅರಿಕೆಮಾಡಲು, ರಾಯರೇ ಕೇಳಿದರು, "ಆಯಿತು, ಚಿನ್ನಾನಾಸಿಯವರೇ, ಅಗತ್ಯವಾಗಿ ಆಗಬೇಕಾದ ಕಾರ್ಯದಲ್ಲಿ ವಿನಿಯೋಗ ಮರ್ಯಾದೆಯು ಸಡಲಬಾರದೇನು ? ಪರ್ವಕಾಲಗಳಲ್ಲಿ ಮೇರೆಯನ್ನು ಮೀರುವುದು ಸಮುದ್ರಕ್ಕೆ ಭೂಷಣವೇ ಅಲ್ಲವೇನು ?"

"ಮಹಾಪ್ರಭು, ಸಾಮಾನ್ಯವು ವಿಶೇಷದಿಂದ ಬಾಧಿತವಾಗುವುದೂ ಲಕ್ಷಣವೇ ಆದರೂ ರಾಜಧರ್ಮವು ಸಾಮಾನ್ಯವನ್ನು ಪಾಲಿಸುವುದಕ್ಕೆ ತಾನೇ ಇರುವುದು ?"

"ಆಯಿತು, ಚಿನ್ನಾ, ಅಲಂಕಾರೋಕ್ತಿಗಳು ಸಾಕು. ನೇರವಾಗಿ ಒಂದು ಮಾತು ಹೇಳು. ನಿನ್ನ ಮನಸ್ಸೊಪ್ಪದ ಕೆಲಸವೊಂದನ್ನು ನೀನುಮಾಡಿ, ನಮ್ಮ ಕಾರ್ಯವನ್ನು ಗೆಲ್ಲಬೇಕಾಗಿದೆ."

"ಅಂತಹ ಮುಖ್ಯಭೃಂಗನನ್ನು ಹಿಡಿದು ತರಬೇಕಾದ ಕೆಲಸ ಯಾವುದು ಇದೆಯೋ ಅಪ್ಪಣೆಯಾಗಲಿ. ನನ್ನಿಂದ ಆಗುವದಿದ್ದರೆ ಮಾಡಿಯೇಮಾಡುತ್ತೇನೆ. ಇನ್ನೇನು ನನ್ನ ಕೈಗೆ ಒಂದು ಸೈನ್ಯವನ್ನು ಕೊಟ್ಟು ಗೋಲ್ಕೊಂಡವನ್ನು ಗೆದ್ದು ಬಾ ಎನ್ನುವುದಿಲ್ಲವಲ್ಲ ?"

"ನಿನ್ನ ರಕ್ಷಣೆಗೆ ಒಂದು ಸೈನ್ಯವನ್ನು ಕೊಟ್ಟು ಕಳುಹಿಸುವೆವು. ನೀನು ಗೋಲ್ಕೊಂಡವನ್ನೇ ಗೆದ್ದು ಬರಬೇಕು."

"ಆ ವಿಚಾರ ಆಗಲೇ ಸನ್ನಿಧಾನದಲ್ಲಿ ಬಂದು ಇತ್ಯರ್ಥವಾಗಿ ಹೋಗಿದೆ ಯಲ್ಲಾ ?"

" ಅದೇ ಈಗ ಮತ್ತೊಂದು ರೂಪವಾಗಿ ಬಂದಿದೆ. ಅದೇ ಸಂದರ್ಭ ರೂಪಾಂತರದಲ್ಲಿ ಒದಗಿದೆ."

" ಅದೇ ಉತ್ತರವು ರೂಪಾಂತರದಲ್ಲಿ ಬಂದರೆ ಮಹಾಸನ್ನಿಧಿಗೆ ತೃಪ್ತಿಯಾಗುವುದೇನು ? "

" ಇಲ್ಲ. ಬೇರೆಯಾಗದಿದ್ದರೆ ಯತ್ನವಿಲ್ಲ."

" ತಂತಿ ಕಿತ್ತುಹೋದರೆ ವೀಣೆ ಬಾರಿಸುವುದಿಲ್ಲವಷ್ಟೆ ? "

" ನಿನ್ನ ಕಷ್ಟವೇನು ಹೇಳು. ಅದಕ್ಕೆ ಒಂದು ನಿವಾರಣೋಪಾಯವನ್ನು ಚಿಂತಿಸೋಣ."

" ಮೊದಲು ಏನಾಗಬೇಕು ಅಪ್ಪಣೆಯಾಗಲಿ. ಅನಂತರ ಮಿಕ್ಕುದೆಲ್ಲ ಯೋಚಿಸೋಣ."

" ಗೋಲ್ಕೊಂಡದ ನವಾಬರು ನಮ್ಮೊಡನೆ ಸಂಧಿಯನ್ನು ಮಾಡಿಕೊಳ್ಳಲು ಒಪ್ಪಿದ್ದಾರೆ. ಆದರೆ, ಸಂಧಿಯಾಗುವುದೂ, ಬಿಡುವುದೂ ನಿನ್ನ ಕೈಯಲ್ಲಿದೆ."

" ಎಂದರೆ ನಾನೇನು ಮಾಡಬೇಕು ? "

" ನೀನು ಹೋಗಿ ಅಲ್ಲಿ ಹಾಡಿಬರಬೇಕು."

" ಮಹಾಸನ್ನಿಧಾನದ ಅಪ್ಪಣೆಗೆ ಪ್ರತಿಯಾಗಿ ನುಡಿಯುವುದು ನನ್ನಿಂದ ಸಾಧ್ಯವಿಲ್ಲ. ಪ್ರಭುಗಳ ಅಪ್ಪಣೆಯು ನೆರವೇರುವುದು; ಜೊತೆಯಲ್ಲಿಯೇ ಚಿನ್ನಳಿಗೆ ರಾಜಾಜ್ಞೆಯನ್ನು ಪಾಲಿಸಿದುದರ ಫಲವಾಗಿ ದಿವ್ಯಶರೀರವು ಲಭಿಸಿತೆಂಬ ಶುಭಸಮಾಚಾರವೂ ಸನ್ನಿಧಾನಕ್ಕೆ ತಲಪುವುದು."

" ನೀನು ಹೀಗೆ ಹಟಮಾಡಿದರೆ ಆಗುವ ಹಾನಿಯೇನು ಬಲ್ಲೆಯಾ ? "

" ಹಟವೇನು ಬಂತು ? ಮಹಾಪ್ರಭು. ಸನ್ನಿಧಾನದ ಅಪ್ಪಣೆ ನೆರವೇರುವುದು. ವಿಜಯನಗರದ ಒಂದೇ ಒಂದು ಅನಾಥ ಪ್ರಾಣಿಯು ಇಲ್ಲವಾದರೆ ರಾಜಧಾನಿಗೆ ಏನೂ ಹಾನಿಯಾಗುವುದಿಲ್ಲ."

" ನಿನ್ನ ಕಷ್ಟವೇನು ಹೇಳು."

" ನನ್ನ ಕಷ್ಟವೇನು ಮಹಾಪ್ರಭು. ಈ ಪ್ರಭುವಿಗೆ ಮುಗಿದ ಕೈಗಳು ಇನ್ನೊಬ್ಬ ಪ್ರಭುವೆನ್ನಿಸಿಕೊಂಡವನಿಗೆ ಮುಗಿಯುವುದಿಲ್ಲ. ಅದು ನನ್ನ ವ್ರತ. ಊರೂಭಂಗದಲ್ಲಿ ಹೇಳುವಂತೆ " ಯೇನೈವಮಾನೇನಭುವಿಪ್ರಸೂತೋ ತೇನೈವ ಮಾನೇನ ದಿವಂ ಪ್ರಯಾಮಿ."

ತೆರೆಯ ಹಿಂದಿನಿಂದ ಯಾರೋ ಅವಸರವಸರವಾಗಿ ಹೊರಕ್ಕೆ ಓಡಿ ಬಂದು ಹೇಳಿದರು, "ಮಹಾಸ್ವಾಮಿ, ತಮಗೆ ಕೊರ್ನಿಸಾತ್ ಮಾಡಬೇಕಾಗಿಲ್ಲವೆಂದು ಸುಲ್ತಾನರು ಅಪ್ಪಣೆಕೊಡಿಸಿದ್ದಾರೆ."

ರಾಯರ ಮುಖವನ್ನು ಕಂಡು ತಾವು ಬಂದುದು ಅಪರಾಧವಾಯಿತೆಂದು ಸೆಟ್ಟರಿಗೆ ಎನ್ನಿಸಿತು. ಗಡಗಡ ನಡುಗಿಹೋದರು. ಮನ್ನಿಸಬೇಕೆಂದು ಅಡ್ಡ ಬಿದ್ದರು. ಚಿನ್ನಳಿಗೆ "ಈ ಸೆಟ್ಟರು ಇಲ್ಲಿ ಇರುವುದಕ್ಕೇನು ಕಾರಣ? ಅದೂ ತಾನೂ ಅವರೂ ಮಾತನಾಡುವಾಗ?" ಎನ್ನಿಸಿ ದೊರೆಯ ಮುಖವನ್ನು ನೋಡಿದಳು. ಅವಳ ಭಾವವನ್ನು ಗ್ರಹಿಸಿ, ಮನಸ್ಸಿನ ಅಸಮಾಧಾನವನ್ನೆಲ್ಲ ನುಂಗಿಕೊಂಡು, ಎಳೆನಗು ನಗುತ್ತಾ, "ಈಗ ಯಜವರ್ಮ ಸೆಟ್ಟರು ನಮ್ಮ ರಾಯಭಾರಿಗಳಾಗಿದ್ದಾರೆ. ಇತರರು ಸಾಧಿಸುವುದಕ್ಕೆ ಅಸಾಧ್ಯವಾಗಿದ್ದ ಕಾರ್ಯವನ್ನು ಅವರು ಸಾಧಿಸಿಕೊಂಡು ಬಂದಿದ್ದಾರೆ. ಅವರು ಸಾಧಿಸಿರುವ ಕಾರ್ಯ ಫಲಿಸುವುದೂ ಬಿಡುವುದೂ ನಿನ್ನನ್ನು ಸೇರಿದೆ. ನೀನು ಒಪ್ಪಿದರೆ ವಿಜಯನಗರಕ್ಕೆ ಒಂದು ಯುದ್ಧ ನಿಂತಿತು. ಅದು ಲಾಭ. ನೀನು ಒಪ್ಪದಿದ್ದರೆ ವಿಜಯನಗರಕ್ಕೆ ಒಂದು ಯುದ್ಧ. ಸೆಟ್ಟರಿಗೆ ವಜ್ರದಗಣಿ ಹೋಯಿತು."

ಚಿನ್ನಳು ಪೆಚ್ಚುಮುಖ ಹಾಕಿಕೊಂಡು ಕೈಯಲ್ಲಿ ತಲೆಯಿಟ್ಟುಕೊಂಡು ಕುಳಿತಳು. ಅವಳು ಹಾಗೆ ಕುಳಿತುದನ್ನು ಕಂಡು ಸರ್ವನಾಶವಾಯಿತೆಂದುಕೊಂಡು ಸೆಟ್ಟರು ತಾವು ರಾಜಸಮ್ಮುಖದಲ್ಲಿ ಇರುವುದನ್ನು ಕೂಡ ಮರೆತು ಹಾಗೆಯೇ ಅಲ್ಲಿಯೇ ಒಂದು ಆಸನದಲ್ಲಿ ಕುಸಿದುಬಿದ್ದರು. ಆ ಒಳಗುದಿಯನ್ನು ಕಂಡು ಆಚಾರ್ಯರು ದೊರೆಗಳಿಗೆ ಕೈಮುಗಿದು, "ಮಹಾಪ್ರಭು, ಚಿನ್ನಮ್ಮನಿಗೆ ಕೊಂಚ ಅವಕಾಶ ಬೇಕು ಅಷ್ಟೆ. ಅವಳ ರಾಜಭಕ್ತಿಯೂ, ವಿಜಯನಗರದ ಮೇಲಿನ ವಿಶ್ವಾಸವೂ ಅಪಾರವಾದವು" ಎಂದರು.

ರಾಯರು ಎತ್ತಲಿಂದಲೂ ಬಂದಿದ್ದ ಅಸಮಾಧಾನವನ್ನು ಪ್ರಕಟವಾಗಿ ತೋರಿಸುತ್ತ, ಬಿರಬಿರನೆ ಆಚಾರ್ಯರನ್ನು ನೋಡಿದರು. ಅವರು ರಾಜಪ್ರಸಾದವನ್ನು ಯಾಚಿಸುವ ವಿನಯದಿಂದ, "ಮಹಾಪ್ರಭು, ಸಾಕಿದ ಗಿಣಿಯು ಕಡಿಯಿತೆಂದು ಅದನ್ನು ಯಾರೂ ಕಡಿದು ಹಾಕುವುದಿಲ್ಲ. ಹಾಗೇ, ಅವಳಿಗೆ ಮಹಾಸ್ವಾಮಿಯವರು ನನಗೆ ವಿಧಿಸಿರುವ ಅಪ್ಪಣೆಯು ತಿಳಿಯದು. ಅದೂ ಅಪ್ಪಣೆಯಾಗಲಿ. ಅದು ತಿಳಿದರೆ, ಮುಂದಿನ ಕೆಲಸ ಸುಲಭವಾಗುವುದು."

ರಾಯರು ತಲೆದೂಗಿ ತಮ್ಮ ಸಮ್ಮತಿಯನ್ನು ಸೂಚಿಸಿ, ಒಂದು ಗಳಿಗೆ ಏನೋ ಚಿಂತಿಸಿ, " ಏನು ? ಸೆಟ್ಟರು ಏನು ಹೇಳುವರು ? " ಎಂದರು.

" ಮಹಾಪ್ರಭು, ರಾಜಾಜ್ಞೆಯನ್ನು ಈಕೆಯು ನೆರವೇರಿಸಿದರೆ, ಈಕೆಯ ಹೆಸರಿನಲ್ಲಿ ಪಂಪಾಪತಿಗೆ ಒಂದುತಿಂಗಳು ಉತ್ಸವವನ್ನು ನಡೆಸುತ್ತೇನೆ ಮಹಾಸ್ವಾಮಿ. ಮತ್ತು ವಜ್ರದ ಗಣಿಯ ಲಾಭದಲ್ಲಿ ಒಂದು ಪಾಲು ಈಕೆಗೆ ಕೊಡುತ್ತೇನೆ."

" ಪುಣ್ಯ, ಪುರುಷಾರ್ಥ, ಎರಡೂ ಲಾಭಗಳುಂಟು. ಇಹ, ಪರ ಗಳೆರಡಕ್ಕೂ ಸಾಧನ. ಆಯಿತು, ಆಚಾರ್ಯರೇ, ಏನು ಹೇಳಬೇಕೋ ತಾವೇ ಹೇಳೋಣವಾಗಲಿ."

" ಚಿನ್ನಮ್ಮ, ನಿನ್ನೆಯದಿನ ನಡೆದುದೆಲ್ಲವನ್ನೂ ನೆನೆಸಿಕೊ. ಮಹಾ ಸ್ವಾಮಿಯವರ ಅಪ್ಪಣೆಯಂತೆ ನಾನು ಗೋಲ್ಕೊಂಡದ ಆಸ್ಥಾನಕ್ಕೆ ಹೋಗಿ ಬರಲು ಒಪ್ಪಿಕೊಂಡಿದ್ದೇನೆ. ಬಾಯಲ್ಲಿ ಹೇಳುತ್ತಿದ್ದ ವೇದಾಂತ ಕೈಯಲ್ಲಿ ಆಚರಿಸುವುದಕ್ಕೂ ಒಪ್ಪಿದ್ದೇನೆ. ಎಷ್ಟಾದರೂ ನೀನು ಹೆಂಗಸು. ಹಟ ಹಿಡಿಯಬಾರದು. ನಾನು ಇರುವುದಿಲ್ಲವೆ? ಬಾ. ಹೋಗಿಬರೋಣ."

ಯತ್ನವಿಲ್ಲವೆಂದು ಮನಸ್ಸಿಗೆ ಖಚಿತವಾದಾಗ ಬರುವ ನಿಶ್ಚಿಂತೆಯ ಮನೋಭಾವದಲ್ಲಿ ಹೇಳಿದಳು. "ಗುರುಗಳು ಹೋಗುವಕಡೆ ಹೋಗುವುದಕ್ಕೆ ನನ್ನ ಅಭ್ಯಂತರವಿಲ್ಲ. ಅವರು ಮಾಡು ಎಂದ ಕೆಲಸ ಮಾಡಲು ಅಭ್ಯಂತರ ವಿಲ್ಲ. ಆದರೂ ಮಹಾಪ್ರಭು, ಬಲವಂತ ಮಾಡಬೇಡಿ. ನನಗೆ ಆ ತೋಳಗಳ ಗುಂಪಿಗೆ ಹೋಗುವುದಕ್ಕೆ ಇಷ್ಟವಿಲ್ಲ. ಅಲ್ಲಿಗೆ ಹೋದರೆ ನಾನು ಪ್ರಾಣ ಸಹಿತವಾಗಿ ಹಿಂತಿರುಗಿ ಬರುವ ಧೈರ್ಯ ನನಗಿಲ್ಲ."

ರಾಯರು ಸೆಟ್ಟರ ಮುಖ ನೋಡಿದರು. ಅವರು ಹೇಳಿದರು. " ಮಹಾಸ್ವಾಮಿ, ಸುಲ್ತಾನರ ಅಪ್ಪಣೆಯಾಗಿದೆ. ಅವರ ಮೂಲಬಲದ ಅಶ್ವದಳವೊಂದು ನಮ್ಮ ಜೊತೆಯಲ್ಲಿ ಅವರ ಗಡಿಯವರೆಗೂ ನಮಗೆ ಕಾವಲಾಗಿ ಬರುವುದು. ಅಲ್ಲದೆ, ಮಹಾಪ್ರಭು, ಈಕೆಯ ಒಂದು ಕೂದಲೂ ನೋಯದಂತೆ ಈಕೆಯನ್ನು ಇಲ್ಲಿಗೆ ತಂದು ಸೇರಿಸುವ ಭಾರ ನನ್ನದು. ಮಹಾಪ್ರಭು, ಏನಾದರೂ ಹೆಚ್ಚುಕಡಿಮೆಯಾದರೆ ನನ್ನ ಆಸ್ತಿಯೆಲ್ಲವನ್ನೂ,

ಒಂದುಕಾಸೂ ಬಿಡದೆ, ಅರಮನೆಯವರು ಮುಟ್ಟುಗೋಲು ಹಾಕಿಕೊಳ್ಳ ಬಹುದು."

"ಅವಳು ಪ್ರಾಣದಹಂಗು ತೊರೆದು ಹೊರಡಲಿ. ಆ ಪ್ರಾಣವನ್ನು ಅವಳಿಗಿಂತ ಭದ್ರವಾಗಿ ನೋಡಿಕೊಳ್ಳುವ ರಕ್ಷಕರೊಬ್ಬರನ್ನು ನಾವು ಇಟ್ಟು ಕೊಂಡಿದ್ದೇವೆ. ಅವರನ್ನು ಆ ಕಾರ್ಯಕ್ಕಾಗಿಯೇ ನಮ್ಮ ಅಂಗರಕ್ಷಕದಳವನ್ನು ಕೊಟ್ಟು ಕಳುಹಿಸಿಕೊಡುತ್ತೇವೆ. ಅವರು ನಮಗೆ ಬಂದಿದ್ದ ಆಪತ್ತನ್ನು ಪರಿಹರಿಸಿ ನಮ್ಮ ಪ್ರಾಣರಕ್ಷಣಮಾಡಿದ್ದಾರೆ. ಆದರಿಂದ ಅವರು ಈಕೆಯ ಪ್ರಾಣವನ್ನು ರಕ್ಷಿಸಬಲ್ಲರೆಂದು ನಮ್ಮ ನಂಬಿಕೆ. ಅವರೂ ಇಲ್ಲಿಯೇ ಇದ್ದಾರೆ. ರಾಯರೇ"

ಗೋಪಾಲರಾಯನು ಈಚೆಗೆ ಬಂದು, ನಾಚಿಕೆಯಿಂದ ಕೆಂಪೇರಿರುವ ಮುಖವನ್ನು ತಗ್ಗಿಸಿಕೊಂಡು, ರಾಯರಿಗೆ ಕೈಮುಗಿದನು. ರಾಯರು ಹೇಳಿದರು. "ಚಿನ್ನಾಸಾನಿಯವರೇ, ರಾಯರು ನಿನ್ನೆಯದಿನ ಸೀರೆಯುಟ್ಟು ಹೆಣ್ಣಾಗಿ ನಮ್ಮನ್ನು ಕೊಲ್ಲಬೇಕೆಂದು ಕಾದಿದ್ದವರನ್ನು ನಗರರಕ್ಷಕರಿಗೆ ಹಿಡಿದುಕೊಟ್ಟು ನಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ನಿಮ್ಮ ಜೊತೆಯಲ್ಲಿ ಗಂಡಾಗಿಯೇ ಬಂದು ನಿಮ್ಮನ್ನು ಕಾಯುತ್ತಾರೆ. ಸಾಲದೆ ಗುರುಗಳ ಆಶ್ರಯ ವಂತೂ ಇದ್ದೇ ಇದೆ. ಜೊತೆಗೆ ಸೆಟ್ಟರ ಸರ್ಪಕಾವಲು. ಈಗಲಾದರೂ ಹೋಗಿಬರುವಿರಾ ? ಒಪ್ಪಿಗೆಯೇ ?"

ಚಿನ್ನಾಸಾನಿಯು ಎದ್ದು ಚಕ್ರವರ್ತಿಗಳಿಗೆ ಪ್ರಣಾಮಮಾಡಿ ಕೇಳಿ ಕೊಂಡಳು. "ಇಷ್ಟುಹೊತ್ತೂ ಸನ್ನಿಧಿಯಲ್ಲಿ ಚಂಡಿಸಿದುದನ್ನು ಮರೆತುಬಿಡ ಬೇಕು. ದಾಸಿಯ ಅಪರಾಧವನ್ನು ಮನ್ನಿಸಬೇಕು."

ರಾಯರು ಏಕಾಂತದಲ್ಲಿ ಇದ್ದಿದ್ದರೆ ಅವಳನ್ನು ಹೇಗೆ ಸಂಭಾವಿಸು ತ್ತಿದ್ದರೋ ? ಅಂತೂ ಅವರ ಕಣ್ಣುಗಳಲ್ಲಿ ಹೊಳೆದ ಮಮತೆಯ ಭಾವವನ್ನು ಕಂಡು ಅವಳು ನಾಚಿ ತಲೆ ಬಗ್ಗಿಸಿದಳು. ಕೂಡಲೇ ದೊರೆಗಳು ವಿಷಯಾಂತರ ಮಾಡಬೇಕು ಎಂದುಕೊಂಡು, ರಾಯರನ್ನು ಕರೆದು, "ಎಲ್ಲರೂ ನಮಗೆ ಇಂದು ಆತ್ಮೀಯರಾದಿರಿ. ಎಲ್ಲಿ ? ನಿನ್ನೆಯ ದಿನದ ತಮ್ಮ ಸಾಹಸವನ್ನು ಇನ್ನೊಮ್ಮೆ ಹೇಳಿ. ಇವರೆಲ್ಲ ಕೇಳಿ ಸಂತೋಷಪಡಲಿ. ನಾವು ಇದುವರೆಗೂ ಯಾರಲ್ಲಿಯೂ ಹೇಳದೆ ಇದ್ದ ಒಂದು ವಿಶೇಷರಹಸ್ಯವನ್ನು ಹೇಳುತ್ತೇವೆ" ಎಂದರು.

ರಾಯರು ಹಿಂದಿನ ದಿನದ ರಾತ್ರಿಯಲ್ಲಿ ನಡೆದುದೆಲ್ಲವನ್ನೂ ವಿಸ್ತಾರವಾಗಿ ಚಾಚೂ ತಪ್ಪದೆ ಹೇಳಿದರು. ಎಲ್ಲರೂ ಕೇಳಿ ಅವಾಕ್ಕಾದರು. ರಾಜಧಾನಿಯಲ್ಲಿ ಅದೂ ಹಿಂದೂಗಳೇ, ರಾಯರ ಮೇಲೆ ಕೈಮಾಡುವುದಕ್ಕೆ ಸಿದ್ಧರಾಗಿದ್ದರು ಎಂಬುದನ್ನು ಕೇಳಿ ಅವರಿಗೆ ನಂಬುವುದೇ ಕಷ್ಟವಾಯಿತು. ಆ ವಿಚಾರವಾಗಿ ಅಷ್ಟುಹೊತ್ತು ಮಾತನಾಡಿ, ಅದನ್ನು ಬಿಟ್ಟು ದೊರೆಗಳು ತಮ್ಮ ಅಂತರಂಗದಲ್ಲಿದ್ದ ಗುಟ್ಟನ್ನು ಬಿಚ್ಚಿ ಹೇಳಿದರು. "ನಾವು ಯುದ್ಧಕ್ಕೆ ಸಿದ್ಧರಾಗಿದ್ದೇವೆ. ನಮ್ಮ ಸೈನ್ಯವು ಆಗಲೇ ಗೋವೆಯಿಂದ ಹೊರಟು ಸಹ್ಯಾದ್ರಿಯ ನೆತ್ತಿಯ ಮೇಲೆ ಕಾದು ನಿಂತಿದೆ. ಆದರೂ ನಾವು ತಡೆಯಲು ಒಂದು ಕಾರಣವಿದೆ. ವಿಜಯನಗರವೆಂದು ಈಗ ಅಭಿಮಾನಪಡುತ್ತಿರುವವರು ಆಂಧ್ರ, ಕರ್ಣಾಟಕರು ಮಾತ್ರ. ಚೋಳ, ಕೇರಳ, ಪಾಂಡ್ಯರಿಗೆ ನಾವು ಅಧಿರಾಜರು. ನಮ್ಮ ಏಟು ತಪ್ಪಿಸಿಕೊಳ್ಳುವಹಾಗಿಲ್ಲ. ಅದರಿಂದ ನಮ್ಮಮೇಲೆ ಭಕ್ತಿ. ವಿಜಯನಗರದ ಅರಸನ ವಜ್ರಮುಷ್ಟಿ ಸಡಿಲವಾದರೆ ಆಯಿತು.' ಅವರು ಸ್ವತಂತ್ರರಾಗಲು ಯತ್ನಿಸುತ್ತಿದ್ದಾರೆ. ಕೃಷ್ಣಾತೀರದಿಂದ ಅಲ್ಲಿ ಮೇಲೆ ಹಿಮಾಲಯದವರೆಗೂ ವ್ಯಾಪಿಸಿರುವ ಈ ಮ್ಲೇಚ್ಛರು ಅವರನ್ನು ತಡೆದಿಟ್ಟಿರುವ ವಿಜಯನಗರವನ್ನು ದಾಟಿ ಕೆಳಕ್ಕಿಳಿದರೆ, ಈ ಚೋಳ, ಪಾಂಡ್ಯ, ಕೇರಳರು ಇನ್ನೂ ನೂರರಷ್ಟಾದರೂ ಆ ಪ್ರವಾಹವನ್ನು ತಡೆಯಲು ಸಾಧ್ಯವಿಲ್ಲ ಎಂಬುದನ್ನು ಅವರು ಮರೆತಿದ್ದಾರೆ. ಅವರಿಗೆ ನಮ್ಮಲ್ಲಿ ಅಭಿಮಾನವಿಲ್ಲ. ಇದು ನಮ್ಮ ದುಃಖ. ನಾವು ಅತ್ತ ತುರುಕರಮೇಲೆ ಯುದ್ಧಕ್ಕಿಳಿದರೆ, ದಕ್ಷಿಣದವರು ದಂಗೆಯೆದ್ದರೆ, ನಾವು ಗೆಲ್ಲುವಂತಿಲ್ಲ; ಗೆದ್ದರೂ ಪ್ರಯೋಜನವಿಲ್ಲ. ಅದರಿಂದ, ನಾವು ಸಾಹಸ ಮಾಡಿ ಪುಣ್ಯನಗರವನ್ನು ಹಿಡಿದು, ಅಲ್ಲಿನ ಮಹಾರಾಷ್ಟ್ರ ಜನರಿಗೆ ಹುರಿದುಂಬಿಸಿ, ಅವರು ನಮ್ಮಲ್ಲಿ ಹಾಗ, ಅಷ್ಟಿಷ್ಟಾದರೂ ಅಭಿಮಾನಪಟ್ಟರೆ, ಈ ಬಹಮನೀ ಸುಲ್ತಾನರನ್ನು ಬೊಕ್ಕೆಯಲ್ಲಿ ಹಾಕುವುದು ಬಹು ಸುಲಭವಾಗುವುದು. ಆದರಿದು ದೀರ್ಘಕಾಲ ಸಾಧ್ಯ. ಹಿಂದಿನ ದೇವಗಿರಿಯ ಯಾದವರು, ಓರಂಗಲ್ಲಿನ ಕಾಕತೀಯರು, ಬೇಲೂರಿನ ಹೊಯ್ಸಳರು, ಒಟ್ಟುಸೇರಿ ಯಾವ ಕೆಲಸ ಮಾಡಬೇಕಾಗಿತ್ತೋ ಅದನ್ನು ಇಂದು ನಾವು ಸಾಧಿಸಲು ಯತ್ನಿಸುತ್ತಿದ್ದೇವೆ. ಪೃಥ್ವೀರಾಜನ ಡೆಲ್ಲಿಯಲ್ಲಿ ನಮ್ಮ ವರಾಹಧ್ವಜವನ್ನು ಸ್ಥಾಪಿಸಿ, ಸೂರೆ ಹೋಗಿರುವ ಸೌರಾಷ್ಟ್ರದ ಸೋಮನಾಥ ದೇವಾಲಯದಲ್ಲಿ ಮತ್ತೆ ಲಿಂಗವನ್ನು

ಪ್ರತಿಷ್ಠಾಪಿಸಿ, ಅಂಗವಂಗಗಳಿಂದ ಹಿಡಿದು ಕಾಬೂಲ್ ಕಂದಹಾರದವರೆಗೆ ಮತ್ತೆ ಹಿಂದೂರಾಜ್ಯವನ್ನು ಕಟ್ಟಿದಿದ್ದರೆ ಪೂಜ್ಯ ವಿದ್ಯಾರಣ್ಯರ ಆತ್ಮಕ್ಕೆ ಶಾಂತಿಯಾಗುವುದು ಎಂದೆಣಿಸಿದಿರಾ ? ಶ್ರೀ ಕೃಷ್ಣ ದೇವರಾಯರು ಯಾವ ಸಾಹಸದಿಂದ ಇತ್ತ ಓಢ್ರದೇಶವವರೆಗೂ ಸಾಧಿಸಿದರೋ ಅದೇ ಸಾಹಸವನ್ನು ಇನ್ನೂ ನಮ್ಮ ಸೇನೆಗಳು ಮರೆತಿಲ್ಲ. ಇನ್ನೂ ಆ ಹುರುಪು ಆರಿದಿಲ್ಲ. ಆ ಬಿಗಿ ಸಡಿಲಿಲ್ಲ. ಹಿಂದೆ ಚಾಲುಕ್ಯಸಮ್ರಾಟ್ ಪುಲಿಕೇಶಿಯು ಉತ್ತರದ ಶ್ರೀಹರ್ಷಸಮ್ರಾಟನು ನರ್ಮದೆಯ ದಕ್ಷಿಣಕ್ಕೆ ಕಾಲಿಕ್ಕದಂತೆ ತಡೆದು, ಗಂಗಾನದಿಯವರೆಗೆ ಅಟ್ಟಿಕೊಂಡು ಹೋಗಿದ್ದನೆಂಬ ಕಥೆಯನ್ನು ಈಗ ನಿಜಮಾಡುವ ಕಾಲಬಂದಿದೆ. ಅಲ್ಲಿ ಆರಾವಳೀ ಬೆಟ್ಟದ ಸಾಲಿನಲ್ಲಿ ರಾಜಪುತ್ರರು ಹುಲಿಗಳ ಹಾಗೆ ಕಾದಿದ್ದಾರೆ. ಈಗ ಪವಿತ್ರ ಭರತಖಂಡವು ಗೋಮಾಂಸಭಕ್ಷಕರಾದ ಈ ಮ್ಲೇಚ್ಛರ ಹಿಡಿತದಿಂದ ಪಾರಾಗುವ ಶುಭದಿನಗಳು ಸಮೀಪಿಸುತ್ತಿವೆ. ಇದಕ್ಕಾಗಿ ವಿಜಯನಗರವು ಈ ಬಹಮನೀ ಸುಲ್ತಾನರನ್ನು ಮೊದಲು ಸ್ವಾಹಾಮಾಡಿ ಮುಂದೆ ಹೊರಡಬೇಕಾಗಿದೆ. ಅವರೂ ದೀಪಜ್ವಾಲೆಯಲ್ಲಿ ಬೀಳಬರುವ ಪತಂಗಗಳಂತೆ ನಮ್ಮ ಮೇಲೆ ಬೀಳಲು ಯತ್ನಿಸುತ್ತಿದ್ದಾರೆ. ನಾವೂ ಕಾಯುತ್ತಿದ್ದೇವೆ. ಪಂಪಾಪತಿಯ ಕೃಪೆಯಿರಲಿ, ಭುವನೇಶ್ವರಿಯ ಅನುಗ್ರಹವಿರಲಿ. ಈಗ ಒದಗಿರುವ ಈ ಸಂಧಿಯ ಸುಯೋಗವನ್ನು ಉಪಯೋಗಿಸಿಕೊಂಡು ಪುಣ್ಯನಗರದ ಮಹಾರಾಷ್ಟ್ರರನ್ನೂ, ಓಢ್ರದೇಶದ ಉರಿಯರನ್ನೂ ಮಡುಲಿಗೆ ಹಾಕಿಕೊಂಡು, ನಮ್ಮ ಇಷ್ಟಾರ್ಥವನ್ನು ಸಾಧಿಸಿಕೊಳ್ಳೋಣ. ಆದರಿಂದ ತಾವೆಲ್ಲರೂ ದೊಡ್ಡಮನಸ್ಸು ಮಾಡಿ ಗೋಲ್ಕೊಂಡಕ್ಕೆ ಹೋಗಿಬನ್ನಿ. ಈಗ ನಾನು ಹೇಳಿದುದು ರಾಜರಹಸ್ಯ. ಗೋಪ್ಯವಾಗಿರಲಿ ಎಂದು ನಾವು ಹೇಳಬೇಕಾಗಿಲ್ಲವಲ್ಲ" ಎಂದರು.

ಆಚಾರ್ಯರು ಅದನ್ನು ಕೇಳಿ ನೀರವವಾಗಿ ರೋದಿಸಿದರು. ಚಿನ್ನಾಸಾನಿಯು ಬುಡುಬುಡಿಕೆಯವನು ಹೇಳಿದುದು ಇದೇನೋ ಎಂದು ಯೋಚಿಸುತ್ತಿದ್ದಳು. ಯಜಮಾನ ವೀರಪ್ಪಸೆಟ್ಟರು ಹಾಗಾದರೆ ಈ ಸಂಧಿ ಮುಂದಿನ ಮಹಾಯುದ್ಧದ ಪೀಠಿಕೆ ಎಂದು ಚಿಂತಾಗ್ರಸ್ತರಾಗಿ ಕೇಳುತ್ತಿದ್ದರು. ಒಬ್ಬನ ಮನಸ್ಸುಮಾತ್ರ ತನ್ನ ಮನೋರಮೆಯೊಡನೆ ಏಕಾಂತದಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತಾ, ಶೃಂಗಾರಸಾಗರದಲ್ಲಿ ಮುಳುಗಿ ತೇಲುತ್ತ, ಇವಳನ್ನು ಬಿಟ್ಟು ಹೋಗಿಬರಬೇಕಲ್ಲ ಎಂದು ಚಿಂತಿಸುತ್ತಿತ್ತು.

ರಾಜವೀಳೆಯಗಳು ಎಲ್ಲರಿಗೂ ಯಥೋಚಿತವಾಗಿ ಸಂದುವು. ರಾಜಾಜ್ಞೆಯಿಂದ ಎಲ್ಲರಿಗೂ ಶಾಲುಜೋಡಿಗಳ ಖಿಲ್ಲತ್ತುಗಳೂ ದೊರೆತುವು. ಎಲ್ಲರೂ ಚಕ್ರವರ್ತಿಗಳ ಅಪ್ಪಣೆಯನ್ನು ಪಡೆದು ಬೀಳ್ಕೊಂಡು ಬಂದರು.

ಚಿನ್ನಾಸಾನಿಯು ಎಲ್ಲರಿಗಿಂತ ಹಿಂದೆ ಹೋದಳು. ಹೋಗುತ್ತಿದ್ದವಳು ಹಿಂದಿರುಗಿ ನೋಡಿ, ದರ್ಶನಮಂದಿರದಲ್ಲಿ ಯಾರೂ ಇಲ್ಲದುದನ್ನು ಕಂಡು ರಾಯರ ಮುಖದ ಕಡೆಗೆ ಕೈಯೆತ್ತಿ ಕೋಪದಿಂದ ನೋಡಿ, ಮೂತಿಯನ್ನು ಕುದುರೆಯಂತೆ ಮಾಡಿಕೊಂಡು, ತಲೆಯ ಪಕ್ಕದಲ್ಲಿ ನೆಟಿಕೆ ಮುರಿದು, ನಕ್ಕು ಹೊರಟುಹೋದಳು. ರಾಯರಿಗೆ ಆ ಹೋಗುವ ವೈಖರಿಯನ್ನು ಕಂಡು "ಆ ಹಾಳು ಪ್ರಾರಬ್ಧ ಇಲ್ಲದಿದ್ದರೆ ಇವಳನ್ನು ಸುಖವಾಗಿ ರಾಣಿವಾಸಕ್ಕೆ ಸೇರಿಸಿಕೊಳ್ಳಬಹುದಾಗಿತ್ತು. ಈ ರೂಪ, ಈ ಲಾವಣ್ಯ, ಈ ಸೊಗಸು ಯಾರಿಗುಂಟು? ರಾಜಸ್ತ್ರೀಯರಿಗೂ ಈ ಸೌಭಾಗ್ಯವಿಲ್ಲವಲ್ಲಾ!" ಎಂದು ನಿಟ್ಟುಸಿರು ಕರೆಯುತ್ತಾ ನಿಂತುಕೊಂಡರು.

ಹಾಗೇ ಒಂದು ಅಷ್ಟುಹೊತ್ತು ಅದೇ ಧ್ಯಾನದಲ್ಲಿದ್ದು ಎಚ್ಚರಗೊಂಡು ಕೈತಟ್ಟಿದರು. ರಾಯರ ಸ್ವಂತ ಕಾರಭಾರಿಯು ಬಂದು ಕೈಮುಗಿದನು. ರಾಯರು ಹೇಳಿದರು, "ಇದು ಅವಸರದ ಕಾರ್ಯ. ಕೂಡಲೇ ಆಗಬೇಕು. ಸೆಟ್ಟರು ರಾಜಧಾನಿಯಿಂದ ಹೊರಡುವಾಗಲೇ ರಾಯಭಾರಿಯ ಮರ್ಯಾದೆಗಳೊಡನೆ ಒಂಟೆಯ ಸಾರೋಟಿನಲ್ಲಿ ಹೊರಟು ನೇರವಾಗಿ ಗೋಲ್ಕೊಂಡಕ್ಕೆ ಹೋಗಲಿ. ಅಲ್ಲಿರುವ ರಾಯಭಾರಿಯು ಸೆಟ್ಟರನ್ನು ಮಾನಸ್ಕಂಧರಂತೆ ಭಾವಿಸಿ ನಡೆಯತಕ್ಕದು. ಭರತಾಚಾರ್ಯರು ಅವರ ಶಿಷ್ಯರೊಡನೆಯೂ, ಮಿತ್ರರೊಡನೆಯೂ; ಕುದುರೆಯ ಸಾರೋಟುಗಳಲ್ಲಿ, ನಮ್ಮ ಮೂಲಬಲದ ಅಶ್ವವೊಂದರ ರಕ್ಷಣೆಯಲ್ಲಿ ಸುಖಪ್ರಯಾಣ ಬೆಳೆಸತಕ್ಕದು. ದಾರಿಯುದ್ದಕ್ಕೂ ಆಚಾರ್ಯರಿಗೆ ಒಂದುದಿನವೂ ದೇವರಪೂಜೆ ತಪ್ಪಕೂಡದು. ಆಚಾರ್ಯರೂ, ರಾಯರೂ ಅರಮನೆಯ ಬಿರುದು ಪಡೆದವರು. ಚಿನ್ನಾಸಾನಿಯು ನಮ್ಮ ವಿಶೇಷಾನುಗ್ರಹಕ್ಕೆ ಪಾತ್ರಳು ಎಂಬುದನ್ನು ಗಮನದಲ್ಲಿಟ್ಟುಕೊಂಡು ಸರ್ವರೂ ಅವರಲ್ಲಿ ಅವರಿಗೆ ಸಂತೋಷವಾಗುವಂತೆ ನಡೆಯಬೇಕೆಂದು ನಮ್ಮಾಜ್ಞೆ. ಸೆಟ್ಟರು ಹೊರಡುವ ವೇಳೆಗೆ ಪಂಪಾಪತಿಗೂ, ಭುವನೇಶ್ವರಿಗೂ ವಿಶೇಷ ಪೂಜೆ ನಡೆದು, ರಾಜಮರ್ಯಾದೆಗಳೊಡನೆ ಪ್ರಸಾದವು ಅವರಿಗೆ ತಲಪಿರಬೇಕು.

ಅವರ ದಾರಿಯುವೆಚ್ಚಕ್ಕೆ ಐದು ಥೈಲಿಗಳು. ಭರತಾಚಾರ್ಯರಿಗೆ ದಾರಿಯು ವೆಚ್ಚಕ್ಕೆ ಹತ್ತು ಥೈಲಿಗಳು. ಇಲ್ಲಿ ದೇವಸ್ಥಾನಗಳಲ್ಲಿ ವಿಶೇಷಪೂಜೆ ನಡೆಸಿ, ಒಂದು ಸಮಾರಾಧನವನ್ನು ಮಾಡಿ, ಅವರು ಹೊರಡುವರು."

ಕಾರಭಾರಿಯು ಎಲ್ಲವನ್ನೂ ಗುರುತಿಸಿಕೊಂಡು ಹೊರಡುತ್ತಿದ್ದ ಹಾಗೆಯೇ ಚಿನ್ನಳು ಮತ್ತೆ ಬಾಗಿಲಲ್ಲಿ ಕಾಣಿಸಿಕೊಂಡಳು. ರಾಯರು ಪ್ರೀತಿಯಿಂದ ಕರೆದರು. ಬಂದು ಮತ್ತೆ ಕಾಲುಮುಟ್ಟಿ ಕಣ್ಣಿಗೆ ಒತ್ತಿಕೊಂಡು, "ನನ್ನ ದೇವರ ಅಪ್ಪಣೆಯಾದರೆ ಶ್ರೀ ಶೈಲದ ದೇವರ ದರ್ಶನಮಾಡಿ ಬರುತ್ತೇನೆ" ಎಂದು ವಿನಯವಾಗಿ ಬೇಡಿದಳು.

ರಾಯರು ಅವಳನ್ನು ಅಸೂಯೆಯಿಂದ ನೋಡುತ್ತ, "ಏನು ಹೇಳಲೋ ? ದೇವರು. ದೇವರು. ಆದರೆ ನಿನ್ನ ಪೂಜೆಯೆಲ್ಲಾ ಇನ್ನಾವುದೋ ದೇವರಿಗೆ" ಎಂದು ಮೂದಲಿಸಿದರು.

ಅವಳು ಆ ಮೂದಲೆಯಿಂದ ಗೌರವಿತಳಾದಂತೆ ಸಂತೋಷಿಸುತ್ತಾ "ಜಗತ್ಕರ್ತನು ಕೈಗೆ ಸಿಕ್ಕುವುದಿಲ್ಲವೆಂದು ಒಂದು ಮೂರ್ತಿಯನ್ನು ಪೂಜೆಗೆ ಇಟ್ಟುಕೊಳ್ಳುವುದಿಲ್ಲವೆ ? ಹಾಗೆ. ಅದೂ ಇದೂ ಎರಡೂ ನಿನ್ನದೇ !" ಎಂದು ಭಾವವಾಗಿ, ಅಭಿನಯಿಸುವಳಂತೆ ನುಡಿದಳು.

ಅರಸರಿಗೆ ಆ ಭಾವ, ಆ ಅಭಿನಯ, ಬಲುಮೆಚ್ಚಾಯಿತು. ರಂಗು ಏರಿತು. ಆದರೂ ಗಾಂಭೀರ್ಯವನ್ನು ಬಿಡದೆ ಕೇಳಿದರು, "ಹಾಗಾದರೆ ಶ್ರೀ ಶೈಲವನ್ನೇರಿ ಮಲ್ಲಿಕಾರ್ಜುನನ ತಪೋಭಂಗ ಮಾಡಿಬರಬೇಕು ?"

ಅವಳು ಆ ವಚೋಭಂಗಿಯನ್ನರಿತು, "ಅಂಗವನ್ನು ಸುಟ್ಟು ಅನಂಗನನ್ನು ಮಾಡಿ ಅವನಿಗೇ ವಶನಾದವನಿಗೆ ತಪೋಭಂಗವೇನು ? ತಪಸ್ಸಿದ್ಧಿಯೇನು ? ಆದರೂ ತಲೆಯಮೇಲೊಬ್ಬಳನ್ನು ಪಕ್ಕದಲ್ಲೊಬ್ಬಳನ್ನು ಇಟ್ಟುಕೊಂಡು ಕುಣಿಯುವ ಆ ಬಟ್ಟೆಗೆಟ್ಟವನನ್ನು ನೋಡಿದರೆ ಇತರರಿಗಿಂತ ಉತ್ತಮವಾಗ ಬಹುದೇನೋ ಎಂದು ಆಸೆ" ಎಂದು ಭಾವಭಂಗಿಯಿಂದ ಏನೇನೋ ಅರ್ಥಗಳಾಗುವಂತೆ, ವಿನಯವನ್ನು ಬಿಡದೆ ನುಡಿದಳು.

ರಾಯರು ಆ ವಿನಯ, ಆ ಭಾವಭಂಗಿಗಳನ್ನು ಕಂಡು ಆನಂದಪರರಾದರು. ಅವಳು ಸೊಟ್ಟಗೆ ತಲೆಬಾಗಿಸಿಕೊಂಡು, ಕೈಮುಗಿದುಕೊಂಡು, ನಿಲು ಗೌರಿಯ ಬೊಂಬೆಯಂತೆ ನಿಂತಿದ್ದರೆ, ರಾಯರಿಗೆ ಮದನನ ಉಪಾಸನಾ

ದೇವತೆಯೋ ಪ್ರತ್ಯಕ್ಷವಾದಂತಾಯಿತು. ರಾಯರು ಆವೇಶಗೊಂಡು ಅವಳನ್ನು ಮೇಲೆಬಿದ್ದು ಅಪ್ಪಿಕೊಂಡರು. ಅವಳು ಆ ಆಲಿಂಗನವನ್ನು ಒಪ್ಪಿಕೊಳ್ಳುತ್ತಾ "ಅಯ್ಯೋ ಪ್ರಾರಬ್ಧವೇ, ದರ್ಶನಮಂದಿರ. ಕಂಭಕಂಭಕ್ಕೂ ಕಾವಲುಗಾರರಲ್ಲಾ !" ಎಂದು ಹಲ್ಲು ಮುಡಿ ಕಚ್ಚಿಕೊಂಡು ಹೇಳಿದಳು.

"ಅರಸನಿಗೂ ಅಂಕೆಯೇನು ?" ಎಂದು ನಿರ್ಲಕ್ಷ್ಯವಾಗಿ, ಸಣ್ಣ ಹಕ್ಕಿಯನ್ನು ಹಾರಿಸಿಕೊಂಡು ಹೋಗುವ ಗಿಡಗನಂತೆ ಅವಳನ್ನೆತ್ತಿಕೊಂಡು ಸಸೀತ್ಕಾರವಾಗಿ ಚುಂಬಿಸುತ್ತಾ ರಾಯರು ಆ ವಿಶಾಲಮಂದಿರದಲ್ಲಿ ಎಲ್ಲಿಯೋ ಮರೆಯಾದರು.

# ಅಧ್ಯಾಯ ಹತ್ತು

ಗೋಲ್ಕೊಂಡದ ಅರಮನೆಯಲ್ಲಿ ಇಂದು ಭಾರಿಯ ಔತಣ. ಅಹಮ್ಮದ್ ನಗರದಿಂದ ಸುಲ್ತಾನರ ಸಮೀಪಬಂಧು ನವಾಬ್ ಯೂಸುಫ್ ಖಾನರೂ, ಬೀದರ್ ನಗರದಿಂದ ಸುಲ್ತಾನರ ಭಾವಮೈದುನ ಸರದಾರ್ ಸುಲೇಮಾನ್ ಖಾನರೂ ರಾಯಭಾರವನ್ನು ತಂದಿದ್ದಾರೆ. ಗೋಲ್ಕೊಂಡದ ಸುಲ್ತಾನರಿಗೆ ಸಂಗೀತದಮೇಲೆ ಬಹಳ ಪ್ರೇಮವೆಂದು ಗವಾಯಿ ಫಾಜಿಯುದ್ದೀನ್ ಖಾಜಿಯವರನ್ನು ಬೀದರೆಯಿಂದ ಕಳುಹಿಸಿಕೊಟ್ಟಿದ್ದಾರೆ. ಅವರು ಹಿಂದೆ ಲೋದಿ ಅರಸರು ದೆಹಲಿಯಲ್ಲಿದ್ದಾಗ ಅವರ ಆಶ್ರಯದಲ್ಲಿದ್ದವರು. ಗವಾಯಿಗಳಲ್ಲಿ ಅವರನ್ನು ಮೀರಿಸಿದವರು ಯಾರೂ ಇರಲಿಲ್ಲ. ಇವೊತ್ತು ಸಂಜೆ ಅವರ ಸಂಗೀತ. ರಾತ್ರಿ ಊಟ.

ಸಂಗೀತವು ಸಂಜೆಯ ನಮಾಜ್ ಆದಮೇಲೆ ಆರಂಭವಾಗಿ ರಾತ್ರಿ ಒಂದು ಝಾಮದ ಕೊನೆಯವರೆಗೂ ನಡೆಯಿತು. ಸುಲ್ತಾನರ ಆನಂದವನ್ನು ನೋಡಿ ನೋಡಿ ಗವಾಯಿಗಳು ಬಹು ಸಂತೋಷಪಟ್ಟು ತಾವೂ ಆನಂದದಿಂದ ಹಾಡಿದರು. ಇತರರು ಇರಲಿ, ಗವಾಯಿಗಳ ಶಿಷ್ಯರೇ ತಮ್ಮ ಗುರುಗಳು ಅಷ್ಟು ಸಂತೋಷವಾಗಿ ಹಾಡಿದುದನ್ನು ತಮ್ಮ ಜನ್ಮದಲ್ಲಿ ಕೇಳಿರಲಿಲ್ಲ ಎಂದರು. ಸಂಗೀತವು ಮುಗಿದಮೇಲೆ ಸುಲ್ತಾನರು ಗವಾಯಿಗಳನ್ನು ಪ್ರತ್ಯೇಕವಾಗಿ ಕರೆಸಿಕೊಂಡರು. ಅವರನ್ನು ಎದ್ದು ಬರಮಾಡಿಕೊಂಡು, ತಾವೇ ಅತ್ತರ್ ಹಚ್ಚಿ, "ತಾವೇ ಹಾಡಿದಿರೋ? ಅಥವಾ ಹಿಂದೂಗಳ ಗಂಧರ್ವರು ಯಾರಾದರೂ ಬಂದು ಹಾಡಿದರೋ? ಇದು ದಿವ್ಯಗಾನ, ನಿಜವಾಗಿಯೂ ಮನುಷ್ಯರು ಹಾಡುವುದಕ್ಕೆ ಆಗುವುದಿಲ್ಲ" ಎಂದರು.

ಗವಾಯಿಗಳು ಬಹು ಮರ್ಯಾದೆಯಿಂದ ನೆಲದವರೆಗೂ ಬಗ್ಗಿ ಸಲಾಂ ಮಾಡಿ "ಖಾವಂದ್, ಮೊಘಲರು ಡೆಲ್ಲಿ ಹಿಡಿದುಕೊಂಡಮೇಲೆ ಅಲ್ಲಿಂದ ನಾವು ಬಹಳಾ ಹೈರಾನ್ ಆಗಿ, ಮಕ್ಕಾಕ್ಕೆ ಹೋಗಿಬಿಟ್ಟೆವು. ಅಲ್ಲಿ ಹಜರತ್ ಕಾಬಾ ಸಾಹೆಬ್, ಅವರಿಗೆ ಪೂಜೆ ಸಲ್ಲಿಸಿ ಬಂದು ಆ ರಾತ್ರಿ ಅಲ್ಲಿಯೇ ಮಲಗಿದ್ದೆವು. ಹಜರತ್ ಗೆಬ್ರೀಲ್ ಅವರು ಆ ದಿನ ಕನಸಿನಲ್ಲಿ ಬಂದು, 'ಕಾಬಾ ಸಾಹೆಬ್ ಅವರ ಸನ್ನಿಧಾನದಲ್ಲಿ ಪವಿತ್ರ ಖುರಾನನ್ನು ರಾಗವಾಗಿ ಓದು. ಖುದಾ ಅವರಿಗೆ ಪ್ರೀತಿಯಾಗುವುದು' ಎಂದು ಹುಕುಂ ಮಾಡಿದರು.

ನಾನೂ ಹಾಗೆಯೇ ಮಾಡಿದೆ. ಒಂದು ವಾರ ಹಿಡಿಯಿತು, ಜಹಾಪನಾ. ಮುಗಿದರಾತ್ರಿ ಹಜರತ್ ಗೆಬ್ರೀಲ್ ಅವರು ಮತ್ತೆ ಕನಸಿನಲ್ಲಿ ಕಾಣಿಸಿಕೊಂಡು ‘ ನಿನ್ನ ಖುರ್ರಾ ಪಠನದಿಂದ ಖುದಾ ಅವರಿಗೆ ಬಹಳ ಸಂತೋಷವಾಗಿದೆ. ನೀನು ಬಹಳ ದೊಡ್ಡ ಗವಾಯ್ ಆಗುತ್ತೀಯೆ. ನಿನ್ನ ದೇಶಕ್ಕೆ ಹಿಂತಿರುಗಿ ಹೋಗು ’ ಎಂದು ಅಪ್ಪಣೆಮಾಡಿದರು. ದಾರಿಯಲ್ಲಿ ಬೀದರಿನ ಸರದಾರರೊಬ್ಬರು ಸಿಕ್ಕಿದರು. ಅವರು ಹಿಂದೆ ಡೆಲ್ಲಿಗೆ ಬಂದು ಹೋಗುತ್ತಿದ್ದಾಗ ನನ್ನನ್ನು ಬಲ್ಲವರು. ಅವರು ನನ್ನನ್ನು ಕರೆದುಕೊಂಡು ಹೋಗಿ ಖಾವಂದ್‌ರಿಗೆ ಭೆಟ್ಟಿ ಮಾಡಿಸಿದರು. ಅವರೂ ನನ್ನನ್ನು ಬಹಳ ಗೌರವ, ವಿಶ್ವಾಸಗಳಿಂದ ಕಾಪಾಡಿಕೊಂಡಿದ್ದಾರೆ. ಆಗ ಕಾಖಾ ಸಾಹೇಬರಬಳಿ ನಾನು ಖುರ್ರಾ ಹಾಡಿದ ಮೊದಲು, ಈಗ ಎಲ್ಲಿ ಹಾಡುತ್ತಿದ್ದರೂ ಖುದಾಬಳಿಯೇ ಹಾಡುತ್ತಿದ್ದ ಹಾಗೆ ಆಗುತ್ತದೆ ಖಾವಂದ್. ಅದರಲ್ಲೂ ಇವೊತ್ತು ಅಂತೂ ನನಗೇ ಆಶ್ಚರ್ಯ ಆಯಿತು. ನಾನೇ ಬಹಳ ಪಸಂದ್ ಮಾಡುತ್ತಿದ್ದೆ. ಬಹುಶಃ ಈ ದರ್ಬಾರ್ ಮಂಟಪದಲ್ಲೇ ಏನೋ ವಿಶೇಷ ಇರಬೇಕು ಖಾವಂದ್.”

ಸುಲ್ತಾನರು ಆತನ ಮಾತನ್ನು ಕೇಳಿ ಬಹಳ ಸಂತೋಷಪಟ್ಟರು. “ಗವಾಯ್ ಸಾಹೇಬ್, ತಾವು ಹೇಳುವುದು ಬಹಳ ಸರಿ. ಪವಿತ್ರವಾದುದನ್ನೆಲ್ಲ, ಒಳ್ಳೆಯದನ್ನೆಲ್ಲ, ಖುದಾ ಅವರಿಗೆ ಎಂದು ಎತ್ತಿಡಬೇಕು. ಅವರಿಗೆ ಕೊಡುವಾಗ ನಮಗೂ ಸಿಕ್ಕೇ ಸಿಕ್ಕುತ್ತದೆ. ತಮ್ಮ ಸಂಗೀತ ಕೇಳುವುದಕ್ಕೆ ನಮಗೆ ಖುಷಿ ಇರುವುದು ಇರಲಿ, ನಮ್ಮ ದರ್ಬಾರಿನ ಕಂಭಗಳೆಲ್ಲ ಈ ದಿನ ಖುಷಿಯಾಗಿ ಹೋಗಿ, ಇನ್ನು ಒಂದುವಾರ ತಮ್ಮ ಸಂಗೀತ ಕೇಳಬೇಕು ಎಂದು ನಮ್ಮ ಹತ್ತಿರ ಅರ್ಜಿಮಾಡಿಕೊಂಡಿವೆ. ನಾವು ಏನು ಹೇಳೋಣ ?”

“ಖಾವಂದ್, ನನಗೂ ಹಾಗೇ ಎನ್ನಿಸಿತು. ಸವಾರಿ ದರ್ಬಾರಿಗೆ ದಯಮಾಡಿಸುತ್ತಲೂ ಮೊಗ್ಗು ಹೂವಾದ ಹಾಗೆ ಆಗಿ ಎಲ್ಲೆಲ್ಲೂ ಪರಿಮಳ ಹರಡಿತು. ಖಾವಂದ್, ಆ ಪರಿಮಳ ಇಲ್ಲಿಯೂ ನುಗ್ಗಿಬಿಟ್ಟು ನನ್ನ ಸಂಗೀತವನ್ನು ಫರಮಾಯಿಷಿ ಮಾಡಿಬಿಟ್ಟಿತು. ಗವಾಯ್‌ಗಳಿಗೆ ಖುದಾ ಇರೋದು ಚೆನ್ನಾಗಿ ಕೇಳುವವರ ಕಿವಿಗಳಲ್ಲಿ ಖಾವಂದ್. ಅದರಿಂದ ಈ ಗರೀಬ್‌ನ ಗಾನ ಕೇಳಬೇಕು ಎಂದರೆ ಅದು ಖುದಾನ ಅಪ್ಪಣೆ ಅಂತ ಪಾಲಿಸಬೇಕು ಖಾವಂದ್.”

“ಇನ್ನೊಂದು ವಾರದೊಳಗಾಗಿ ವಿಜಯನಗರದಿಂದ ಇಬ್ಬರು ಸಂಗೀತ

ಗಾರರು ಬರುತ್ತಾರೆ. ಅವರೂ ತಮ್ಮ ಹಾಗೆಯೇ ಪ್ರಸಿದ್ಧರು. ಅವರು ಬರುವ ವರೆಗೂ ಇದ್ದು, ಅವರ ಸಂಗೀತ ಕೇಳಿ, ಅದು ಹೇಗಿದೆ? ಅದರಲ್ಲಿ ಏನು ಶ್ಲೋಕಿದೆ? ಅದನ್ನು ಕೇಳಿ ಸಂತೋಷಪಡುವುದು ಹೇಗೆ? ಎಲ್ಲವನ್ನೂ ನಮಗೆ ಹೇಳಿಕೊಡಬೇಕು."

"ಜೋಹುಕುಂ. ಆದರೆ, ಖುದಾ ಸಾಹೇಬರಬಳಿ ಎಲ್ಲಾ ಬಲ್ಲೆ ಎನ್ನುವರಿಗೆ ಜಾಗಾಇಲ್ಲ. ಖಾಸಂದ್, ಸವಾರಿಗೆ ಸಂಗೀತದಲ್ಲಿ ಬಹುತ್ ಖಾಯಿಷ್ ಎಂತ ಕೇಳಿದ್ದೆ. ಕಂಡೆ. ಖಾಸಂದ್‌ರು ಹೋಗಿ ಕಲ್ಲಿಗೆ ಹಾಡು ಎಂತ ಅಪ್ಪಣೆ ಮಾಡಿದರೆ, ಅದೂಕೂಡ ಗಾನ ಮಾಡಿಬಿಡುತ್ತದೆ. ಅದರಿಂದ ಈ ಅನುಗ್ರಹ ನಮಗೆ. ತಮಗಲ್ಲ. ಹುಕುಂ ಪ್ರಕಾರ ಇರುತ್ತೇನೆ."

ಸುಲ್ತಾನರು ಅತಿಥಿಗಳೊಡನೆ ಭೋಜನಮಂದಿರಕ್ಕೆ ಹೋದರು. ಅಲ್ಲಿ ಅರ್ಧರಾತ್ರಿಯವರೆಗೂ ಔತಣವು ನಡೆಯಿತು.

ಹೀಗೆಯೇ ಮೂರುನಾಲ್ಕುದಿನಗಳು ಕಳೆಯಿತು. ಬೀದರ್, ಅಹಮ್ಮದ್ ನಗರದಿಂದ ಬಂದಿರುವ ರಾಯಭಾರದ ಕೆಲಸ ನಡೆದಿಲ್ಲ. ಪ್ರತಿದಿನವೂ ಅವರಿಗೆ ಊಟದ ಮೇಲೆ ಊಟ. ಬಿಲ್ಲತ್ತಿನ ಮೇಲೆ ಬಿಲ್ಲತ್ತು. ಸುಲ್ತಾನರು ಅತಿಥಿಗಳನ್ನು ಒಂದು ಗಳಿಗೆ ಬಿಟ್ಟು ಇರುವುದಿಲ್ಲ. ಆದರೂ ರಾಯಭಾರದ ವಿಚಾರ ಬಂದಾಗ, ಭಾರಿ ನಗೆನಕ್ಕು, "ಏನಂಥಾ ಜರೂರು? ತಮ್ಮಂಥಾ ದೋಸ್ತ್‌ಗಳು ಬಂದಾಗ ಎರಡುದಿನ ಖುಷಿ ಮಾಡಬಾರದೆ? ಈ ಗಾನಾ, ಪೀನಾ, ಖಾನಾ ಗಳಲ್ಲಿ ಖುಷಿಗೊಂಡರೆ ದಿಲ್ ಆಡೆಯುಲ್ಲಾ ನೇರವಾಗಿ ಗುಂಡು ಹೊಡೆದಂಗೆ ತನ್ನ ಕೆಲಸ ಮಾಡುತ್ತದೆ. ನಾಳೆಯೂ, ನಾಳಿದ್ದೂ ತಮ್ಮದೇ ಕೆಲಸ. ನಾವು ಮೂವರೂ ಶಿಕಾರಿಗೆ ಹೋಗೋಣ. ಅಲ್ಲಿ ಇನ್ನೊಬ್ಬರೂ ಇಲ್ಲದಾಗ ನಾವು ನಾವು ಮಾತನಾಡಿಕೊಂಡು ಬರೋಣ. ಇಲ್ಲಿ ಗಲಾಟೆ ಬಹಳ" ಎಂದರು.

ಅತಿಥಿಗಳಿಗೆ ಮಿಕ್ಕೆಲ್ಲ ವಿಚಾರದಲ್ಲಿಯೂ ಸಂತೃಪ್ತಿಯಾಗಿದ್ದರೂ, ಈ ಕಾಲಹರಣದ ವಿಚಾರವಾಗಿ ಏನೋ ಅಸಮಾಧಾನ. ಸುಲ್ತಾನರು ಪುರುಸತ್ತಾಗಿದ್ದಾರೆ. ಆದರೂ ರಾಯಭಾರದ ವಿಚಾರ ಮಾತನಾಡುವುದಿಲ್ಲ. ಅವರಿಗೆ ಅದೇ ಒಂದು ಸಮಸ್ಯೆ.

ಯಜಮಾನ್ ವೀರಪ್ಪಸೆಟ್ಟರು ಗೋಲ್ಕೊಂಡದ ನಗರದ ಗಡಿಬಳಿ ಬರುತ್ತಿದ್ದ ಹಾಗೆಯೇ ವಿಜಯನಗರದ ರಾಯಭಾರಿಯು ಕಾಣಿಸಿಕೊಂಡು, ಸೆಟ್ಟರನ್ನು

ತನ್ನ ರಥದಲ್ಲಿ ಕರೆದುಕೊಂಡು ಹೋದನು. "ಬೀದರ್, ಅಹಮ್ಮದ್ ನಗರ ಗಳಿಂದ ರಾಯಭಾರಿಗಳು ಬಂದಿದ್ದಾರೆ. ಈಗ ತಾವು ಬೇರೆ ರಥದಲ್ಲಿ ಬಂದು ಎಲ್ಲರ ಕಣ್ಣಿಗೂ ಬೀಳುವುದು ಬೇಡ. ತಾವು ಬರುತ್ತಲೂ ಗುಟ್ಟಾಗಿ ದಿವಾನರಿಗೆ ಸುದ್ದಿ ಕಳುಹಿಸಬೇಕು. ಅವರು ಬಂದು ಈ ದಿನದ ರಾತ್ರಿಯೇ ತಮ್ಮನ್ನು ಸುಲ್ತಾನರ ಬಳಿಗೆ ಕರೆದುಕೊಂಡು ಹೋಗುವರು" ಎಂದು ಹೇಳಿ, ಅವರ ಪ್ರಸನ್ನ ಮುಖ ದಿಂದಲೇ ಕಾರ್ಯವು ಸುಮುಖವಾಗಿರುವುದನ್ನು ಅರಿತು ಬಹಳಸಂತೋಷಪಟ್ಟರು.

"ಸುಲ್ತಾನರು ಆ ರಾಯಭಾರಿಗಳು ಬಂದು ಐದು ದಿನವಾಗಿದ್ದರೂ ಅವರ ರಾಯಭಾರವನ್ನು ಇನ್ನೂ ಬರಮಾಡಿಕೊಂಡಿಲ್ಲ. ಖಾನಾ, ಪೀನಾ, ಗಾನಾಗಳಲ್ಲಿ ಅವರನ್ನು ಮುಳುಗಿಸಿ ಇಟ್ಟಿದ್ದಾರೆ. ನೋಡಿದರೆ ನಿಮ್ಮನ್ನು ಕಾದಿರುವಂತಿದೆ" ಎಂದು ಹೇಳಿ ಸೆಟ್ಟರನ್ನು ತಮ್ಮ ಬಿಡಾರಕ್ಕೆ ಕರೆದುಕೊಂಡು ಹೋದರು.

ಅಂದಿನರಾತ್ರಿ ಸೆಟ್ಟರನ್ನು ದಿವಾನರು ಸುಲ್ತಾನರ ಭೇಟಿಗೆ ಕರೆದು ಕೊಂಡು ಹೋದರು. ಸುಲ್ತಾನರು ಸೆಟ್ಟರನ್ನು ಬಹಳ ಸಂತೋಷದಿಂದ ಕಂಡು, ಮಗ್ಗುಲಲ್ಲಿ ಕುಳ್ಳಿರಿಸಿಕೊಂಡು, "ಏನೇನು ಮಾಡಿಕೊಂಡು ಬಂದಿರಿ? ಬಾದ್‌ಷಾ ಅವರು ಚೆನ್ನಾಗಿದ್ದಾರೆಯೇ?" ಎಂದು ಮುಂತಾಗಿ ಹಲವಾರು ಪ್ರಶ್ನೆಗಳನ್ನು ಕೇಳಿ ಮಿತ್ರೋಪಚಾರವನ್ನು ಸಲ್ಲಿಸಿದರು.

"ಖಾವಂದ್, ಮಹಾಸ್ವಾಮಿಯವರು ಸಂಧಿಪತ್ರವನ್ನು ನಮ್ಮ ಹಸ್ತ ಕೊಟ್ಟು ಓಡಿಸಿದರು. ಭರತಾಚಾರ್ಯರು ಶಿಷ್ಯರನ್ನು ಕರೆದುಕೊಂಡು ಬರು ತ್ತಿದ್ದಾರೆ. ಮಹಾಸ್ವಾಮಿಯವರು ಸಂಧಿಯ ವಿಚಾರವಾಗಿ 'ನಾವಿಬ್ಬರೂ ಒಂದೇ ದೋಣಿಯನ್ನು ಏರಿದ್ದೇವೆ. ಒಳ್ಳೆಯದು, ಕೆಟ್ಟದ್ದು ಎರಡೂ ಸಮಾನವಾಗಿ ಅನುಭವಿಸೋಣ. ವಿಜಯನಗರ ರಾಜ್ಯವೆಲ್ಲ ತಮ್ಮ ಜೋಬಿ ನಲ್ಲಿದೆ ಎಂದು ತಾವು ನಂಬಬೇಕು' ಎಂದು ಅರಿಕೆ ಮಾಡಬೇಕು ಎಂದು ಅಪ್ಪಣೆಮಾಡಿದ್ದಾರೆ. ಸಂಗೀತಗಾರರ ವಿಚಾರವಾಗಿ 'ಅದು ನಮ್ಮ ಕಂಠ ದಲ್ಲಿರುವ ಹೂವಿನಹಾರ. ಅದು ಬಾಡದ ಹಾಗೆ ನೋಡಿಕೊಳ್ಳಬೇಕು' ಎಂದು ವಿಜ್ಞಾಪಿಸು ಎಂದು ಅಪ್ಪಣೆಮಾಡಿದ್ದಾರೆ ಖಾವಂದ್."

"ಜೊತೆಯಲ್ಲಿ ಅವರ ರಕ್ಷಣೆಗೆ ಸೈನ್ಯ ಕಳುಹಿಸಿದ್ದಾರೋ?"

"ಕಳುಹಿಸಿದ್ದಾರೆ ಖಾವಂದ್."

"ದಿವಾನ್ ಸಾಹೇಬ್, ನಮ್ಮದೂ ಒಂದು ಸಣ್ಣ ಸೈನ್ಯ ಹೋಗಿ ಅವರ ಜೊತೆ ಸೇರಿಕೊಳ್ಳಲಿ. ಅವರು ನಮ್ಮರಾಜ್ಯದ ಗಡಿಯೊಳಕ್ಕೆ ಬರುತ್ತಿದ್ದ ಹಾಗೆಯೇ ನಮ್ಮ ದರ್ಬಾರದ ಸರ್ದಾರರಿಗೆ ಸಲ್ಲುವಂಥ ಮರ್ಯಾದೆಗಳನ್ನು ಅವರಿಗೆ ಸಲ್ಲಿಸಿ ಕರೆತರಬೇಕು ಎಂತಾ ಹುಕುಂ ಕಳಿಸಿಕೊಡಿ."

"ಜೋಹುಕುಂ, ಖಾವಂದ್."

"ಸೆಟ್ಟಿಸಾಹೇಬರಿಗೆ ನಮ್ಮಿಂದ ಬಹಳ ತಕಲೀಫ್ ಆಯಿತು. ಮಾಫಿ ಕೊಡಬೇಕು. ಬಿಕ್ಕೆ ಎಲ್ಲಾ ವಿಚಾರ ಆಮೇಲೆ ಮಾತಾಡೋಣ. ನಮ್ಮ ಮನಸ್ಸಿನಲ್ಲಿದ್ದ ಭಾರ ಹಗುರವಾಯಿತು. ದಿವಾನಸಾಹೇಬ್, ಸೆಟ್ಟಿ ಸಾಹೇಬರವರು ನಾಳೆಯದಿನ ಸಂಗೀತಕ್ಕೆ ಬರಬೇಕು. ವಿಜಯನಗರದ ರಾಯಭಾರಿಗಳು ಇಬ್ಬರು ಇರುವುದನ್ನು ನಾಳೆ ದರ್ಬಾರಿಗಳೆಲ್ಲ ನೋಡಲಿ."

ಮರುದಿನ ಬೀದರ್, ಅಹಮ್ಮದ್ ನಗರದ ರಾಯಭಾರಿಗಳಿಗೆ ಸುಲ್ತಾನ ರಿಂದ ವಿಶೇಷ ಆಹ್ವಾನ ಬಂತು. ರಾಯಭಾರಿಗಳು ತಮ್ಮ ಕಾರ್ಯಭಾರವನ್ನು ಸುಲ್ತಾನರಿಗೆ ಅರಿಕೆಮಾಡಿದರು. ಸುಲ್ತಾನರು ವಿಶೇಷ ಸಾವಧಾನದಿಂದ ಎಲ್ಲವನ್ನೂ ಲಾಲಿಸಿದರು. "ಷಿಕಾರಿಗೆ ಹೋಗೋಣ. ನಾಳಿದ್ದು ನಾವು ಉತ್ತರ ಕೊಡುತ್ತೇವೆ."

ರಾಯಭಾರಿಗಳು ಬಿನ್ನೈಸಿದರು. "ಖಾವಂದ್, ಈ ವಿಜಯನಗರ ದವರು ನಮ್ಮ ಐವರು ಸುಲ್ತಾನರಲ್ಲಿ ಒಬ್ಬರಮೇಲೊಬ್ಬರನ್ನು ಎತ್ತಿಕಟ್ಟಿ ನಮ್ಮನಮ್ಮಲ್ಲಿ ನಾವು ನಾವು ಕಾದಾಡಿಕೊಂಡು ಇರುವಾಗ ತಾವು ಸುಖವಾಗಿ ದ್ದಾರೆ. ಇತ್ತಕಡೆ ಕೊಂಡವೀಡು ರಾಜ್ಯವನ್ನು ತೆಗೆದುಕೊಂಡರು. ವಿಜಯ ನಗರದ ಪ್ರಜೆಗಳೆಲ್ಲ 'ನಮ್ಮ ರಾಯರು ಮನಸ್ಸುಮಾಡಿದರೆ ಬಹಮನೀ ಸುಲ್ತಾನ ರನ್ನೆಲ್ಲಾ ಏಕ್‌ದಂ ಮಟ್ಟಹಾಕಬಲ್ಲರು. ಏನೋ ಬಿಟ್ಟುಕೊಂಡು ಬರುತ್ತಿ ದ್ದಾರೆ' ಎನ್ನುತ್ತಿದ್ದಾರೆ. ಈಗ ವಿಂಧ್ಯಪರ್ವತದ ಉತ್ತರ ರಾಜ್ಯವೆಲ್ಲ ಮುಸಲ್ಮಾ ನರದು ಆಗಿದೆ. ಇತ್ತಲಾಗಿ ಪಶ್ಚಿಮಬಂಗಾಳದಲ್ಲಿಯೂ ಪಠಾನರ ರಾಜ್ಯವಾ ಯಿತು. ಇನ್ನು ಉಳಿದಿರುವುದು ಆರಾವಳಿ ಬೆಟ್ಟಗಳ ರಜಪೂತಸ್ಥಾನ. ದಕ್ಷಿಣ ದಲ್ಲಿ ವಿಜಯನಗರ. ಅದನ್ನು ಗೆಲ್ಲುವುದಕ್ಕೆ ತಮಗೂ, ಬಿಜಾಪುರದವರಿಗೂ ಏನು ಮದತ್ ಮಾಡುವುದಕ್ಕೂ ನಾವು ಮೂವರು ಸುಲ್ತಾನರೂ ಸಿದ್ಧರಾಗಿದ್ದೇವೆ. ಇದೋ, ನಮ್ಮ ಮಾತಿಗೆ ದುಸರಾ ಹೇಳುವುದಿಲ್ಲವೆಂದು ಬೀರಾರಿನ ಸುಲ್ತಾನರು

ಬರೆದಿರುವ ಪತ್ರ. ಹಿಂದೆ ಖಿಲ್ಜಿ ದಳವಾಯಿ ಮಲ್ಲಿಕ್‌ಕಾಫರನು ಮಾಡಿದಂತೆ ಈಗ ನಾವೂ ಮಾಡಬೇಕು. ಖಾವಂದರು ಮನಸ್ಸುಮಾಡಿದರೆ, ತಾವೇ ದಳವಾಯಿಗಳಾಗಬಹುದು. ಈ ವಿಜಯನಗರವನ್ನು ಗೆದ್ದರೆ, ವಿಜಯ ನಗರದಿಂದ ನೇರವಾಗಿ ದಕ್ಷಿಣಕ್ಕೆ ಒಂದು ಗೆರೆಯನ್ನು ಎಳೆಯುವುದು. ಆ ಗೆರೆಯ ಪಶ್ಚಿಮದ ರಾಜ್ಯವೆಲ್ಲ ಬಿಜಾಪುರಕ್ಕೆ; ಪೂರ್ವದ ರಾಜ್ಯವೆಲ್ಲ ಗೋಲ್ಕೊಂಡಕ್ಕೆ. ಪೂರ್ವದಲ್ಲಿರುವ ಕೊಂಡವೀಡು ರಾಜ್ಯವು ಬೀದರ್‌ಗೆ ಸೇರಿ, ರಾಜಮಹೇಂದಿರಿ, ಮಚ್ಛಲೀ ಬಂದರ್, ಇವೆಲ್ಲಾ ಅವರಿಗೆ. ಅಹಮ್ಮದ್ ನಗರಕ್ಕೆ ಸಮುದ್ರತೀರದ ರಾಜ್ಯ ಸಾಕು. ಅದೂ ನಮ್ಮ ಮಕ್ಕಾಕ್ಕೆ ಹೋಗುವ ಮುಸಲ್ಮಾನರ ರಕ್ಷಣೆಗೋಸ್ಕರ ನಾವು ಆ ಕರಾವಳಿಯನ್ನು ಕೇಳುತ್ತಿದ್ದೇವೆ. ಬೇರಾರಿನವರು ಮುಂದೆ ಒರಿಸ್ಸಾ ಹಿಡಿಯಬೇಕೆಂದು ಆಶೆಪಡುತ್ತಿದ್ದಾರೆ. ಅವರಿಗೆ ಸಹಾಯಮಾಡುವುದಾಗಿ ನಾವು ಮಾತು ಕೊಡಬೇಕು. ಇದಿಷ್ಟು ಇಲ್ಲಿ ಆದರೆ ವಿಂಧ್ಯದ ಆಚೆ ಇರುವ ಮುಸಲ್ಮಾನೀ ರಾಜ್ಯದೊಡನೆ ಸೇರಿ ರಜಪೂತರನ್ನು ಮಟ್ಟಹಾಕುವುದು ಸುಲಭ. ಅಲ್ಲಿಗೆ ಸಾರೇ ಹಿಂದೂಸ್ಥಾನವೆಲ್ಲ ಮುಸಲ್ಮಾನರದೇ ಆಗಿಹೋಯಿತು. ಅದರಿಂದ ಖಾವಂದ್‌ರು ಈ ಕಾರ್ಯದಲ್ಲಿ ಮನಸ್ಸುಹಾಕಿ, ಒಪ್ಪಿಕೊಳ್ಳಬೇಕು ಎಂದು ಬಹಳ ವಿನಯದಿಂದ ಅಹಮ್ಮದ್‌ನಗರ, ಬೀದರ್ ಸುಲ್ತಾನರು ಸಲಾಂ ಮಾಡಿ ಹೇಳಿಕೊಳ್ಳುತ್ತಾರೆ."

ಸುಲ್ತಾನರು ಸಮಾಧಾನದಿಂದ ಎಲ್ಲವನ್ನೂ ಕೇಳಿದರು. ಅವರಿಗೆ ಉತ್ತಮವಾದ ಖಿಲ್ಲತ್ತುಗಳನ್ನು ಕೊಡಿಸಿದರು. "ಸಲಹೆ ಬಹಳ ಚನ್ನಾಗಿದೆ. ನಾವೂ ಕೊಂಚ ಯೋಚನೆ ಮಾಡಬೇಕು. ನಾಳಿನ ದಿವಸ ಇಷ್ಟುಹೊತ್ತಿಗೆ ಇಲ್ಲೇ ನಾವು ಉತ್ತರ ಕೊಡುತ್ತೇವೆ" ಎಂದು ಅಪ್ಪಣೆಮಾಡಿದರು.

ಮರುದಿನ ಹೊತ್ತಿಗೆ ಸರಿಯಾಗಿ ರಾಯಭಾರಿಗಳು ಬಂದು ಸುಲ್ತಾನರ ದರ್ಶನಮಾಡಿದರು. ಗೋಲ್ಕೊಂಡದ ದಿವಾನರೂ ಇದ್ದರು. ಸುಲ್ತಾನರು ಅಪ್ಪಣೆ ಕೊಡಿಸಿದರು. "ರಾಯಭಾರಿಗಳೇ, ನಮ್ಮ ಸುಲ್ತಾನ್‌ಬಾಂಧವರು ಅಪ್ಪಣೆ ಕೊಡಿಸಿರುವುದು ಬಹಳ ಸರಿ. ನಾವು ಐವರೂ ಸೇರಿದರೆ ವಿಜಯ ನಗರ ಉಳಿಯುವುದು ಕಷ್ಟ, ನಿಜ. ಈ ಯುದ್ಧದಲ್ಲಿ ಬಿಜಾಪುರ, ಗೋಲ್ಕೊಂಡ ದವರು ಮಾಡಬೇಕಾದ ಮೆಹನತ್ತು ಬಹಳ. ಅದಕ್ಕೇ ತಾವು ಗೆದ್ದರೆ

ದಕ್ಷಿಣದ ರಾಜ್ಯವೆಲ್ಲ ಬಿಜಾಪುರ, ಗೋಲ್ಕೊಂಡಗಳಿಗೆ ಹಂಚುವುದಾಗಿ ಯೋಚಿಸಿದ್ದೀರಿ. ಅದೂ ಸರಿಯೆ. ಆದರೆ ತಾವು ಇನ್ನೊಂದು ಯೋಚಿಸಿಲ್ಲ. ನಮ್ಮಿಬ್ಬರಿಗೆ ರಾಜ್ಯ ಹಂಚಿಕೊಡುವುದಕ್ಕೆ ನೀವು ಮೂವರೂ ಈ ಯುದ್ಧವನ್ನು ಹೂಡುವಿರಾ? ಅದು ಸಾಧ್ಯವಿಲ್ಲ. ಆದರಿಂದ ನೀವು ಮೂವರೂ ಈ ಯುದ್ಧಕ್ಕೆ ಸಿದ್ಧರಾಗುವುದು ನಮ್ಮ ಮೇಲಿನ ಪ್ರೀತಿಯಿಂದಲ್ಲ; ಹಿಂದೂರಾಜರಮೇಲಿನ ದ್ವೇಷದಿಂದ. ಇದುವರೆಗೂ ನಮ್ಮೊಡನೆ ಮೈತ್ರಿಯಿಂದ ಇರುವವರು ಅವರು. ದ್ವೇಷದಿಂದ ಯುದ್ಧಮಾಡುತ್ತಿರುವವರು ನೀವು. ನಾವು ಹೇಗೆ ಬಹುದಿನದ ಸ್ನೇಹಿತರನ್ನು ಬಿಟ್ಟು ನಿಮ್ಮನ್ನು ಸೇರುವುದು? ಇದರಮೇಲೆ ಸಾರೇ ಹಿಂದೂಸ್ಥಾನವನ್ನೆಲ್ಲಾ ಮುಸಲ್ಮಾನ್ ಮಾಡುವುದಾಗಿ ಹೇಳಿದಿರಿ. ಈಗ ಈಜಿಪ್ಟ್, ಅರೇಬಿಯಾ, ಇರಾನ್, ಇರಾಕ್, ಸಿರಿಯ, ಜಾರ್ಜಿಯ, ತುರ್ಕಿ, ಅಸ್ಸೀರಿಯಾ, ಅಬ್ಸೀನಿಯಾ, ಇವೆಲ್ಲ ಮುಸ್ಲಿಂ ರಾಜ್ಯಗಳು. ಇವೆಲ್ಲ ಮೈತ್ರಿಯಿಂದಿರುವವೆ? ಇಂಡಿಯದಲ್ಲಿಯೇ ಮುಸ್ಲಿಂ ರಾಜ್ಯಗಳು ಒಂದಕ್ಕೊಂದು ವಿಶ್ವಾಸದಿಂದ ಇರುವವೆ? ತಾವು ಮರೆತಿರಿ. ಪ್ರೀತಿಯಿಂದ ಒಟ್ಟುಗೂಡಬೇಕಾದರೆ ಶಾಂತಿ ಇರಬೇಕು. ಶಾಂತಿ ಬರಬೇಕಾದರೆ ಪ್ರೀತಿಯಿರಬೇಕು. ತಾವು ಹೇಳುವಂತೆ ದ್ವೇಷದಿಂದ ಕೂಡಿದರೆ, ಹಾಳುಮಾಡಬಹುದು. ಕಟ್ಟುವುದಕ್ಕೆ ಆಗುವುದಿಲ್ಲ. ಡಿಲ್ಲಿಯಲ್ಲಿಯೇ ಹೊಡೆದಾಡುತ್ತಿರುವವರು ಯಾರು ಯಾರು? ಹಿಂದೂ ಮುಸ್ಲೀಮರಲ್ಲ. ಬಾಬರ್ ಯಾರು? ಇಬ್ರಾಹಿಂ ಯಾರು? ಹುಮಾಯೂನ್ ಯಾರು? ಷೇರ್ ಖಾನ್ ಯಾರು? ನಾಲದೆ ನಿಮಗಿರುವಂತೆಯೇ ಡಿಲ್ಲಿಯಲ್ಲಿಯೂ ಆಸೆಯಿಲ್ಲವೆಂದು ನಿಮಗೆ ಯಾರು ಹೇಳಿದರು? ಸಾಲದೆ ಅವರಿಗೆ ಕಂದಹಾರಿನ ಪಠಾಣರು ಬೇಕೆಂದಾಗ ಬರುವುದಕ್ಕೆ ಸಿದ್ಧರಾಗಿದ್ದಾರೆ. ಹಿಂದೊಮ್ಮೆ ನೀವು ಹೇಳಿದಂತೆ ಮಲ್ಲಿಕ್‌ಕಾಫರನು ಈ ದೇಶವೆಲ್ಲಾ ಸುತ್ತಿ ಸೂರೆ ಹೊಡೆದಿದ್ದಾನೆ. ನಿಜ. ಆದರೆ, ಅಲ್ಲಾವುದ್ದೀನ್ ಖಿಲ್ಜಿಯ ಮೋಸದಿಂದ ದೇವಗಿರಿ ಹೋದುದು; ಅವನ ಪ್ರತಾಪದಿಂದ ಅಲ್ಲ. ಮರೆಯಬೇಡಿ. ದೇವಗಿರಿ, ಓರಂಗಲ್, ಹೊಯ್ಸಳ ರಾಜ್ಯಗಳ ನಸೀಬ್ ಕೆಟ್ಟು ಅವು ಸೋತವೇ ಹೊರತು ಮಲ್ಲಿಕ್‌ಕಾಫರನು ಶೌರ್ಯದಿಂದ ಅವರನ್ನು ಗೆದ್ದನೇ? ಬರಿಯ ಶೌರ್ಯದಿಂದಲೇ ಎಲ್ಲಾ ಎನ್ನುವ ಹಾಗಿದ್ದರೆ, ಆನೆ, ಹುಲಿ ಇವು ಮನುಷ್ಯನಮೇಲೆ ರಾಜ್ಯ ಮಾಡಬೇಕಾಗಿತ್ತು. ಹಜರತ್ ಪೈಗಂಬರ್ ಸಾಹೇಬರ ಮುಖಾಂತರ ಖುದಾ ಮಾನವಕುಲಕ್ಕೆ

ಇಸ್ಲಾಂ ಕೊಟ್ಟು ಅದನ್ನು ಕಾಪಾಡಿಕೊಳ್ಳುವುದಕ್ಕೆ ಕೊಟ್ಟ ಕತ್ತಿಗೆ ಮನುಷ್ಯ ಬಲಿಯಾಗಿ ಹೋದ. ಕತ್ತಿ ಚಲಾಯಿಸುವುದು ಕಲಿತು, ಮನಸ್ಸು ಇಸ್ಲಾಂ ಮರೆತು ಬಿಟ್ಟಿತು. ಅದರಿಂದ ನಮಗೆ ಯುದ್ಧ ಬೇಡ. ನಮಗೆ ಈಗ ಅಲ್ಲಾ ಕೊಟ್ಟಿರುವುದರಲ್ಲಿ ಏನೂ ಕಡಿಮೆಯಿಲ್ಲ. ನಾವುನಾವು ಮೊದಲು ಸುಖವಾಗಿರೋದು ಕಲಿತುಕೊಳ್ಳೋಣ. ತಾವು ಬಂದಿದ್ದೀರಿ. ತಮ್ಮ ಸುಲ್ತಾನರ ಕಡೆಯಿಂದ ಸ್ನೇಹದ ಹಸ್ತ ತಂದಿದ್ದೀರಿ. ನಮಗದು ಬಹಳ ಸಂತೋಷ. ಮೊದಲು ನಾವು ಐವರು ಸುಲ್ತಾನರೂ ಒಂದುಕಡೆ ಸೇರಿ, ಇನ್ನು ಹತ್ತು ವರ್ಷ ಒಬ್ಬರೊಡನೆ ಒಬ್ಬರು ಬೇಕಾದುದಾಗಲಿ ಯುದ್ಧ ಮಾಡುವುದಿಲ್ಲ ಎಂದು ಕರಾರು ಮಾಡಿಕೊಳ್ಳೋಣ. ಬೇಕಾದರೆ ನಮ್ಮನಮ್ಮಲ್ಲಿ ನೆಂಟತನ ಬೆಳೆಸೋಣ. ಅದು ಮೊದಲು ಆಗಲಿ. ಆಮೇಲೆ ಬೇಕಾದುದು ಆಗಲಿ. ಇದಕ್ಕೆ ತಮಗೆ ಒಪ್ಪಿಗೆಯೇ ಹೇಳಿ. ಹೀಗೆ ಮಾಡಲು ತಮ್ಮತಮ್ಮ ಸುಲ್ತಾನರೂ ತಮಗೆ ಅಧಿಕಾರವನ್ನು ಕೊಟ್ಟಿದ್ದಾರೆಯೇ ? ”

ಅಹಮ್ಮದ್‌ನಗರದ ರಾಯಭಾರಿ ಯೂಸುಫ್ ಖಾನರು ಮಾತನಾಡಿದರು. “ ಖಾವಂದ್, ತಾವು ಅಪ್ಪಣೆಮಾಡುವುದು ಸರಿಯಾಗಿದೆ. ಬಹಮನೀ ಸುಲ್ತಾನರು ಇದುವರೆಗೆ ಸ್ನೇಹದಿಂದಿರಲಿಲ್ಲ. ಈಗ ಮೊದಲು ಈ ಸ್ನೇಹ ಏರ್ಪಟ್ಟು ಬಲವಾಗಲಿ. ಅನಂತರ ಏನು ಆಗಬೇಕೋ ಅದು ಆಗುತ್ತದೆ. ಈ ಸ್ನೇಹದ ಗುರುತಾಗಿ ನಮ್ಮ ಐವರು ಸುಲ್ತಾನರೂ ನೆಂಟತನ ಬೆಳೆಸಬೇಕು ಎಂಬ ತಮ್ಮ ಸಲಹೆ ಬಹಳಬಹಳ ಸರಿಯಾಗಿದೆ. ನಮ್ಮ ಸುಲ್ತಾನರು ನಮಗೆ ಪತ್ರಕೊಟ್ಟಿದ್ದಾರೆ, ಬೇಕಾದ್ದು ಮಾಡಿಕೊಂಡು ಬರಬಹುದು ಎಂದು. ಆದರೆ ಅವರ ಮನಸ್ಸಿನಲ್ಲಿ ಯುದ್ಧದ ವಿಚಾರ ಇದ್ದುದು. ಅದರಿಂದ ಖಾವಂದರ ಹುಕುಂ ಆದರೆ ಮತ್ತೆ ಅಲ್ಲಿಗೆ ಹೋಗಿ ಈ ಹತ್ತುವರ್ಷದ ಸ್ನೇಹದಕರಾರು, ನೆಂಟತನದ ವಿಚಾರವಾಗಿ ಮಾತನಾಡಿಕೊಂಡು ಬರುತ್ತೇನೆ.”

ಸುಲ್ತಾನರು ಸರದಾರರ ಕಡೆ ನೋಡಿದರು. ಅವರು ಎದ್ದು ಮರ್ಯಾದೆಯಿಂದ ಸಲಾಂ ಮಾಡಿ ಹೇಳಿದರು, “ ಖಾವಂದ್, ನಮ್ಮ ಸುಲ್ತಾನರೂ ನಮಗೆ ಪತ್ರ ಕೊಟ್ಟಿದ್ದಾರೆ. ಆದರೆ ನವಾಬ್‌ಸಾಹೇಬ್‌ರು ಅರಿಕೆಮಾಡಿದಂತೆ ಅದು ಯುದ್ಧಕ್ಕಾಗಿ ಕೊಟ್ಟುದು. ಈಗ ಖಾವಂದ್‌ರು ಅಪ್ಪಣೆಕೊಡಿಸಿರುವುದನ್ನು ಸುಲ್ತಾನರಿಗೆ ಒಪ್ಪಿಸಿ ಹುಕುಂ ತರಲು ಅಪ್ಪಣೆಯಾಗಬೇಕು.”

ಸುಲ್ತಾನರು ಮತ್ತೆ ಮಾತನಾಡಿದರು. “ನವಾಬ್‌ಸಾಹೇಬ್, ಸರದಾರ್ ಸಾಹೇಬ್‌ಇನ್ನೂ ಒಂದು ಯೋಚನೆಮಾಡಿ. ಈ ಮೊಘಲ್‌ರಿಗೆ, ಪರ್ಠಾಣರಿಗೆ ನಮ್ಮನ್ನೆಲ್ಲಾ ಕಂಡರೆ ಲಕ್ಷ್ಯವಿಲ್ಲ. ಅವರು ಮಾತ್ರ ಹಜರತ್ ಪೈಗಂಬರರಿಂದ ನೇರವಾಗಿ ಬಂದಹಾಗೆ, ನಾವೆಲ್ಲ ತಿಪ್ಪೆಯಲ್ಲಿ ಬಿದ್ದಿರುವ ಕಸದ ಹಾಗೆ ಅವರ ಭಾವನೆ. ಇನ್ನೂ ಒಂದು ಎಂಟು ಹತ್ತು ವರುಷ ಹೋದರೆ ಈ ಡೆಲ್ಲಿಯವರು ನಮ್ಮಮೇಲೆ ಬೀಳುವುದಿಲ್ಲ ಎಂದು ತಮಗೆ ನಂಬುಗೆಯುಂಟೇನು ? ಈಗ ಇರುವಂತೆ ಅಲ್ಲಿ ದಂಗೆ, ಪಿತೂರಿ ಆಗುತ್ತಿರುವವರೆಗೂ ನಮಗೆ ದಿಗಿಲಿಲ್ಲ ಆದರೆ ಆ ಡೆಲ್ಲಿಯಲ್ಲಿ ಯಾರೇ ಸುಲ್ತಾನರಾದರೂ ಸುಮ್ಮನೆ ಕೂತಿರಲು ಆಗುವುದಿಲ್ಲ. ಅಲ್ಲಿನ ದೊರೆತನಕ್ಕೆ ಯಾವಾಗಲೂ ಇನ್ನೊಬ್ಬರ ರಕ್ತ ಬೇಕು. ಅಂಥಾಕಾಲ ಬಂದು ಡೆಲ್ಲಿಯವರು ನಮ್ಮಮೇಲೆ ಬಂದರೆ, ನಮಗೊಬ್ಬರು ದೋಸ್ತ್ ಇದ್ದರೆ ಒಳ್ಳೆಯದಲ್ಲ ? ಅದನ್ನು ಯೋಚಿಸಬೇಕು ಎಂದು ನಾವು ಸಲಾಂ ಮಾಡಿದೆವು ಎಂದು ತಮ್ಮತಮ್ಮ ಸುಲ್ತಾನರಿಗೆ ಹೇಳಿ. ನಾವು ಯುದ್ಧಕ್ಕೆ ಬಿಲ್‌ಖುಲ್ ಸಿದ್ಧವಿಲ್ಲ; ಸ್ನೇಹಕ್ಕೆ, ಶಾಂತಿಗೆ, ಸಂಪೂರ್ಣ ಸಿದ್ಧ. ಇದನ್ನು ಖರಿಕೆಮಾಡಿ ಶಾಂತಿಯ ಕರಾರು ಮಾಡಿಸಿ.”

ಸುಲ್ತಾನರು ಮಾಡಬೇಕಾದ ಮರ್ಯಾದೆಗಳನ್ನೆಲ್ಲಾ ಮಾಡಿಸಿದರು. “ನಾಳಿದ್ದಿನಿಂದ ವಿಜಯನಗರದ ಗವಾಯ್‌ಗಳ ಕಚೇರಿಯಾಗುವುದು. ಇದ್ದು ಸಂಗೀತವನ್ನು ಕೇಳಿಕೊಂಡು ಹೋದರೆ ಬಹಳ ಸಂತೋಷ” ಎಂದು ತಾವೇ ಹೇಳಿದರು. ರಾಯಭಾರಿಗಳು, “ಖಾವಂದ್, ಮಾಫಿ ಕೊಡಬೇಕು. ಈಗ ತಾವು ನಮಗೆ ವಹಿಸಿರುವ ಕಾರ್ಯ ಬಹಳ ದೊಡ್ಡದು. ಹೋಗಿ ಇದನ್ನು ಸಾಧಿಸಿಕೊಂಡು ಬರುವ ಭಾರ ನಮ್ಮದು. ಅದರಿಂದ ನಮಗೆ ಅಪ್ಪಣೆ ಯಾಗಲಿ. ಗವಾಯ್ ಘಾಜಿಯುದ್ದೀನ್ ಸಾಹೇಬರು ಇಲ್ಲಿಯೇ ಇರುವರು” ಎಂದು ರಾಜಮರ್ಯಾದೆಗಳನ್ನು ಸಲ್ಲಿಸಿ ಬೀಳ್ಕೊಂಡು ಹೋದರು.

ಮರುದಿನ ಭರತಾಚಾರ್ಯರು ಗೋಲ್ಕೊಂಡನಗರದ ಗಡಿಗೆ ಬಂದಿರುವು ದಾಗಿ ಸುದ್ದಿಬಂತು. ಸುಲ್ತಾನರ ದರ್ಬಾರ್ ಭಕ್ಷಿಯವರು, ವಿಜಯನಗರದ ರಾಯಭಾರಿಗಳು, ಯಜಮಾನ್ ವೀರಪ್ಪಸೆಟ್ಟರು ಹೋಗಿ ಅವರನ್ನು ಎದುರು ಗೊಂಡು ಕರೆತಂದರು.

# ಅಧ್ಯಾಯ ಹನ್ನೊಂದು

ಯಥಾಕಾಲದಲ್ಲಿ ಭರತಾಚಾರ್ಯರು ಸಶಿಷ್ಯರೂ, ಸಮಿತ್ರರೂ ಆಗಿಬಂದು ಸುಲ್ತಾನರನ್ನು ಕಂಡರು. ಸುಲ್ತಾನರು ಅವರುಗಳಿಗೆಲ್ಲ ಪರಮಪ್ರೀತಿಯಿಂದ ಬೇಕಾದ ಉಪಚಾರಗಳನ್ನು ಮಾಡಿ ಬರಮಾಡಿಕೊಂಡರು. "ನಾವು ತಮ್ಮ ಖ್ಯಾತಿಯನ್ನು ಕೇಳಿದ್ದೆವು. ತಮ್ಮ ಶಿಷ್ಯಳ ಸಂಗೀತ ಕೇಳಬೇಕೆಂದು ಒಂದೆರಡುಸಲ ನಾವು ವೇಷವನ್ನು ಮರೆಸಿಕೊಂಡು ಬಂದಿದ್ದೆವು. ಆಚಾರ್ಯ, ಈಕೆಯ ಸಂಗೀತವನ್ನು ನಮ್ಮ ದರ್ಬಾರಿನಲ್ಲಿ ಕೇಳಬೇಕೆಂದು ನಾವು ತಮ್ಮ ಚಕ್ರವರ್ತಿಗಳೊಡನೆ ರಾಜಿ ಮಾಡಿಕೊಂಡಿದ್ದೇವೆ. ತಾವು ದಯಮಾಡಿಸಿದಿರಿ. ನಮ್ಮ ಆಶೆಯು ಸಫಲವಾಯಿತು. ತಾವು ಇಲ್ಲಿ ಆದಷ್ಟು ಕಾಲ ಇರಬೇಕು. ನಮ್ಮ ಕಿವಿಗಳಿಗೆ ಹಬ್ಬ ಮಾಡಬೇಕು. ಇಲ್ಲಿ ತಮಗೆ ಏನೇನು ಬೇಕೋ ಅದೆಲ್ಲವನ್ನೂ ನಮ್ಮ ದಿವಾನ್‌ಸಾಹೇಬರು ಮಾಡಿಸಿಕೊಡುವರು. ಯಾವ ವಿಚಾರದಲ್ಲೂ ತೊಂದರೆ ಮಾಡಿಕೊಳ್ಳದೆ ಸುಖವಾಗಿರಬೇಕು" ಎಂದು ತಾವೇ ಹೇಳಿದರು.

ಆಚಾರ್ಯರೂ ವಿನಯದಿಂದ ವಿಶ್ವಾಸದಿಂದ ಹೇಳಿದರು. "ಮಹಾಸ್ವಾಮಿ, ಚಕ್ರವರ್ತಿಗಳು ನಮಗೆ ಇಲ್ಲಿ ಒಂದು ತಿಂಗಳು ಬೇಕಾದರೂ ಇದ್ದು ಬನ್ನಿ ಎಂದು ಅಪ್ಪಣೆ ಕೊಟ್ಟಿದ್ದಾರೆ. ಜೊತೆಗೆ ನಾವು ಶ್ರೀಶೈಲಕ್ಕೂ ಹೋಗಿದ್ದು ಬರಬೇಕು ಎಂದುಕೊಂಡಿದ್ದೇವಾಗಿ, ಅದುವರೆಗೂ ಬೇಕಾಗುವ ಸಮಸ್ತವನ್ನೂ ಅಲ್ಲಿಂದಲೇ ಕಳುಹಿಸಿಕೊಟ್ಟಿದ್ದಾರೆ. ನಮಗೆ ಏನೂ ಬೇಕಿಲ್ಲ. ಬೇಕಾಗಿರುವುದು ತಮ್ಮ ಸನ್ನಿಧಾನದ ದಯೆಯೊಂದೇ!" ಎಂದರು.

ಸುಲ್ತಾನರು ಅದನ್ನು ಒಪ್ಪಲಿಲ್ಲ. ದಿವಾನರನ್ನು ಕರೆದು, "ವಿಜಯನಗರದ ರಾಯಭಾರಿಗಳಿಗೆ ಭರತಾಚಾರ್ಯರೂ, ಅವರ ಶಿಷ್ಯರೂ, ಮಿತ್ರರೂ, ಯಜಮಾನ್‌ಸೆಟ್ಟರೂ ನಮ್ಮ ಅತಿಥಿಗಳು ಎಂದು ತಿಳಿಸಿ. ಆಚಾರ್ಯರ ಬಿಡಾರದಲ್ಲಿ ದಿನವೂ ನೂರು ಜನರ ಸಂತರ್ಪಣೆಯಾಗಲಿ" ಎಂದು ಅಪ್ಪಣೆಮಾಡಿದರು.

ಸುಲ್ತಾನರು ಇನ್ನೂ ಅಷ್ಟುಹೊತ್ತು ಅತಿಥಿಗಳೊಡನೆ ಮಾತನಾಡುತ್ತಿದ್ದರು. ಎರಡುದಿನ ಸುಖವಾಗಿದ್ದು ಮಾರ್ಗಾಯಾಸವು ಪರಿಹಾರವಾದ ಮೇಲೆ ದರ್ಬಾರಿನಲ್ಲಿ ಸಂಗೀತವಾಗುವುದೆಂದು ಗೊತ್ತಾಯಿತು.

ಗೋಲ್ಕೊಂಡದ ತುಂಬಾ ರಾಜಾತಿಥಿಗಳ ಸುದ್ದಿಯು ಹರಡಿತು. ಎಲ್ಲರಿಗೂ ಆಶ್ಚರ್ಯ. "ವಿಜಯನಗರದ ಅರಮನೆಯನ್ನು ಸೂರೆಹೊಡೆದಿರುವ ಚಿನ್ನಾಸಾನಿ ಬಂದಿರುವಳಂತೆ; ಅವಳ ಗುರುಗಳು ಭರತಾಚಾರ್ಯರು, ನಾಟಕದ ದೊರೆ ಗೋಪಾಲರಾಯ ಬಂದಿರುವರಂತೆ" ಎಂದು ಎಲ್ಲರಿಗೂ ಆಶ್ಚರ್ಯ. ಗುರುವಾರ ದರ್ಬಾರಿನಲ್ಲಿ ಸಂಗೀತ ಎಂದು ಮಹಲಿನಿಂದ ಆಹ್ವಾನ ಬರದೆ ಇದ್ದಿದ್ದರೆ ಆ ಸುದ್ದಿಯನ್ನು ನಂಬುವುದು ಅನೇಕರಿಗೆ ಕಷ್ಟವಾಗುತ್ತಿತ್ತು.

ಗುರುವಾರವು ಬಂತು. ರಾತ್ರಿ ಮೊದಲನೆಯ ಝಾವದ ಕೊನೆಯಲ್ಲಿ ರಾಜಸಭೆಯು ಸೇರಿತು. ಅಂದಿನ ದಿನ ಸ್ವಯಂ ಆಚಾರ್ಯರೇ ಹಾಡುವುದಕ್ಕೆ ಕುಳಿತಿದ್ದಾರೆ. ಚಿನ್ನಾಸಾನಿಯೂ, ಗೋ ಪಾ ಲ ರಾ ಯ ರೂ ತಂಬೂರಿ ಹಾಕುತ್ತಿದ್ದಾರೆ. ರನ್ನಾಸಾನಿಯು ತಾಳಹಾಕುತ್ತಿದ್ದಾಳೆ. ಎಂದಿನಂತೆ ಪಕ್ಕವಾದ್ಯಗಳು. ಬಲಕ್ಕೆ ತಂತೀ ವಾದ್ಯಗಳು; ಎಡಕ್ಕೆ ಮೃದಂಗ.

ಆಚಾರ್ಯರೂ, ಅವರ ಪರಿವಾರವೂ ಭೂಷಣಭೂಷಿತರಾಗಿ ಕುಳಿತಿದ್ದಾರೆ. ಆ ಗುಂಪಿಗೆ ಇಂದು ಅದೇನೋ ವಿಶೇಷ ಕಳೆ ಬಂದಂತಿದೆ. ಯಾರಾದರೂ ಒಳಗಣ್ಣಿನವರು ನೋಡಿದ್ದಾದರೆ. ಯಾರೋ ಗಂಧರ್ವರು ಬಂದು ಅಲ್ಲಿ ಕುಳಿತಿದ್ದಾರೆ ಎನ್ನಬೇಕು. ಹಾಗೆ ಇದೆ. ಅದೇನು ಆ ಭೂಷಣಗಳ ಕಾಂತಿಯೋ, ವಸ್ತ್ರಗಳ ಡೌಲೋ, ವಿದ್ಯಾಪ್ರೌಢಿಮೆಯ ವರ್ಚಸ್ಸೋ, ಗಾನದೇವಿಯ ತೇಜಸ್ಸೋ, ಏನೂ ಹೇಳುವುದಕ್ಕಾಗುವುದಿಲ್ಲ. ಇದೇಮೊದಲು ಭರತಾಚಾರ್ಯರು ಬೇರೆ ದರ್ಬಾರಿನಲ್ಲಿ ಹಾಡಿರುವುದು. ವಿಜಯನಗರದಲ್ಲಿಯೂ ಆಚಾರ್ಯರ ಸಂಗೀತ ನಿತ್ಯನಿತ್ಯದ ಅಂಗಡಿಯ ಸರಕಲ್ಲ. ಅಲ್ಲಿಯೂ ಚಕ್ರವರ್ತಿಗಳು ಆಚಾರ್ಯರಿಗೆ ಹೇಳಿಕಳುಹಿಸಿ, ಅವರ ಸಮಯ ನೋಡಿ ತಮ್ಮ ಸಂಗೀತ ಕ್ಷುಧೆಯನ್ನು ನಿವಾರಿಸಿಕೊಳ್ಳಬೇಕು.

ಸಂಗೀತಕ್ಕೆ ಆರಂಭವಾಯಿತು. ಆಚಾರ್ಯರು ಎಡಬಲಗಳನ್ನು ನೋಡಿದರು. ತಂಬೂರಿಗಳ ನುಡಿತ ಮೊದಲಾಯಿತು. ಜೋಡಿ ತಂಬೂರಿಗಳು ನುಡಿಯುತ್ತಿದ್ದರೆ ಶಾರದಾದೇವಿಯ ಸಿಂಹಾಸನವನ್ನು ರಚಿಸುವುದಕ್ಕೆ ನಾದದೇವಿಯು ಹೊರಟು ಆರಂಭದ ಸೃಷ್ಟಿಲಾಸ್ಯವನ್ನು ರಚಿಸುತ್ತಿರುವಳೋ ಎನ್ನುವಂತಿದೆ. ಸುತ್ತಲೂ ಪಸರಿಸಿದ ಆ ಮನೋಹರ ಮಂಜುಲನಾದವು ರೇಶಿಮೆಯಹುಳವು ಗೂಡನ್ನು ಕಟ್ಟುವಂತೆ ವ್ಯೂಹವನ್ನು! ಕಟ್ಟುತ್ತಿದೆ.

ಅದನ್ನು ಕೇಳಿದ ಸಭಿಕರು ಸಂಗೀತಕ್ಕೆ ಹೊಸಬರಲ್ಲವಾದರೂ, ಆ ತಂಬೂರಿಯ ಶ್ರುತಿಯಲ್ಲಿ ಲೀನವಾಗುವ ವಿದ್ಯೆಯನ್ನು ಹೊಸದಾಗಿ ಕಲಿಯುತ್ತಿದ್ದಾರೆ. ಆ ಎರಡು ತಂಬೂರಿಗಳು, ಚೆನ್ನಾಗಿ ಸುರಿತ ಕುದುರೆಗಳ ಜೋಡಿ ಗಾಡಿಗೆ ಕಟ್ಟಿದಾಗ, ಎರಪಕ್ಕೂ ಒಮ್ಮನಸ್ಸೋ ಎಂಬಂತೆ ಒಂದೇ ನಡೆಗೆಯಿಂದ ನಡೆಯು ವಂತೆ, ಒಂದೇ ಮೀಟಿನಿಂದ ಎರಡೂ ನಡೆಯುತ್ತಿವೆಯೋ, ಅಥವಾ ಬಹುಕಾಲ ಸಂಸಾರವನ್ನು ಸುಖವಾಗಿ ನಿರ್ವಹಿಸಿರುವ ದಂಪತಿಗಳ ಹೃದಯದ ಎರಡು ತುಂಡುಗಳೋ ಎಂಬಂತೆ ಒಟ್ಟಿಗೆ ನುಡಿಯುತ್ತಿದ್ದರೆ, ಆ ನಾದವು ತೂಗುತ್ತಿರು ವಂತೆ ಆ ಉಯ್ಯಾಲೆಯ ಈ ಕೊನೆಯೊಂದು ಆ ಕೊನೆಯೊಂದು ತಂಬೂರಿ ಯಾಗಿರುವಂತೆ ಭಾಸವಾಗುತ್ತಿದೆ. ಸಭಿಕರಂತೂ ಆ ನಾದದಿಂದಲೇ, ಆ ಮಂಜುಲ ಶ್ರುತಿಯಿಂದಲೇ ಮುಗ್ಧರಾಗಿ ಹೋಗಿದ್ದಾರೆ.

ಆಚಾರ್ಯರು ಇಷ್ಟದೈವವನ್ನೂ, ಗುರುಪಾದವನ್ನೂ ಸ್ಮರಿಸಿ ರತ್ನ ಖಚಿತವಾದ ತೋಡಾಗಳಿಂದ ಭೂಷಿತವಾಗಿರುವ ಕೈಗಳನ್ನು ಮುಗಿದು ಎತ್ತಿ ಶಿರೋಭಾಗದಲ್ಲಿ ಜೋಡಿಸಿದರು. ಆ ಕೈಗಳನ್ನೆತ್ತಿ ಮುಗಿಯುವುದರಲ್ಲಿ ಅದೇನು ಭಂಗಿಯೋ ? ಅದೇನು ಭಾವವೋ ? ಅದೇನು ಭಕ್ತಿಯ ಭರವೋ ? ಅದೇನು ಆವೇಶವೋ ? ರಾಜಸಭೆಯೆಲ್ಲ ಮಂತ್ರಮುಗ್ಧವಾಗಿ ಹೋಯಿತು. ಆಚಾರ್ಯರು ಮಂತ್ರವಾದಿಯಾಗಿ ಮೋಹನ ಮಂತ್ರವನ್ನು ಪ್ರಯೋಗಿಸಿ ಮಂಕುಬೂದಿಯನ್ನು ಚಲ್ಲಿದ್ದರೆ ಸಭೆಯು ಹಾಗೆ ವಶವಾಗುತ್ತಿತ್ತೋ ಇಲ್ಲವೋ ? ಅಂತೂ ಸಭೆಗೆ ಸಭೆಯೋ ಈ ಕೊನೆಯಲ್ಲಿರುವ ಚೋಪ್‌ದಾರನಿಂದ ಹಿಡಿದು ಆ ಕೊನೆ ಯಲ್ಲಿರುವ ಸುಲ್ತಾನರವರೆಗೂ ಸರ್ವರೂ ಪ್ರಸನ್ನರಾಗಿ ಹೋದರು. ಎಲ್ಲರೂ ಸಂತುಷ್ಟರಾದರು.

ಆಚಾರ್ಯರು ಆರಂಭಿಸಿದರು. ದರ್ಬಾರುರಾಗದಲ್ಲಿ, ಆದಿತಾಳದಲ್ಲಿ ಸಂಗೀತವು ಮೊದಲಾಯಿತು.

ರಾಮಣ ಶ್ರೀಚರಣ ಸುರುಚಿರನಲಿನ ಮನಿಶಂ ||
ಮಂಗಳಮಾತನೋತು ನಃ ||

ಅವರು ಹಾಡುತ್ತಿದ್ದರೆ ಸಭೆಗೆ ಸಭೆಯೋ ಆ ಗಾನದಲ್ಲಿ ಲೀನವಾಗಿ ಹೋಗಿದೆ. ಸಭೆಯಲ್ಲಿ ಅಷ್ಟು ಜನರಿರುವುದಕ್ಕೆ ಪ್ರತಿಯಾಗಿ, ಅವರೆಲ್ಲರೂ ಸೇರಿ ಒಬ್ಬನಾಗಿದ್ದರೆ, ಆ ಒಬ್ಬನು ತನ್ನ ಮನಸ್ಸನ್ನು ಆಚಾರ್ಯರ

ವಶಪಡಿಸಿದ್ದರೆ, ಅವರು ಅದನ್ನು ಆ ಗಾನದಲ್ಲಿ ನಿಯೋಜಿಸಿದ್ದರೆ, ಅದೆಂತು ಆರೋಪಣದಲ್ಲಿ ಹತ್ತಿ ಅವರೋಹಣದಲ್ಲಿ ಇಳಿದು ಸಂಚಾರವಶವಾಗಿ ತಾನೂ ಸಂಚಾರ ಮಾಡಬೇಕೋ ಹಾಗೆ ಆಗುತ್ತಿದೆ.

ರಾಗಗಳು ಬೇರೆಬೇರೆಯಾದುವು. ಅವುಗಳ ಜೊತೆಯಲ್ಲಿ ತಾಳವೂ ಬೇರೆಯಾಯಿತು. ಒಂದೇ ಸಾಹಿತ್ಯವನ್ನು ಆಚಾರ್ಯರು ಏಳು ರಾಗ, ಏಳು ತಾಳಗಳಲ್ಲಿ ಹಾಡಿದರು. ಒಂದಕ್ಕಿಂತಲೂ ಒಂದು ಅದ್ಭುತವಾಗಿತ್ತು. ಸಭಿಕರು ಸುಳಿಗಾಳಿಯಲ್ಲಿ ತಿಳಿಯಾದ ಕೊಳದ ನೀರಿನ ಮೇಲೆ ಸುಖವಾಗಿ ನರ್ತನ ಮಾಡುವ ಮುಂಝಾವದ ಅರಳುತ್ತಿರುವ ತಾವರೆಯಂತೆ ಹಿಂದಕ್ಕೂ ಮುಂದಕ್ಕೂ ಒಲೆಯುತ್ತ, ಗಾನರಸಪಾನದಿಂದ ಮತ್ತರಾದವರಂತೆ ಮೈಮರೆತು ತಾವು ರಾಜಸಭೆಯಲ್ಲಿ ಇರುವೆವೆಂಬುದು ಮರೆತರೂ, ತಾವು ಗಟ್ಟಿಯಾಗಿ ಉಸಿರು ಬಿಟ್ಟರೆ ಮೇಲೆ ಮೇಲೆ ತರಂಗತರಂಗವಾಗಿ ಬರುತ್ತಿರುವ ಗಾನ ಪ್ರವಾಹಕ್ಕೆ ಏನು ಅಡ್ಡಿಯಾಗುವುದೋ ಎಂದು ಹೆದರಿಕೊಂಡವರಂತೆ ಅಥವಾ ಆಚಾರ್ಯರ ಸಂಗೀತವನ್ನು ಕೇಳಿ ಸಂಯಮವನ್ನು ಕಲಿಯುತ್ತಿರುವವರಂತೆ, ಶ್ವಾಸನಿಯಮವನ್ನು ಆಚರಿಸುತ್ತಿರುವವರಂತೆ, ನಿಯಮಿತಪ್ರಾಣರಾಗಿ ಕೇಳಿದರು.

ಸುಲ್ತಾನರು ಆನಂದದಲ್ಲಿ ಪರವಶರಾಗಿ ತಾವು ಭದ್ರಾಸನದಲ್ಲಿ ಕುಳಿತಿರುವುದನ್ನು ಮರೆತು, ಪದ್ಮಾಸನವನ್ನು ಬಿಟ್ಟು ಸುಖಾಸನದಲ್ಲಿ ಕುಳಿತರು. ಅನೇಕ ವೇಳೆ ಸಂತೋಷದಲ್ಲಿ ಕೈಚಪ್ಪಾಳೆ ಇಡಬೇಕು ಎನ್ನಿಸುತ್ತದೆ. ಆದರೆ ಅದು ಎಷ್ಟು ಸೂಕ್ಷ್ಮವಾಗಿದ್ದರೂ ಗದ್ದಲವಾಡುವುದು; ಸಂಗೀತಕ್ಕೆ ವಿರೋಧವಾಗುವುದು ಎಂದು ಮನಸ್ಸು ಹೆದರಿ ಸುಮ್ಮನಾಗುತ್ತಾರೆ. ಕೈಯಲ್ಲಿದ್ದ ಕರವಸ್ತ್ರವಂತೂ ತೊಯ್ದುಹೋಗಿದೆ. ಮುಖವು ಗಾನಸುಧಾಪಾನದಿಂದ ರಂಗೇರಿದೆ.

ಏಳು ರಾಗಗಳೂ ಮುಗಿಯಿತು. ಆಚಾರ್ಯರು ಒಂದು ಶ್ವಾಸಬಿಡುವಷ್ಟು ಹೊತ್ತು ಅವಕಾಶಕೊಟ್ಟು ಕರವಸ್ತ್ರದಿಂದ ಮುಖವನ್ನು ಒರೆಸಿಕೊಂಡರು. ಆ ವೇಳೆಗೆ ಸರಿಯಾಗಿ ಎರಡನೆಯ ಝಾವವು ಮುಗಿಯಿತು ಎಂದು ಅರಮನೆಯ ಬಾಗಿಲ ಗಂಟೆಯು ಎಚ್ಚರಿಸಿತು. ಸಂಗೀತದಲ್ಲಿ ಮಗ್ನನಾಗಿ, ತಾನು ಹಿಡಿದಿದ್ದ ಸೋಟಾವನ್ನೇ ಅವಲಂಬಿಸಿ ನಿಂತು, ಮೈಮರೆತಿದ್ದ ಚೋಪ್‌ದಾರನು ಎಚ್ಚೆತ್ತು, ರಾಜಸಭೆಯು ಮುಕ್ತಾಯವಾಯಿತೆಂದು ತನ್ನ ಸಿಂಹಧ್ವನಿಯಿಂದ ಸಭೆಯನ್ನೆ

ಚ್ಚರಿಸಿದನು. ಸುಲ್ತಾನರು ಅತೃಪ್ತರಾಗಿದ್ದರೂ ಯತ್ನವಿಲ್ಲದೆ ಎದ್ದರು. ಎಲ್ಲರೂ ಎದ್ದರು.

ಆಚಾರ್ಯರಿಗೆ ಸುಲ್ತಾನರ ಕರೆಯು ಬಂತು. ದರ್ಬಾರು ಮಂಟಪದ ಹಿಂದೆ ಇದ್ದ ಮತ್ತೊಂದು ಮಂಟಪದಲ್ಲಿ ಸುಲ್ತಾನರು ಸುಖಾಸನದಲ್ಲಿ ಕುಳಿತಿದ್ದಾರೆ. ಆಚಾರ್ಯರು ರಾಜಾಜ್ಞೆಯಂತೆ ಬಂದು ಕಾಣಿಸಿಕೊಂಡರು. ಸುಲ್ತಾನರು ಎದ್ದು ಮುಂದೆ ಬಂದು ಅವರ ಕೈಹಿಡಿದು ಕರೆದುಕೊಂಡುಹೋಗಿ ಮಗ್ಗುಲಲ್ಲಿ ಕುಳ್ಳಿರಿಸಿಕೊಂಡರು. ಸಂತೋಷದಿಂದ ಕಣ್ಣುಗಳಲ್ಲಿ ನೀರೆಯು ಉದುರುತ್ತಿರಲು ಮಾತನಾಡಿಸಿದರು. "ಆಚಾರ್ಯ, ತಾವು ಸಂಗೀತಗಾರರಲ್ಲ. ಸಂಗೀತ ಎನ್ನುತ್ತ ಯಾವುದೋ ಮಂತ್ರಶಾಸ್ತ್ರ ಅಭ್ಯಾಸಮಾಡಿದ್ದೀರಿ. ಈಗ ನಾವು ಕೇಳಿದ್ದು ಸಂಗೀತವಲ್ಲ. ಇಲ್ಲಿಂದ ಇನ್ನು ಯಾವುದೋ ಲೋಕಕ್ಕೆ ಕರೆದುಕೊಂಡುಹೋಗಿ ಮತ್ತೆ ಸುಖವಾಗಿ ಕರೆತಂದು ಇಲ್ಲಿಯೇ ಇಳಿಸಿದ ಗಾನ ವಿಮಾನ. ನಾವು ಇಷ್ಟು ದಿನ ಬದುಕಿದ್ದುದು ಸಾರ್ಥಕವಾಯಿತು" ಎಂದು ತುಂಬಿದ ಕಂಠದಿಂದ ಹೇಳಿದರು. ಅವರು ಹೇಳಿದುದು ಅಕ್ಷರಶಃ ನಿಜವೆಂಬುದನ್ನು ಅವರ ದೇಹ, ಅವರ ಸರ್ವಸ್ವವೂ ಹೇಳುತ್ತಿತ್ತು.

ಆಚಾರ್ಯರು ಆ ಸ್ತುತಿಯನ್ನೊಪ್ಪಿಕೊಳ್ಳುತ್ತಾ, "ಮಹಾಪ್ರಭು, ನಮ್ಮಲ್ಲಿ ಒಂದು ಶಾಸ್ತ್ರವಿದೆ. ನಾವು ಯಾರ ಅನ್ನವನ್ನು ತಿನ್ನುತ್ತೇವೆಯೋ ಅವರ ಬುದ್ಧಿಯಂತೆಯೇ ನಮ್ಮ ಬುದ್ಧಿಯೂ ಆಗುತ್ತದೆಯೆಂದು. ಈಗ ಅದು ನಿಜವಾಯಿತು. ವಿಜಯನಗರದ ಅನ್ನದಿಂದ ಬೆಳೆದಿದ್ದ ಬುದ್ಧಿ ಇಂದು ಗೋಲ್ಕೊಂಡದ ಅನ್ನವನ್ನು ತಿಂದು ಪಲ್ಲವಿಸಿತು. ನಮ್ಮ ಮಹಾಸ್ವಾಮಿಯವರು ಕೃಪೆಯಿಂದ ವರ್ಧಿಸಿದ ಸಂಗೀತವಲ್ಲರಿ ಇಂದು ಈ ಆಸ್ಥಾನದಲ್ಲಿ ರಸಫಲವನ್ನು ತೋರಿದರೆ, ಅದು ತಮ್ಮಿಬ್ಬರ ಆಶ್ರಯದ ಪ್ರಭಾವ. ಮಹಾಸ್ವಾಮಿ, ಬಳ್ಳಿಗಳು ಆಶ್ರಯ ಸಿಕ್ಕಿದರೆ ಆಕಾಶಕ್ಕೂ ಹತ್ತುವುವು; ಇಲ್ಲದಿದ್ದರೆ ನೆಲದಲ್ಲಿ ಕಾಲು ತುಳಿತಕ್ಕೆ ಸಿಕ್ಕುವುವು. ಅದರಿಂದ ಆಶ್ರಯ ದೊಡ್ಡದು. ಎಲ್ಲವೂ ತಮಗೆ ಸೇರಿದ್ದು. ತಮ್ಮ ಕೃಪೆ, ಎಂದು ವಿನಯವಾಗಿ, ವಿಶ್ವಾಸವಾಗಿ ನುಡಿದರು.

ಸುಲ್ತಾನರು ಮಾತು ಮುಗಿಯಗೊಡದೆ, "ಆಚಾರ್ಯ, ತಮ್ಮ ಸಂಗೀತ ಕೇಳಿ ಇಂದು ನಮಗೆ ತಲೆಯು ಕೆಟ್ಟುಹೋಯಿತು. ನಮ್ಮ ಕಿವಿ, ನಮ್ಮ ಮನಸ್ಸು, ಎಳೆದುಕೊಂಡು ಬಿಟ್ಟಿರಿ. ಇನ್ನೂ ಎರಡು ಮೂರು ದಿನವಾದರೂ

ತಮಗೆ ಆಯಾಸವಾಗುವವರೆಗೂ ತಮ್ಮ ಕಚೇರಿ ನಡೆಯಲಿ. ನಮಗೆ ತಮ್ಮ ಸಂಗೀತ ಬೆಳಗಿಂದ ಸಂಜೆಯವರೆಗೂ ಕೇಳಿದರೂ ಬೇಡ ಎನ್ನಿಸುವುದಿಲ್ಲ. ತೃಪ್ತಿಯಾಗುವುದಿಲ್ಲ" ಎಂದು ಹೇಳಿಕೊಂಡರು.

ಆಚಾರ್ಯರು ಸುಲ್ತಾನರು ಹಿಡಿದಿರುವ ಕೈಯನ್ನು ಜೋಡಿಸಿಕೊಂಡು "ಖಾವಂದ್‌ರು ನಮ್ಮ ಶಿಷ್ಯಳ ಸಂಗೀತವನ್ನು ಒಮ್ಮೆ ಕೇಳಬೇಕು. ದೇವರು ನಮಗಿಂತಲೂ ಆಕೆಗೆ ಚೆನ್ನಾಗಿ ಒಲಿದಿದ್ದಾನೆ" ಎಂದರು.

ಸುಲ್ತಾನರು ನಗುತ್ತಾ "ಆಗಬಹುದು. ಆದರೆ ಮೊದಲು ಗುರುಗಳು, ಆಮೇಲೆ ಶಿಷ್ಯರು. ನಾಳೆ ನಾಳಿದ್ದು ತಮ್ಮ ಕೃಪೆ ನಮ್ಮ ಮೇಲೆ ಆಗಲಿ. ನಾಳೆ ಇನ್ನೂ ಅಷ್ಟು ಹೊತ್ತು ಮುಂಚಿತವಾಗಿ ಆರಂಭವಾಗಿ, ಇನ್ನೂ ಅಷ್ಟು ಹೊತ್ತು ಆದಮೇಲೆ ಕಚೇರಿ ಮುಗಿಯಬಹುದಷ್ಟೆ?" ಎಂದರು.

ಆಚಾರ್ಯರು ನಗುತ್ತಾ, "ಖಾವಂದ್‌ರಿಗೆ ಅಷ್ಟು ಸಂತೋಷವಾದರೆ, ಕಚೇರಿಯು ಎರಡು ಝಾವದ ಹೊತ್ತು ಆಗಬಹುದು" ಎಂದರು.

ಸುಲ್ತಾನರು ಆಶ್ಚರ್ಯಪಡುತ್ತಾ ಹೇಳಿದರು. "ಹಾಗೆ ಆಗುವುದಾದರೆ ನಮಗೂ ಸಂತೋಷ. ಆದರೆ ತಮ್ಮ ವಯಸ್ಸು ನೋಡಿ ಹೆದರಿದೆವು."

"ಮಹಾಸ್ವಾಮಿ, ವಯಸ್ಸು ದೇಹಕ್ಕೆ, ಉತ್ಸಾಹ ಮನಸ್ಸಿಗೆ. ಸಂಗೀತ ಕೇಳಿದವರಿಗೆ ಸಂತೋಷವಾಗುವ ಹಾಗಿದ್ದರೆ, ಅದನ್ನು ಹಾಡಿದವರಿಗೂ ಸಂತೋಷ ಆಗಬೇಕಲ್ಲವೆ? ಮಹಾಸ್ವಾಮಿ ನಮಗೆ ಗುರುವಿನ ಕೃಪೆ, ಹಾಡುತ್ತ ಹಾಡುತ್ತ ನಮ್ಮ ಶಕ್ತಿ ಉತ್ಸಾಹ ಬೆಳೆಯುತ್ತವೆ. ಅಲ್ಲದೆ, ನಮ್ಮ ಉತ್ಸಾಹ ರಾಗಗಳೂ ಅಷ್ಟೆ. ಮನಸ್ಸಿನಗುಣವನ್ನು ಬೆಳಸುತ್ತವೆಯಂತಲೇ ಅವಕ್ಕೆ ರಾಗ ಎಂದು ಹೆಸರು. ಜಂಭದಿಂದ ನಾನು ಹಾಡುತ್ತೇನೆಯೆಂದಾಗ್ಗ ತಪ್ಪದೆ ಆಯಾಸ ವಾಗುತ್ತದೆ; ಆದರೆ ಒಳಗಿಂದ ಬರುವ ಸಂಗೀತ ನಾನೂ ಕೇಳುತ್ತಿದ್ದೇನೆ ಎಂಬ ಭಾವದಲ್ಲಿ ಕುಳಿತರೆ ನಮಗೆ ಎಳ್ಳಷ್ಟೂ ಆಯಾಸವಾಗುವುದಿಲ್ಲ. ಒಂದು ರಾತ್ರಿ ಪೂರ್ಣವಾಗಿ ಹಾಡಿ ನೋಡಿದ್ದೇನೆ. ಮಹಾಸ್ವಾಮಿಯವರಿಗೆ ಗೊತ್ತಿರಬೇಕು. ನಮ್ಮಲ್ಲಿ ಏಕಾದಶಿ ಮಾಡುತ್ತೇವೆ. ಆದಿನ ಶುದ್ಧವಾಗಿ ಉಪವಾಸಮಾಡಿ ರಾತ್ರಿಯೆಲ್ಲ ಭಜನೆಮಾಡುವುದು ನಮ್ಮ ಸಂಪ್ರದಾಯ. ಅದು ಅಭ್ಯಾಸ ವಾಗಿರುವುದರಿಂದ ಸನ್ನಿಧಾನವು ಚಿಂತಿಸಬೇಕಾಗಿಲ್ಲ."

" ಹಾಗಾದರೆ ಇವೊತ್ತು ಆರಂಭವಾದ ಹೊತ್ತಿಗೆ ಆರಂಭವಾಗಿ ಮೂರು ಝಾಮದವರೆಗೆ ನಡೆಯಬಹುದೆ ?

" ಆಗಬಹುದು."

ಸುಲ್ತಾನರಿಗೆ ಆಶ್ಚರ್ಯವಾಗಿಹೋಯಿತು. ಭಕ್ಷಿಯವರ ಮುಖವನ್ನು ನೋಡಿದರು. ಅದೇ ಅಪ್ಪಣೆಯಾಯಿತು.

ಇನ್ನೂ ಎರಡುದಿನ ಆಚಾರ್ಯರ ಕಚೇರಿಯಾಯಿತು. ಸುಲ್ತಾನರು ಆನಂದಪರವಶವಾಗುವುದಿರಲಿ, ದರ್ಬಾರಿಗಳಂತೂ ಇಂತಹ ಸಂಗೀತ ಕೇಳಿ ತಮ್ಮ ಜನ್ಮ ಸಾರ್ಥಕವಾಯಿತು ಎನ್ನುತ್ತಿದ್ದಾರೆ. ಗೋಲ್ಕೊಂಡದ ತುಂಬ ಆಚಾರ್ಯರ ಅದ್ಭುತ ಸಂಗೀತದ ಮಾತೇ ಮಾತು.

ಮೂರನೆಯ ದಿನದ ರಾತ್ರಿ ಒಂದು ವಿಶೇಷವಾಯಿತು. ಆಚಾರ್ಯರು ಅರ್ಧರಾತ್ರಿಯಾದಮೇಲೆ ಹಾಡುತ್ತಿದ್ದಾರೆ. ಭೂಪಾಳಿರಾಗದ ಆಲಾಪನ ನಡೆದಿದೆ. ರಾಗದ ಮೂರ್ಛನಗಳು ಒಂದರಮೇಲೊಂದು ಬಂದಹಾಗೆಲ್ಲಾ ಸಭಿಕರಿಗೆ ನಿದ್ದೆಯ ಜೋಂಪು ಹಿಡಿಯುತ್ತಿದೆ. ಬಹು ಕಷ್ಟದಿಂದ ನಿದ್ದೆಯನ್ನು ತಡೆಯುತ್ತಿದ್ದಾರೆ. ಗವಾಯ್ ಫಾಜಿಯುದ್ದೀನರಂತೂ ಸಂಪೂರ್ಣವಾಗಿ ರಾಗಭಾರಕ್ಕೆ ಮನಸೋತು ಪರವಶರಾಗಿದ್ದವರು. ಅವರಿಗೆ ಅರಿವೇ ಇಲ್ಲದೆ ನಿದ್ದೆಯು ಬಂದುಬಿಟ್ಟಿದೆ. ಕೈಯು ತಾಳವನ್ನು ಹಾಕುತ್ತಿದೆ. ಸುಲ್ತಾನರಿಗೆ ನಿದ್ದೆಯೂ ಬಂದು ಒಂದು ಸುಖಸ್ವಪ್ನವೂ ಆಗಿದೆ.

ಆಚಾರ್ಯರು ಭೂಪಾಳಿಯ ಕೀರ್ತನವನ್ನು ಸಣ್ಣದನಿಯಲ್ಲಿ ಹಾಡಿದರು. ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ಅದಕ್ಕೆ ಬಂದಿರುವ ಸಣ್ಣನಿದ್ದೆಯು ಗಾಢವಾಗಲೆಂದು ತಾಯಿಯುಹಾಡುವ ಜೋಗುಳದಂತೆ ವ್ಯಕ್ತಾವ್ಯಕ್ತವಾಗಿರುವ ಸೂಕ್ಷ್ಮ ಕಂಠದಲ್ಲಿ ಹಾಡಿದರು. ಪಕ್ಕವಾದ್ಯಗಳವರು ಅದಕ್ಕೆ ತಕ್ಕಂತೆ ಅಡಗಿಸಿ ಬಾರಿಸಿದರು. ಸಭಿಕರಿಗೆ ಬಂದಿದ್ದ ನಿದ್ರಾಭಾವವು ಬಲಿಯಿತು; ಸುಖಸಮಾಧಿಯಾಯಿತು.

ಮತ್ತೆ ಆಚಾರ್ಯರು ಬಿಲಹರಿಯನ್ನು ಹಾಡಿದರು. ಒಬ್ಬೊಬ್ಬರಾಗಿ ಸುಖವಾಗಿ ಕಣ್ಣು ತೆರೆದರು. ಎಲ್ಲರಿಗೂ ಹೊಸತನ ಬಂದಿದೆ. ರಾತ್ರಿಯ ಜಾಗರಣದ ಆಯಾಸವೆಲ್ಲ ಕಳೆದಿದೆ. ಗಾಢನಿದ್ರೆಯಿಂದೆದ್ದು ಮೈಮುರಿದಂತೆ ಆಗಿದೆ. ಆ ರಾಗದ ಕೃತಿಯು ಮುಗಿಯಿತು. ಧನ್ಯಾಸಿಯ ಕೃತಿಯು

ಬಂತು. ಧನ್ಯಾಸಿಯನ್ನು ಹಾಡುತ್ತಿದ್ದರೆ ಸಭಿಕರಿಗೆ ಮೈಯಲ್ಲಿರುವ ನಾಡಿಗಳೆಲ್ಲ ಸೂರ್ಯೋದಯದ ವೇಳೆಯಲ್ಲಿ ಅರಳುವ ಕಮಲಗಳಂತೆ ಅರಳುತ್ತಿವೆ. ಆಗ ಗವಾಯ್ ಸಾಹೇಬರು ಕಣ್ಣು ಬಿಟ್ಟರು.

ಅಂದಿನ ಕಚೇರಿಯಂತೂ ಅದ್ಭುತ ಎನ್ನಿಸಿಕೊಂಡಿತು. ಸುಲ್ತಾನರು ಆಚಾರ್ಯರನ್ನು ಕರೆಸಿಕೊಂಡು ಅವರನ್ನು ಆದರಿಸಿ ಆಸನದಮೇಲೆ ಕುಳ್ಳಿರಿಸಿ, ತಾವು ನಿಂತುಕೊಂಡು, ಕೈಮುಗಿದುಕೊಂಡು, "ಆಚಾರ್ಯ, ತಮ್ಮ ಚಕ್ರವರ್ತಿಗಳು ತಮಗೆ ಕೊಟ್ಟಿರುವ ಬಿರುದು ಸರ್ವಥಾ ಮಾನ್ಯವಾದುದು. ಅದಕ್ಕಿಂತ ಹೆಚ್ಚಾಗಿ ನಾವು ಏನೂ ಮಾಡಲಾರೆವು. ತಾವು ಮನುಷ್ಯಮಾತ್ರದವರಲ್ಲ. ತಮ್ಮ ಶಾಸ್ತ್ರಗಳು ಹೇಳುವಂತೆ ತಾವು ದಿವ್ಯಾಂಶ ಪುರುಷರು. ಬಹಳ ವಿಶೇಷವಾಗಿ ದೇವಪೂಜೆಯನ್ನು ಮಾಡಿದವರು. ತಮ್ಮಂತಹ ಸಂಗೀತಗಾರರನ್ನು ಇಟ್ಟುಕೊಂಡಿರುವ ಚಕ್ರವರ್ತಿಗಳೇ ಧನ್ಯರು. ಇಂದು ತಮ್ಮನ್ನು ಬಹಳ ಆಯಾಸಪಡಿಸಿದ್ದೇವೆ. ನಮ್ಮನ್ನು ಕ್ಷಮಿಸಬೇಕು" ಎಂದರು.

ಆಚಾರ್ಯರು ಸಮಯಕ್ಕೆ ತಕ್ಕಂತೆ ಎರಡು ಒಳ್ಳೆಯ ಮಾತಾಡಿ ಉಪಚಾರದಿಂದ ಎಲ್ಲವನ್ನೂ ಸಮಾರೋಪ ಮಾಡಿದರು. ಮರುದಿನ ಏಕಾದಶಿ. ಆಚಾರ್ಯರಿಗೆ ಜಾಗರಣ. ರಾತ್ರಿಯೆಲ್ಲ ಭಜನ. ಅದರಿಂದ ಆದಿನ ಅರಮನೆಯಲ್ಲಿ ಸಂಗೀತವಿಲ್ಲ. ಅದರ ಮರುದಿನ ಚಿನ್ನಾಸಾನಿಯ ಸಂಗೀತ ಎಂದಾಯಿತು.

# ಅಧ್ಯಾಯ ಹನ್ನೆರಡು

ಮಧ್ಯಾಹ್ನ ಸುಮಾರು ಮೂರನೆಯ ಘಾವದ ಕೊನೆಯಿರಬಹುದು. ದರ್ಬಾರು ಭಕ್ಷಿಯವರು ಆಚಾರ್ಯರನ್ನು ಕಾಣಲು ಬಂದಿದ್ದಾರೆ. ಆಚಾರ್ಯರಿಗೆ ಆದಿನ ಉಪವಾಸ. ಸಾಮಾನ್ಯವಾಗಿ ಅವರ ಶಿಷ್ಯರಲ್ಲದೆ ಇನ್ನು ಯಾರೂ ಆದಿನ ಅವರನ್ನು ನೋಡುವಂತಿಲ್ಲ. ಅದರಿಂದ ಅವರು ಒಳಗೆ ಏಕಾಂತದಲ್ಲಿ ಕುಳಿತಿರುವರು.

ಏಕಾಂತದಲ್ಲಿ ಕುಳಿತಿದ್ದವರಿಗೆ ಭಕ್ಷಿಯವರು ಬಂದಿರುವ ಸಮಾಚಾರ ತಿಳಿಯಿತು. ಆಚಾರ್ಯರ ಪ್ರತಿನಿಧಿಯಾಗಿ ಗೋಪಾಲರಾಯರು ಬಂದು ಅವರನ್ನು ಕರೆದುಕೊಂಡುಹೋಗಿ ಒಳಗೆ ಸುಖಾಸನದಲ್ಲಿ ಕುಳ್ಳಿರಿಸಿದರು. "ಈದಿನ ಆಚಾರ್ಯರಿಗೆ ಉಪವಾಸದ ದಿನ. ಅದರಿಂದ ದರ್ಬಾರಿಗಳ ದಿರಸ್ಸು ಹಾಕಿಕೊಳ್ಳುವುದಿಲ್ಲ. ಹಾಗೆ ಬಂದು ನೋಡಿದರೆ ತಪ್ಪಿಲ್ಲವಲ್ಲ?" ಎಂದು ಕೇಳಿದರು. ಭಕ್ಷಿಯವರು, "ನಾವು ತುರುಕರು. ಈದಿನ ಆಚಾರ್ಯರು ನಮ್ಮನ್ನು ನೋಡುವುದಿಲ್ಲ ಎಂದರೂ ನಾವು ಅದಕ್ಕೆ ಸಿದ್ಧ. ಇದೋ ಇವರು ನಮ್ಮ ಗವಾಯ್ ಸಾಹೇಬರು. ಇವರು ದಿಲ್ಲಿಯಲ್ಲಿದ್ದವರು. ಈಗ ಬೀದರ್‌ನಲ್ಲಿ ಇದ್ದಾರೆ. ಇವರು ಆಚಾರ್ಯರನ್ನು ಕಂಡು ಸಲಾಂ ಮಾಡಿ ಹೋಗಬೇಕು ಎಂದು ಬಂದಿದ್ದಾರೆ. ಅವರಿಗೆ ತೊಂದರೆ ಇಲ್ಲವಾದರೆ ನಮಗೆ ದರ್ಶನ ಆಗಲಿ" ಎಂದರು.

ಆಚಾರ್ಯರು ಒಂದು ಉತ್ತರೀಯವನ್ನು ಹೊದೆದಿದ್ದಾರೆ. ಗರಿಮುರಿಯಾಗಿ ಉಟ್ಟಿರುವ ಪಂಚೆ ಅಚ್ಚುಕಟ್ಟಾಗಿದ್ದು ಅವರ ವೈದಿಕನಿಷ್ಠೆಯನ್ನು ತೋರಿಸುತ್ತಿದೆ. ಆ ಎರಡರ ಕಲಾಪತ್ತಿನ ಅಂಚುಗಳೂ, ತೆಳುಪೂ, ನಯವೂ ಅವರ ಆಢ್ಯತೆಯನ್ನು ತೋರಿಸುತ್ತಿವೆ. ಅವರ ದೇಹವು ಚಿನ್ನದ ಬಣ್ಣವಾಗಿದ್ದು ತಾನೆಷ್ಟು ಸುಖವಾಗಿದ್ದೇನೆ ಎಂಬುದನ್ನು ಬಾಯಿಬಿಟ್ಟು ಹೇಳಿಕೊಳ್ಳುತ್ತಿದೆ. ಕಂಠದಲ್ಲಿರುವ ತುಲಸೀಮಣಿಗಳ ಸರವು ಅವರ ದೈವಭಕ್ತಿಯನ್ನು ಹೇಳುತ್ತಿದ್ದರೆ ಕೈಗಳಲ್ಲಿರುವ ಥೋಡಾಗಳೂ, ಬೆರಳುಗಳಲ್ಲಿರುವ ಉಂಗುರಗಳೂ ಅವರಿಗೆ ದೊರಕಿರುವ ರಾಜಾನುಗ್ರಹವನ್ನು ಪ್ರಕಟಿಸುತ್ತಿವೆ.

ಆಚಾರ್ಯರು ಒಂದು ದೂರದಲ್ಲಿ ಹಾಕಿದ್ದ ಒಂದು ಕೃಷ್ಣಾಜಿನದ ಮೇಲೆ ಕುಳಿತರು. ಆಗಂತುಕರಿಗೆ ತಾವು ವಂದಿಸಿ, ಅವರ ಪ್ರತಿವಂದನೆಗಳನ್ನು ಸ್ವೀಕರಿಸಿ, ಕುಶಲಪ್ರಶ್ನೆಗಳ ಪ್ರಥಮೋಪಚಾರವನ್ನು ಸಲ್ಲಿಸಿದರು. ದರ್ಬಾರ್ ಭಕ್ಷಿಯವರು ಆಚಾರ್ಯರಿಗೆ ಗವಾಯ್ ಸಾಹೇಬರ ಪರಿಚಯವನ್ನು ಮಾಡಿ ಕೊಟ್ಟರು.

ಹಾಗೆಯೇ ಒಂದು ಅಷ್ಟುಹೊತ್ತು ಸುಖಸಲ್ಲಾಪಗಳು ನಡೆದಮೇಲೆ ಆಚಾರ್ಯರು ಹೇಳಿದರು. "ಇವೊತ್ತಿನ ದಿವಸ ತಾವು ದಯಮಾಡಿಸಿದ್ದೀರಿ. ನಾವು ಇವೊತ್ತಿನ ದಿವಸ ಏನೂ ತೆಗೆದುಕೊಳ್ಳುವುದಿಲ್ಲ. ಅದರಿಂದ ತಾವು ಕೋಪಗೊಳ್ಳಬಾರದು. ಭಕ್ಷಿಯವರು ದೊಡ್ಡಮನಸ್ಸುಮಾಡಿ ಇಲ್ಲಿಗೆ ಇನ್ನೊಂದು ದಿವಸ ದಯಮಾಡಿಸಬೇಕು. ಇವೊತ್ತಿನ ಹಾಗೆಯೇ ಗವಾಯ್ ಸಾಹೇಬರನ್ನೂ ಜೊತೆಯಲ್ಲಿ ಕರೆದುಕೊಂಡು ಬರಬೇಕು. ನಮ್ಮ ಅತಿಥ್ಯ ವನ್ನು ಸ್ವೀಕರಿಸಿ ನಮ್ಮನ್ನು ಕೃತಾರ್ಥರನ್ನು ಮಾಡಬೇಕು" ಎಂದು ನಗು ನಗುತ್ತ ಮಾತಿನ ಅರ್ಥವನ್ನು ಪ್ರಕಟಿಸುವ ಹಾವ, ಭಾವ, ಮುದ್ರೆಗಳನ್ನು ಪ್ರದರ್ಶಿಸುತ್ತ ಹೇಳಿದರು.

ಭಕ್ಷಿಯವರು ಗವಾಯ್ ಸಾಹೇಬರ ಮುಖವನ್ನು ನೋಡಿದರು. ಅವರು ಹೃದಯದಲ್ಲಿ ತುಂಬಿರುವ ಸಂತೋಷವನ್ನು ತಮ್ಮ ಅರಳಿದ ಮುಖವೇ ಹೇಳುತ್ತಿರಲು, "ಗವಾಯ್ ಸಾಹೆಬ್, ತಾವು ನಮ್ಮನ್ನು ಇವೊತ್ತು ಬಂದು ನೋಡಿದ್ದೇ ನಮ್ಮ ನಸೀಬ್. ಇಲ್ಲಿಗೆ ಬಂದಮೇಲೆ ತಮ್ಮದು ಉಪವಾಸ ಅಂತ ಕೇಳಿ ಮನಸ್ಸು ಷಿಕಸ್ತಾ ಆಗಿಹೋಗಿತ್ತು. ಈಗ ಮೂರು ದಿನದಿಂದ ತಮ್ಮ ಗಾನಾ ಕೇಳಿದಾಗ ಜಿನ್ನತ್‌ಗೆ ಹೋಗಿದ್ದೆವು. ಇವೊತ್ತು ತಮಗೆ ಅದನ್ನು ಸುಲಾವಣೆ ಮಾಡಬೇಕು ಎಂತಲೇ ಬಂದೆವು. ಆಗಲಿ. ಇವೊತ್ತು ತಮ್ಮದು ನಜರ್ ನಮ್ಮ ಮೇಲೆ ಬಿತ್ತು. ತಾವು ಈ ದಿನ ಖುದಾನ ಜೊತೆಯಲ್ಲಿ ಇರಿ. ಇನ್ನು ಮೂರು ನಾಲ್ಕು ದಿನ ಬಿಟ್ಟು ತಮ್ಮ ಶಿಷ್ಯರದು ಗಾನಾನೂ ಕೇಳಿ ಆಮೇಲೆ ಬಂದು ದರ್ಶನ ಪಡೆಕೊಳ್ಳುತ್ತೇನೆ. ಗರೀಬನ ಮೇಲೆ ಕೃಪಾ ಇರಬೇಕು." ಎಂದು ಬಹು ವಿನಯ ವಿಶ್ವಾಸಗಳಿಂದ ಹೇಳಿ ಕೊಂಡರು.

ಆಚಾರ್ಯರೂ ಸಂತೋಷಪಟ್ಟರು. "ಗವಾಯ್ ಸಾಹೆಬ್, ಸಂಗೀತ

ಕಲಿತು, ಅದನ್ನು ದೇವರನ್ನು ಒಲಿಸಿಕೊಳ್ಳುವುದಕ್ಕೆ ಉಪಯೋಗಿಸುವವರು ಎಂದೂ ಗರೀಬರಲ್ಲ. ತಮ್ಮ ಹಾಗೆ ವಿದ್ಯಾವಂತರೂ, ಭಕ್ತರೂ ಆದವರು ಲೋಕದ ಬೆನ್ನುಮೂಳೆಗಳ ಹಾಗೆ. ತಾವು ಯಾವಾಗ ಬೇಕಾದರೂ ಬರಬಹುದು. ಇದು ತಮ್ಮ ಮನೆ. ತಮ್ಮಂಥವರು ನಮಗೆ ದರ್ಶನಕೊಟ್ಟರೆ ನಮ್ಮ ವಿದ್ಯೆಯ ಅಧಿದೇವತೆ ಶಾರದಾದೇವಿಯೇ ನಮಗೆ ದರ್ಶನಕೊಟ್ಟಂತೆ. ಇವೊತ್ತು ಏಕಾದಶಿ. ಹದಿನೈದು ದಿನಕ್ಕೆ ಒಂದು ಸಲ ಬರುತ್ತದೆ. ಆ ಒಂದು ದಿನ ತಾವು ತಮ್ಮ ರಂಜಾ಼ ಹಬ್ಬ ಮಾಡುವ ಹಾಗೆ ಉಪವಾಸಮಾಡಿ ರಾತ್ರಿಯಲ್ಲಿ ಒಂದು ಸಲ ಪೂಜೆಮಾಡಿ, ಉಳಿದ ಹೊತ್ತನ್ನೆಲ್ಲ ಭಜನೆಯಲ್ಲಿ ಕಳೆಯುವುದು ಸಂಪ್ರದಾಯ. ಅದನ್ನು ಬಿಡುವುದಕ್ಕೆ ಸಾಧ್ಯವಿಲ್ಲ. ನಮ್ಮವರು ಇದನ್ನು ಸಾವಿರಾರು ವರ್ಷಗಳಿಂದ ಮಾಡಿಕೊಂಡು ಬರುತ್ತಿದ್ದಾರೆ. ಅದರಿಂದ ಇವೊತ್ತು ಬಹಳಹೊತ್ತು ಕುಳಿತುಕೊಳ್ಳಲಿಲ್ಲ ಎಂದು ತಮ್ಮ ಮನಸ್ಸಿಗೆ ಆಯಾಸವಾಗದಿರಲಿ. ತಾವು ಅಗತ್ಯವಾಗಿ ಇನ್ನೊಂದು ದಿವಸ ದಯಮಾಡಿ. ಸಂತೋಷವಾಗಿ ಒಂದು ಝಾವ ಹೊತ್ತು ಕುಳಿತುಕೊಳ್ಳೋಣ" ಎಂದರು.

ಹೀಗೆಯೇ ಇನ್ನೂ ಅಷ್ಟು ಹೊತ್ತು ಮಾತನಾಡುತ್ತಿದ್ದು ಭಕ್ಷಿಯವರೂ, ಗವಾಯ್ ಸಾಹೇಬರೂ ಆಚಾರ್ಯರನ್ನು ಬೀಳ್ಕೊಂಡು ಹೊರಟರು.

# ಅಧ್ಯಾಯ ಹದಿಮೂರು

ಮರುದಿನ ರಾಜಸಭೆಯಲ್ಲಿ ಚಿನ್ನಾಸಾನಿಯ ಕಚೇರಿ. ಜಯದೇವ ಕವಿಯ ಅಷ್ಟಪದಿಗಳನ್ನು ಅಭಿನಯಿಸುತ್ತಾಳೆ. ಆದಿನ ಮಧ್ಯಾಹ್ನವೇ ಸುಲ್ತಾನರಿಗೆ ಗೋಪಾಲರಾಯರು ಗೀತಗೋವಿಂದವನ್ನು ವಿವರಿಸಿದ್ದಾರೆ. ಅವರಿಗಂತೂ ಆ ಪ್ರಾಸಾದಿಕವಾಣಿಯನ್ನು ಕೇಳುತ್ತಿದ್ದ ಹಾಗೆಯೇ ಸಂತೋಷವು ತಾನೇ ತಾನಾಗಿ ಎದೆಯುಬ್ಬುತ್ತದೆ. "ಇಂತಹ ಅಮರವಾಣಿ ಇನ್ನುಂಟೆ? ಎಲ್ಲಿ ಇನ್ನೊಂದು ಸಲ ಹೇಳಿ, ಮತ್ತೊಂದು ಸಲ ಹೇಳಿ" ಎಂದು ಒಂದೊಂದು ಅಷ್ಟಪದಿಯನ್ನು ಎರಡು ಸಲ ಮೂರು ಸಲ ಹೇಳಿಸಿ ಕೇಳಿ ಕೇಳಿ ಸಂತೋಷಪಟ್ಟಿದ್ದಾರೆ. ಗೋಪಾಲರಾಯರು ಸರಸವಾಗಿ, ಸುಖವಾಗಿ ಅಷ್ಟಪದಿಗಳನ್ನು ಹಾಡುತ್ತ, ಅದರ ಭಾವಗಳನ್ನು ವಿವರಿಸುತ್ತಿದ್ದರೆ ಸುಲ್ತಾನರು ಪರವಶರಾಗುತ್ತಾರೆ. ಎಲ್ಲವೂ ಆದಮೇಲೆ ಅವರಿಗೊಂದು ಸಂದೇಹವು ಬಂತು. ಮುಗ್ಗುಲಲ್ಲಿದ್ದ ಭಕ್ಷಿಯವರನ್ನು ಕರೆದು, "ನಮ್ಮ ದರ್ಬಾರಿಗಳಿಗೆ ಸಂಗೀತ ಗೊತ್ತು: ಅಭಿನಯ ಗೊತ್ತು; ಆದರೆ ಸಂಸ್ಕೃತವೂ ಗೊತ್ತೇನು? ಈ ಅಷ್ಟಪದಿಗಳ ಅರ್ಥ ತಿಳಿದರೆ, ಸಂತೋಷ ಹೆಚ್ಚುತ್ತದೆ ಅಲ್ಲವೆ? ಅದರಿಂದ, ತಮ್ಮ ದರ್ಬಾರಿನ ಕಾಯಿದೆಗಳಿಗೆ ಭಂಗವಿಲ್ಲ ಎನ್ನುವ ಹಾಗಿದ್ದರೆ, ಮೊದಲು ರಾಯರು ಅಷ್ಟಪದಿಯನ್ನು ಓದಿ ಅದರ ಅರ್ಥ ಹೇಳಿಬಿಡಲಿ. ಅನಂತರ ಅಭಿನಯ ಆಗಲಿ. ಏನೆನ್ನುತ್ತೀರಿ?" ಎಂದು ಕೇಳಿದರು.

ಭಕ್ಷಿಯವರು "ಖಾವಂದ್‌ರ ಹುಕುಂ ಆದ ಹಾಗೆ. ಆದರೆ, ನಿನ್ನೆಯ ದಿನ ಆಚಾರ್ಯರೂ ಉಪವಾಸಮಾಡಿದ್ದಾರೆ; ರಾತ್ರಿಯೆಲ್ಲ ಭಜನೆಮಾಡಿದ್ದಾರೆ. ಖಾವಂದ್‌ರ ಹುಕುಂ ಮೀರೆ ಆದರೆ, ಮೊನ್ನೆಯ ಹಾಗೆ ರಾತ್ರಿಯೆಲ್ಲ ಆಗುತ್ತದೆ. ಇದರ ಮೇಲೆ ಹುಜೂರ್‌ನಲ್ಲಿ ಏನು ಹುಕುಂ ಆದರೆ ಅದೇ ಸರಿ" ಎಂದು ಕೈಮುಗಿದರು.

ಸುಲ್ತಾನರು ಯೋಚಿಸಿದರು. "ಹಾಗಾದರೆ ಇವೊತ್ತು ಅರ್ಥ ಆಗಲಿ. ನಾಳೆ ಅರ್ಥ ಆಗಲಿ. ನಾವು ಹೇಳಿದಂತೆ ಮೊದಲು ನಮ್ಮ ರಾಯರು ಹೇಳಿ

ಅರ್ಥ ಹೇಳಬೇಕು. ಆಮೇಲೆ ಅವರದು ಅಭಿನಯ. ರಾವ್‌ಸಾಹೇಬ್, ತಾವು ಈಗ ನಮ್ಮ ಹತ್ತಿರ ಹೇಗೆ ರಾಗವಾಗಿ ಹಾಗೆ ಹೀಗೆ ಭಾವವಾಗಿ ಹೇಳಿದಿರಿ ಹಾಗೆಯೇ ದರ್ಬಾರಿನಲ್ಲೂ ಹೇಳಬೇಕು. ನಮಗೆ ಆದ ಆನಂದ ನಮ್ಮ ದರ್ಬಾರಿಗಳಿಗೂ ಆಗಬೇಕು. ತಾವೂ ಅಭಿನಯದಲ್ಲಿ ಬಹಳ ನುರಿತಿದ್ದೀರಿ. ಇಲ್ಲದಿದ್ದರೆ ಪಾಶ್ಚಾ ಸಾಹೇಬರು ತಮಗೆ ಬಿರುದು ಕೊಡು ತ್ತಿದ್ದರೆ? ತಾವು, ತಮ್ಮ ಉಸ್ತಾದರು, ತಮ್ಮ ದೋಸ್ತ್‌ಗಳು, ಎಲ್ಲರೂ ಬಂದುದು ನಮ್ಮ ನಸೀಬ್. ನಮ್ಮ ಷಹರಿನ ನಸೀಬ್, ದಿನವೂ ಹೀಗೇ, ಅಲ್ಲಿ ಚಿನ್ನಾಸಾನಿಯವರು ಅಭಿನಯಮಾಡುವ ದಿವಸ ತಾವು ಮಧ್ಯಾಹ್ನ ಬರಬೇಕು, ನಮಗೆ ಸಲಾವಣೆ ಮಾಡಿಸಬೇಕು. ಆಗಬಹುದೋ ?" ಎಂದು ಕೇಳಿದರು.

ಸುಲ್ತಾನರ ಸಂತೋಷ. ಅಕೃತ್ರಿಮವಾದ ವಿಶ್ವಾಸ, ಸಹಜ ಸರಳತೆ ಗಳಿಗೆ ವಶರಾಗಿ ರಾಯರೂ ಒಪ್ಪಿಕೊಂಡರು.

ರಾತ್ರಿ ಎಂದಿನಂತೆ ಮೊದಲನೆಯ ಝಾವದ ಕೊನೆಯಲ್ಲಿ ಕಚೇರಿಯು ಆರಂಭವಾಯಿತು. ಸುಲ್ತಾನರ ಎದುರಿನಲ್ಲಿ ಒಂದು ರಂಗಮಂಟಪದ ರಚನೆ ಯಾಗಿದೆ. ಕಿಂಕಾಪಿನ ತೆರೆಗಳು ಮೇಲಿನಿಂದ ಇಳಿದು ಇಂದಿನ ಸಂತೋಷ ಹೀಗೆ ತೆರೆತೆರೆಯಾಗಿ ಮೇಲೆಮೇಲಕ್ಕೆದ್ದು ಮುಗಿಲು ಮುಟ್ಟುವುದು ಎಂದು ತೋರಿಸುವುವೋ ಎಂಬಂತೆ ಗಾಳಿಗೆ ಅಲೆಯುತ್ತಾ, ತಮ್ಮ ನೆರಿಗಳನ್ನು ಮೇಲಿನವರೆಗೂ ಕಾಣಿಸುತ್ತಿವೆ.

ಮೊದಲನೆಯ ತೆರೆಯು ತೆಗೆಯಿತು. ಸುಲ್ತಾನರ ದರ್ಬಾರಿನಲ್ಲಿ ಮಂಜುಳವಾದ ಘಂಟಾರವವು ಕೇಳಿಸಿತು. ಜಯದೇವ ಕವಿಯಂತೆ ವೇಷ ವನ್ನು ಅಳವಡಿಸಿಕೊಂಡಿದ್ದ ಗೋಪಾಲರಾಯರು ಮಧ್ಯಾದ ಮಂಟಪದಲ್ಲಿ ಕುಳಿತು ಮಂಗಳ ಶ್ಲೋಕಗಳನ್ನು ಹೇಳಿ, ಸಭೆಯನ್ನು ಪ್ರಾರ್ಥಿಸಿದರು.

ಯದಿ ಹರಿಸ್ಮರಣೇ ಸರಸಂ ಮನೋ
ಯದಿ ವಿಲಾಸ ಕಲಾಸು ಕುತೂಹಲಂ ||
ಮಧುರ ಕೋಮಲ ಕಾಂತ ಪದಾವಳೀಂ ||
ಶೃಣು ತದಾ ಜಯದೇವ ಸರಸ್ವತೀಂ || —.

ಎಂಬ ಶ್ಲೋಕವನ್ನು ಹೇಳಿ ಮೃದುವಾಗಿ "ಸಭಿಕರೆ, ಶ್ರೀಹರಿಸ್ಮರಣ

ವನ್ನು ಕೋರುವಿರಾ ? ವಿಲಾಸಕಲೆಗಳನ್ನು ನೋಡಬೇಕೆನ್ನುವಿರಾ ? ಹಾಗಾ ವರೆ ಸಂಗೀತ ಸಾಹಿತ್ಯಗಳ ಸಮ್ಮೇಳನ ಸ್ಥಾನವೋ ಎಂಬಂತಿರುವ ಮಧುರ, ಕೋಮಲ, ಕಾಂತ, ಪದಗಳಿಂದ ವಿರಚಿತವಾಗಿ ರಾಧಾಮಾಧವರ ರಹಸ್ಯ ಕೇಳಿಗಳನ್ನು ಚಿತ್ರಿಸುವ ಜಯದೇವ ಮಹಾಕವಿಯ ಕಾವ್ಯಪ್ರವಾಹವನ್ನು ಕೇಳಿ " ಎಂದು ವಿವರಿಸಿದರು. ಮೊದಲನೆಯ ದಶಾವತಾರದ ಅಷ್ಟಪದಿಯನ್ನು ಬೇಕೆಂದು ಬಿಟ್ಟು ಎರಡನೆಯ ಅಷ್ಟಪದಿಯಿಂದ ಆರಂಭಿಸಿದರು.

ವಿಹರತಿ ಹರಿರಿವ ಸರಸವಸಂತೇ ನೃತ್ಯತಿ
ಯುವತಿ ಜನೇನ ಸಮಂ ಸಖಿ ವಿರಹಜನಸ್ಯದುರಂತೇ॥—

ಎಂಬ ಪಲ್ಲವಿಯಿಂದ ಆರಂಭಿಸಿ ನುಡಿನುಡಿಯನ್ನೂ ವಿವರಿಸಿ ಸಭಿಕರಿಗೆ ಸಾಹಿತ್ಯಾನಂದದ ಮಳೆಗರೆದರು. ಜಯದೇವ ಮಂಟಪವು ಹಿಂದಕ್ಕೆ ಹೋಯಿತು. ಹಿಂದಿನ ತೆರೆಯು ಮುಂದೆ ಬಂದು ತನ್ನ ಸ್ಥಾನದಲ್ಲಿ ನಿಲ್ಲುತ್ತಿರು ವಂತೆಯೇ ಮಂಗಳವಾದ್ಯಗಳು ಮೊದಲಾದವು. ವಿರಹಪೀಡಿತೆಯಾದ ರಾಧೆಯು ಸಖಿಯೊಡನೆ ರಂಗಮಂಟಪಕ್ಕೆ ಬಂದಳು.

ಅವಳೊಮ್ಮೆ ಹಾಡುವಳು. ಹಾಡಿದ ಹಾಡಿನ ಅರ್ಥವನ್ನು ಅಭಿನಯಿ ಸುವಳು. ಮತ್ತೊಮ್ಮೆ ಸಾಭಿನಯವಾಗಿ ಹಾಡುವಳು. ಅದು ಮುಗಿದ ಮೇಲೆ ಧ್ರುವವನ್ನು ಕುಣಿಯುವಳು. ಹೀಗೆ ಭಾವ, ರಾಗ, ತಾಳ ಸಮೇತ ವಾಗಿ ನಡೆದ ಅಭಿನಯವು ರಸಿಕರನ್ನು ಆನಂದಸಾಗರದಲ್ಲಿ ಮುಳುಗಿಸಿ, ಅವರನ್ನು ಎಲ್ಲಿಗೋ ಯಾವುದೋ ಲೋಕಕ್ಕೆ ಕರೆದೊಯ್ಯುವುದು. ಅವರು ಇಹಲೋಕವನ್ನು ಮರೆತು ಯಾವುದೋ ದಿವ್ಯದೇಶದಲ್ಲಿ, ಯಾವುದೋ ದಿವ್ಯ ಕಾಲದಲ್ಲಿ, ಯಾವುದೋ ದಿವ್ಯ ಸನ್ನಿಧಾನದಲ್ಲಿ, ಆ ದಿವ್ಯ ಪ್ರೇಮಿಗಳ ದಿವ್ಯ ಪ್ರೇಮದ ದಿವ್ಯ ಕಥೆಯಲ್ಲಿ ಮಗ್ನರಾಗಿ, ಯಾವುದೋ ದಿವ್ಯಭಾವಾಪನ್ನರಾಗಿ ದಿವ್ಯ ರಸಾನುಭವವನ್ನು ಪಡೆಯುವರು.

ಹೀಗೆಯೇ ಆ ರಾತ್ರಿಯೆಲ್ಲ ನಡೆಯಿತು. ಯಾರಿಗೂ ಕಾಲದ ಅರಿವು ಉಳಿದಿರಲಿಲ್ಲ.

" ಧೀರ ಸಮೀರೇ ಯಮುನಾತೀರೇ ವಸತಿ ವನೇ ವನಮಾಲೀ ॥
ಗೋಪೀಪೀನಪಯೋಧರ ಮರ್ದನ ಚಂಚಲಕರಯುಗಶಾಲೀ॥ "

ಎಂಬ ಅಷ್ಟಪದಿಯು ಮುಗಿದಿದೆ. ಆ ಅಷ್ಟಪದಿಯನ್ನು ಅಭಿನಯಿಸಿದಾಗ

ಲಂತೂ ರಾಧಾ ಹೃದಯದ ವಿರಹದ ಭಾರ, ಸಖಿಯ ಉಪದೇಶದಲ್ಲಿರುವ ಮೈತ್ರಿಯಸಾರ, ಎರಡೂ ಸಭಿಕರ ಹೃದಯವನ್ನು ಪೂರ್ಣವಾಗಿ ಹಿಡಿದು ಬಿಟ್ಟಿವೆ. ಎಲ್ಲರ ಕಣ್ಣಲ್ಲಿಯೂ ಅಯ್ಯೋ ರಾಧೆ, ಅವಳ ಮಾತನ್ನೇಕೆ ಕೇಳೆ ? ಎಂದು ಸಂಕಟಪಟ್ಟೋ ಎಂಬಂತೆ ನೀರು ಹನಿಹನಿಯಾಗಿ ಉದುರುತ್ತಿವೆ.

ಹರಿರಭಿಮಾನೀ ರಜನಿರಿದಾನೀಂ ||
ಇಯಮಪಿಯಾತಿ ವಿರಾಮಂ ||
ಕುರುಮಮವಚನಂ ಸತ್ವರರಚನಂ ||
ಪೂರಯಮಧುರಿಪು ಕಾಮಂ ||

ಎಂದಾಗಲಂತೂ ಎಲ್ಲರೂ ಹೌದು ಹೌದು ರಾತ್ರಿಯು ಮುಗಿದು ಹೋಗುತ್ತಾ ಬಂತು ಎಂದುಕೊಂಡು ಬಹಿಃ ಪ್ರಪಂಚವನ್ನು ನೆನೆದಿದ್ದಾರೆ.

ಶ್ರೀ ಜಯದೇವೇ ಕೃತಹರಿಸೇವೇ
ಭಣತಿಪರಮರಮಣೀಯಂ ||
ಪ್ರಮುದಿತಹೃದಯಂ ಹರಿಮತಿಸದಯಂ ||
ನಮತ ಸುಕೃತಕಮನೀಯಂ ||

ಎಂದು ಹಾಡುತ್ತಿದ್ದಾರೆ. ಶ್ರೀಹರಿಯ ನಾಮವನ್ನು ಕೇಳದಿದ್ದವರಿಗೂ ಇರಬೇಕು, ಇರಬೇಕು, ಆ ಹರಿಯು ಅತಿಸದಯನೇ ಆಗಿರಬೇಕು. ಇಲ್ಲದಿದ್ದರೆ ಹರಿಸೇವೆಯನ್ನು ಮಾಡಿದ ಜಯದೇವನವಾಣಿಯು ಇಷ್ಟು ರಮಣೀಯವಾಗಿ ಇರುತ್ತಿತ್ತೆ ! ಅದರಿಂದ ನಮ್ಮ ಸುಕೃತದ ಫಲ; ಜನ್ಮಾಂತರ ಪುಣ್ಯಗಳ ಫಲವಾಗಿ ನಾವೂ ಆತನಿಗೆ ನಮಸ್ಕಾರ ಮಾಡಬೇಕು ಎನ್ನಿಸಿದೆ.

ಸುಲ್ತಾನರು ಎದ್ದರು.

ಮರುದಿನವೂ ಕಚೇರಿ. ಅಂದೂ ಹಿಂದಿನ ರಾತ್ರಿಯಂತೆಯೇ ಸಭೆಗೆ ಸಭೆಯೇ ರಾಧಾಮಾಧವರ ಪ್ರಪಂಚದಲ್ಲಿ ಬೆರೆತುಹೋಗಿದ್ದಾರೆ. ವಿರಹ ವಿಕ್ಲಾಂತಳಾದ ರಾಧೆಯೊಡನೆ ಕಣ್ಣೀರು ಕರೆಯುತ್ತಾರೆ. ತನಗೆ ಮೋಸ ವಾಯಿತು. "ಸಖೀಜನ ವಚನ ವಂಚಿತಾಹಂ, ಯಾಮಿ, ಹೇ, ಕಮಿಹ ಶರಣಂ" ಎಂದು ಅಳುವ ರಾಧೆಯೊಡನೆ ಅಳುತ್ತಾರೆ. "ರಮತೇ ಯಮುನಾ ಪುಲಿನೇ ವಿಜಯೀ ಮುರಾರಿ ರಧುನಾ" ಎಂದು ಅಸೂಯೆ ಪಡುವ ರಾಧೆ ಯೊಡನೆ ತಾವೂ ಅಸೂಯೆಪಡುತ್ತಾರೆ.

"ಯಾಹಿ ಮಾಧವ, ಯಾಹಿಕೇಶವ, ಮಾವದ ಕೈತವವಾದಮ್, ತಾಮನುಸರ ಸರಸೀರುಹ ಲೋಚನ, ಯಾತವ ಹರತಿ ವಿಷಾದಂ ॥" ಎಂದು ಮಾನದಿಂದ ಮಾಧವನನ್ನು ವಿಸರ್ಜಿಸುವುದಕ್ಕೂ ಸಿದ್ಧವಾಗಿರುವ ರಾಧೆಯ ಮಾನ ಅಭಿಮಾನಗಳನ್ನು ವಹಿಸಿಕೊಂಡು ಸಭೆಯು ನೀರವವಾಗಿ, ಮೂಗನ್ನರ ಳಿಸಿಕೊಂಡು, ಹುಬ್ಬುಗಳನ್ನೆತ್ತಿ, ಕೆಂಪಗಿರುವಕಣ್ಣುಗಳನ್ನು ಕೊಕ್ಕರಿಸಿಕೊಂಡು, ಬಿಸಿಯಾದ ನಿಟ್ಟುಸಿರುಗಳನ್ನು ಬಿಡುತ್ತಾರೆ.

ಹಾಗೆಯೇ ಮಾಧವನು ರಾಧೆಯ ಕಾಲಿಗೆ ಬಿದ್ದು, "ಪ್ರಿಯೇ, ಚಾರು ಶೀಲೇ, ಪ್ರಿಯೇ ಚಾರುಶೀಲೇ, ಮುಂಚಮಯಿ ಮಾನಮನಿದಾನಂ॥ ಸಪದಿ ಮದನಾನಲೋ ದಹತಿ ಮಮಮಾನಸಂ॥ ದೇಹಿ ಮುಖ ಕಮಲ ಮಧು ಪಾನಂ॥" ಎಂದು ಕೇಳಿಕೊಳ್ಳುವಾಗ, ಅವನ ಆರ್ತತೆಯನ್ನೂ, ದೈನ್ಯವನ್ನೂ ಸಭೆಯೇ ವಹಿಸಿಕೊಳ್ಳುತ್ತದೆ. "ಸ್ಮರಗರಳ ಖಂಡನಂ ಮಮಶಿರಸಿ ಮಂಡನಂ ದೇಹಿ ಪದ ಪಲ್ಲವ ಮುದಾರಂ ॥ ಪ್ರಿಯೇ" ಎಂದಾಗಲಂತೂ ಸರ್ವರೂ ಆ ವಿರಹ ದಾವಾನಲನ ದಳ್ಳುರಿಯನ್ನು ಅನುಭವಿಸಿ, ಅದರ ಜ್ವಾಲೆಯಲ್ಲಿ ಬೆಂದು, ಉರಿಯನ್ನು ಸಹಿಸಲಾರದೆ, ಆ ಅರ್ಧರಾತ್ರಿಯಲ್ಲೂ ಮೈಯೆಲ್ಲ ಬೆವರಿಡು ತ್ತಿರಲು, ಕರವಸ್ತ್ರಗಳಿಂದ ಗಾಳಿಯನ್ನು ಬೀಸಿಕೊಳ್ಳುತ್ತಾರೆ.

ಕೊನೆಯಲ್ಲಿ "ಕ್ಷಣಮಧುನಾ ನಾರಾಯಣಂ ಅನುಗತಮನುಸರ ರಾಧೇ!" ಎಂದಾಗಲಂತೂ ಸರ್ವರ ಮನಸ್ಸೂ ಏಕತಾನವಾಗಿ ನಾರಾಯ ಣನನ್ನು ಅನುಸರಿಸಲು ಸಿದ್ಧವಾಗುತ್ತದೆ. ತನ್ನ ಲೋಕ ವ್ಯಾಪಾರಗಳನ್ನೆಲ್ಲ ಗಂಟುಕಟ್ಟಿ ಎಸೆದಂತೆ ಹಿಂದೆ ಬಿಟ್ಟು, ನಾರಾಯಣನ ಅನುಸರಣಕ್ಕೆ, ಶ್ರೀಹರಿಯ ಹಿಂದೆ ಹೋಗುವುದಕ್ಕೆ ಸಿದ್ಧವಾಗಿ ಹೋಗುತ್ತದೆ. ಅದಾಗುತ್ತಲೂ "ನಿಜಗಾದಸಾ ಯದುನಂದನೇ, ಕ್ರೀಡತಿ ಹೃದಯನಂದನೇ" ಎಂದು ಹಾಡಿ ದಾಗ, ತಮ್ಮ ಹೃದಯವನ್ನು ಆಡುತ್ತಿರುವ ಆ ಯದುನಂದನಿಗೆ ಸಂತೋಷವಾಗಿ ಒಪ್ಪಿಸಿ, ನನ್ನನ್ನು ಒಪ್ಪಿಸಿಕೋ ಎಂದು ಹೇಳಲು ಸಭೆಗೆ ಸಭೆಯೇ ಸಿದ್ಧವಾಗಿ, ಮೂಕವಾಗಿ, ನಿಶ್ಶಬ್ದವಾಗಿ, ಮಾನಸಿಕವಾಗಿ, ಆ ನುಡಿಯನ್ನು ನುಡಿದುದ ಕ್ಕಿಂತಲೂ ಹೆಚ್ಚಾಗಿ, ಕೃತಿಯಿಂದಲೇ ತನ್ನನ್ನು ಸ್ವಾಮಿಗೊಪ್ಪಿಸಿಕೊಂಡು. ಆ ಆತ್ಮಾರ್ಪಣದಲ್ಲಿ ಅಪೂರ್ವವಾದ, ಅಪಾರವಾದ, ಅಗಾಧವಾದ ಆನಂದವನ್ನು ಪಡೆದು ಆ ಆನಂದದಲ್ಲಿ ಮುಳುಗಿ ಕರಗಿಹೋಗಿದೆ. ಸಭೆಯಲ್ಲಿ ಇರುವ

ಯಾರಿಗೇ ಆಗಲಿ, ತಮ್ಮ ಅಸ್ತಿತ್ವವೊಂದು ಪ್ರತ್ಯೇಕವಾಗಿ ಇರುವುದೆಂಬ ಭಾವನೆಯೇ ಉಳಿದಿಲ್ಲ.

ಅಭಿನಯವೆಲ್ಲ ಮುಗಿದಮೇಲೆ ಜಯದೇವಕವಿಯು ಮತ್ತೆ ಬಂದು, "ವ್ಯಾಪಾರಾಃ ಪುರುಷೋತ್ತಮಸ್ಯದಪತು ಸ್ಫಿತಾಂ ಮುದಾಂ ಸಂಪದಂ" ಎಂದು ಹೇಳಿ ಕೈಮುಗಿದು, ಘಂಟಾನಾದದೊಡನೆ ತೆರೆಯು ಮುಚ್ಚಿಕೊಂಡಾಗ, ಯಾವುದೋ ಲೋಕದಿಂದ ಬಲಾತ್ಕಾರವಾಗಿ ಮತ್ತೆ ಈ ಲೋಕಕ್ಕೆ ಬಂದವರಂತೆ, ಎಲ್ಲರಿಗೂ ಎಚ್ಚರವಾಗಿದೆ.

ಮತ್ತೊಂದು ದಿನ ಮೇಘಸಂದೇಶದ ಪುರುಷವಿರಹವನ್ನು ತೋರಿಸುವ ಅಭಿನಯವಾಯಿತು. ಅಲ್ಲಿ ಮೇಘವು ಯಕ್ಷಿಣಿಗೆ ಸಂದೇಶವನ್ನು ಹೇಳುವ ಪದ್ಯಗಳು, ಅದಕ್ಕೆ ಪೂರ್ವರಂಗವಾಗಿ ಬರುವ ವಿರಹಿಣಿಯಾದ ಯಕ್ಷಿಣಿಯ ವ್ಯಾಪಾರಗಳನ್ನು ವರ್ಣಿಸುವ ಪದ್ಯಗಳು, ಒಂದೊಂದು ಪದ್ಯವನ್ನೂ ಅಭಿನಯಿಸಿದ ಮೇಲೆ ಧ್ರುವದಿಂದ ಮುಕ್ತಾಯಮಾಡಿ ಮತ್ತೊಂದು ಪದ್ಯವನ್ನು ಆರಂಭಿಸುವುದು, ಈ ಕ್ರಮವೇ ಏನೋ ಹೊಸತಾಗಿ ಸುಲ್ತಾನರಿಗೆ ಬಹುವಾಗಿ ಮೆಚ್ಚಿಕೆಯಾಯಿತು. ಮರುದಿನ ಗೋಪಾಲರಾಯರನ್ನು ಕರೆಯಿಸಿಕೊಂಡು ಮೇಘಸಂದೇಶವನ್ನೆಲ್ಲ ಕೇಳಿದರು. ಮೇಘಸಂದೇಶಕಾವ್ಯವನ್ನೆಲ್ಲ ಅಭಿನಯಿಸಬೇಕು ಎಂದು ಅಪ್ಪಣೆಯಾಯಿತು. ಅದೇ ಆರು ದಿನಗಳಾಯಿತು. ಮತ್ತೆ ಆ ಕಾವ್ಯ ಅಭಿನಯವಾಗಬೇಕೆಂದು ಅಪ್ಪಣೆಯಾಯಿತು.

ಹೀಗೆಯೇ ಸುಮಾರು ಮೂರು ವಾರಗಳಾಯಿತು. ಒಂದು ದಿನ ಅನುಕೂಲ ಸಮಯವನ್ನು ನೋಡಿ ಯಜಮಾನ್ ವೀರಪ್ಪಸೆಟ್ಟರು ಸುಲ್ತಾನರನ್ನು ಕಾಣಿಸಿಕೊಂಡು "ಭರತಾಚಾರ್ಯರು ಶ್ರೀಶೈಲದ ಯಾತ್ರೆ ಹೊರಟಿದ್ದಾರೆ. ಖಾವಂದ್‌ರವರ ಹುಕುಂ ಆದರೆ ಪ್ರಯಾಣಮಾಡುವರು" ಎಂದು ಅರಿಕೆ ಮಾಡಿದರು.

ಸುಲ್ತಾನರಿಗೆ ಆಕಾಶವೇ ಕಳಚಿಕೊಂಡು ತಲೆಯಮೇಲೆ ಬಿದ್ದಂತಾಯಿತು. "ಏಕೆ, ನಮ್ಮ ದರ್ಬಾರು ಆಚಾರ್ಯರಿಗೆ ಬೇಸರವಾಯಿತೇ! ಅಥವಾ ನಮ್ಮ ಅಧಿಕಾರಿಗಳು ಅವರಲ್ಲಿ ತಪ್ಪಿ ನಡೆದಿದ್ದಾರೆಯೇ?" ಎಂದು ವಿಚಾರಿಸಿದರು.

ಸೆಟ್ಟರು “ ಖಾವಂದ್, ಅದೇನೂ ಇಲ್ಲ. ಆದರೂ ಅವರು ರಾಜಧಾನಿ ಯನ್ನು ಬಿಟ್ಟು ತಿಂಗಳಾಗುತ್ತ ಬಂತು. ಇನ್ನೂ ಶ್ರೀಶೈಲಕ್ಕೆ ಹೋಗ ಬೇಕಾದುದೂ ಒಂದು ಇದೆ. ಆದರಿಂದ ಈ ಅವಸರ. ಸನ್ನಿಧಾನದಲ್ಲಿ ಯಾವುದಕ್ಕೂ ಕಡಿಮೆಯಿಲ್ಲವಾದರೂ ಜನ್ಮಭೂಮಿಯ ಕಡೆಗೆ ಮನಸ್ಸು ತಿರುಗುವುದು ಸಹಜವಲ್ಲವೇ ? ” ಎಂದು ಅರಿಕೆಮಾಡಿದರು

ಸುಲ್ತಾನರು ಒಂದು ಗಳಿಗೆ ಯೋಚನೆಮಾಡಿ, “ ನಿಜ, ನಾವು ಅವರ ಸಂಗೀತಕ್ಕೆ ವಶವಾಗಿರುವಂತೆ ತಮ್ಮ ಪಾದ್‌ಷಾ ಅವರು ಕೂಡ ಆಗಿರಬೇಕು. ಅವರಿಗೆ ಎಷ್ಟು ಬೇಸರವಾಗಿದೆಯೋ ? ಸೆಟ್ಟಿಸಾಹೇಬ್ ಇನ್ನು ಎರಡು ಮೂರು ದಿನ ಅವರು ಇಲ್ಲಿ ಇರಬೇಕು. ಒಂದುದಿನ ತಮ್ಮ ಚಿನ್ನಾಸಾನಿಯವರು ಬಂದು ನಮ್ಮೊಡನೆ ಮಾತನಾಡುವುದು ಸಾಧ್ಯವೆ ? ನಾವು ತಮಗೆ ಮೊದಲೇ ಹೇಳಿದ್ದೇವೆ. ಅವರು ಅವರ ಉಸ್ತಾದರೊಡನೆ ಬರಲಿ. ತಾವು ಅವರನ್ನು ಕರೆದುಕೊಂಡು ಬನ್ನಿ, ರಾವ್‌ಸಾಹೇಬರೂ ಬರಬೇಕು ” ಎಂದು ಅಪ್ಪಣೆ ಮಾಡಿದರು. ಸೆಟ್ಟರು ಸರಿಯೆಂದು ಬೀಳ್ಕೊಂಡುಬಂದರು.

# ಅಧ್ಯಾಯ ಹದಿನಾಲ್ಕು

ಒಂದು ಮಧ್ಯಾಹ್ನ ಗವಾಯ್ ಸಾಹೇಬರು ಆಚಾರ್ಯರ ದರ್ಶನಕ್ಕಾಗಿ ಬಂದರು. ಆಚಾರ್ಯರೂ ಅವರನ್ನು ಸಮಾದರದಿಂದ ಬರಮಾಡಿಕೊಂಡರು. ಆಚಾರ್ಯರಿಗೂ ಗವಾಯ್‌ಗಳಿಗೂ ಸ್ನೇಹವು ಚೆನ್ನಾಗಿ ಬೆಳೆಯಿತು. ಒಬ್ಬರನ್ನೊಬ್ಬರು ಗೌರವಿಸುವರು. ಆದರಿಸುವರು. ಅಕೃತ್ರಿಮವಾದ ಸಹಜ ಸಮಾಚಾರಗಳಿಂದ ಒಬ್ಬರನ್ನೊಬ್ಬರು ಆರಾಧಿಸುವರು. ಆಚಾರ್ಯರು ಗವಾಯ್ ಸಾಹೇಬರನ್ನು ಆಗಾಗ ತಮ್ಮ ಸಂಗೀತದಿಂದ ತೃಪ್ತಿಪಡಿಸಿದರೆ, ಗವಾಯ್‌ಗಳೂ ಹಾಗೆಯೇ ಆಚಾರ್ಯರನ್ನು ತಾವೂ ಆರಾಧಿಸುವರು. ಹೀಗೆಯೇ ಇಬ್ಬರಿಗೂ ಬಹಳ ಹೊಂದಿಹೋಯಿತು.

ಚಿನ್ನಮ್ಮನಿಗಂತೂ ಗವಾಯ್ ಸಾಹೇಬರನ್ನು ಕಂಡರೆ ಆಚಾರ್ಯರನ್ನು ಕಂಡಷ್ಟೇ ಗೌರವ. ಮೊದಲೊಂದೆರಡು ದಿನ ಅವರ ಎದುರು ಬರಲು ನಾಚುತ್ತಿದ್ದಳು. ಅವರ ಸಂಗೀತವು ಅವಳನ್ನು ಗೆದ್ದುಬಿಟ್ಟಿತು. ಈಗ ಅಕ್ಕತಂಗಿಯರಿಬ್ಬರೂ ಅವರು ಒಂದರೆ ಸಮೀಪದ ಬಂಧುವು ಬಂದಂತೆ ಸಹಜವಾಗಿ ಆದರ, ವಿಶ್ವಾಸ, ಗೌರವಗಳಿಂದ ನೋಡುವರು.

ರಾಯರಂತೂ ಬಹಳ ವಿಚಿತ್ರ. ಗವಾಯ್ ಸಾಹೇಬರು ರಾವ್ ಸಾಹೇಬರನ್ನು ಕಂಡರೆ, "ತಾವು ನಿಜವಾಗಿಯೂ ಅಮೀರ್ ಸಾಹೇಬರು. ತಮ್ಮಂಥಾವರು ಪ್ರತಿಯೊಂದು ದರ್ಬಾರಿನಲ್ಲಿಯೂ ಒಂದಿಬ್ಬರಾದರೂ ಇರಬೇಕು" ಎಂದು ಬಹಳ ಹೊಗಳುವರು. "ನಿಮ್ಮ ಹಂಗೆ ನಮಗೆ ಓದೋಕೆ ಬರೋಲ್ಲ" ಎಂದು ಅವರ ಸಂಕಟ. "ಎಷ್ಟು ಚೆನ್ನಾಗಿ ಓದುತ್ತೀರಿ!" ಎಂದು ಸಂತೋಷ.

ಅಂತೂ ಗವಾಯ್‌ಗಳು ಜಾತಿಯಿಂದ ಬೇರೆಯಾದರೂ ಮಿಕ್ಕೆಲ್ಲ ವಿಧದಿಂದಲೂ ಆಚಾರ್ಯರ ಸಂಸಾರದಲ್ಲಿ ಬೆರೆತುಹೋದರು. ಅವರು ಯಾವಾಗ ಬರಲಿ, ಅವರಿಗೆ ರುಚಿರುಚಿಯಾದ ತಿಂಡಿಗಳು, ಷರಬತ್ತುಗಳು ಸಿದ್ಧವಾಗಿರುವುವು. ಆಚಾರ್ಯರೂ ಜೊತೆ ಸೇರುವರು. ಅವರಿಗೆ, "ನಾನು ಪೂರಾ ದೇಶ ಸುತ್ತಿದ್ದೇನೆ. ಉಸ್ತಾದ್‌ಸಾಬ್, ಬೇಕಾದಷ್ಟು ಜನ ನಮಗೆ

ಬೇಕಾದ್ದು ಕೊಟ್ಟಿದ್ದಾರೆ. ಆದರೆ ಇಲ್ಲಿ ತಿಂಡಿಗಿರುವ ರುಚಿ ಇನ್ನೆಲ್ಲೂ ಇಲ್ಲ. ನೋಡಿದರೆ, ತಿಂಡಿ ಕೊಡುವರ ಮನಸ್ಸು ತಿಂಡಿಯಲ್ಲಿ ಇರಬೇಕು. ಅಲ್ಲಾ !" ಎನ್ನುವರು. ಎಲ್ಲರೂ ಕಿಲಕಿಲ ನಗುವರು.

ಇಂದು ಗವಾಯ್‌ಗಳು ಆಚಾರ್ಯರನ್ನು ಒಂದು ವಿಚಿತ್ರಪ್ರಶ್ನೆ ಕೇಳಿದರು. "ಉಸ್ತಾದ್‌ಸಾಹೇಬ್, ನಮ್ಮ ಮೇಲೆ ತಮ್ಮ ಮೊಹಬತ್ ಬಹಳ ಆಗಿದೆ. ನಾವು ಹತ್ತಾರುಸಲ ಬಂದು ತಮ್ಮ ಹತ್ತಿರ ತಿಂಡಿಗಿಂಡಿ ತಿಂದು ಖುಷಿ ಆಗಿದ್ದೇವೆ. ತಾವೂ ಹೊರಟು ಹೋಗ್ತೀರಿ ಅಂತ ತಿಳೀತು. ನಮ್ಮ ಮೇಲೆ ವಿಶ್ವಾಸವಿಡಗಿ, ತಾವು ಎಲ್ಲರನ್ನೂ ಕರೆದುಕೊಂಡು ಬರಬೇಕು. ತಮ್ಮ ಅಡುಗೆಯವರನ್ನು ಕಳುಹಿಸಿಕೊಡಿ. ಅವರು ಬೇಕಾದ್ದು ತೊಳೆದು ಗಿಳದು ಮಾಡಿ, ತಮಗೆ ಬೇಕಾದ ತಿಂಡಿ ಮಾಡುತ್ತಾರೆ. ನಮ್ಮ ಮಾತು ನಡೆಸಿಕೊಡಬೇಕು" ಎಂದು ಕೈಹಿಡಿದುಕೊಂಡರು.

ಆಚಾರ್ಯರಿಗೆ ಅವರ ವಿದ್ಯೆಯ ಮೇಲೆ ಬಹಳ ಗೌರವ. ಅವರು ವಿಜಾತಿಯಾದರೂ ಅವರು ಹೀಗೆ ಆಗಾಗ ಮುಟ್ಟಿದರೆ ಅವರಿಗೆ ಅಸಹನವಾಗುತ್ತಿರಲಿಲ್ಲ. ಅಷ್ಟು ಒಗ್ಗಿ ಹೋಗಿತ್ತು. ಕೊನೆಗೆ ಏನೇನೋ ಚೌಕಾತಿಯಾಗಿ ಆಚಾರ್ಯರು ಇಳಿದಿರುವ ಕಡೆಯೇ ಗವಾಯ್ ಸಾಹೇಬರ ಔತಣವೆಂದು ಗೊತ್ತಾಯಿತು.

ಆ ದಿನ ಮಾತು ದೀರ್ಘವಾಗಿ ನಡೆಯಿತು. ಗವಾಯ್‌ರು ಆಚಾರ್ಯರ ಎದುರಿಗೆ ಚಿನ್ನಮ್ಮನನ್ನು ಬೇಕಾದ ಹಾಗೆ ಹೊಗಳುವರು. ಅವರು ಮಕ್ಕಳ ಕೀರ್ತಿಯನ್ನು ಕೇಳಿ ಸಂತೋಷಪಡುವ ತಂದೆಯಂತೆ ಅದನ್ನು ಕೇಳಿ ಸಂತೋಷ ಪಡುವರು. ಚಿನ್ನಮ್ಮ ರತ್ನ, ರನ್ನಮ್ಮ ಅದಕ್ಕೆ ಕೊಟ್ಟಿರುವ ವರ್ತಿ ಎನ್ನುವರು.

ಇಂದೂ ಆ ಮಾತು ಈ ಮಾತು ಆಡುತ್ತ ಎಂದಿನಂತೆ ಹೊಗಳುವ ಮಾತಿಗೆ ಬಂತು. ಗವಾಯ್‌ಗಳು ಹೇಳಿದರು. "ಉಸ್ತಾದ್‌ಸಾಬ್, ನಾವು ಮೆಕ್ಕಾ ಮದೀನಾದಿಂದ ಹಿಡಿದು ಇರಾಕ್, ಇರಾನ್, ಎಲ್ಲಾ ಸುತ್ತಿದ್ದೇವೆ. ಡೆಲ್ಲಿಯಂತೂ ನಾವು ಹುಟ್ಟಿದ ಷಹರು. ನಾವೂ ಬಹಳ ಖರ್ಖುಷ್‌ನ ಜನ. ಆದರೆ, ತಮ್ಮಂಥಾವರನ್ನು ಕಾಣಲಿಲ್ಲ. ನಮಗೆ ಖುಮ್ಮಾರ್ ಆಗಿಹೋಯಿತು. ಇಲ್ಲದಿದ್ದರೆ ತಮ್ಮ ಬಳಿ ಮತ್ತೆ ಸಾಪಾಸಾ

ಷುರುಮಾಡುತ್ತಿದ್ದೆ." ಆಚಾರ್ಯರು ಆ ಮಾತು ಪೂರ್ತಿಯಾಗುವುದಕ್ಕೆ ಬಿಡದೆ, "ಹಾ! ಹಾ! ಹಾಗೆಂದರುಂಟೆ? ಈಶ್ವರ ತಮಗೇನು ಕಡಿಮೆ ಮಾಡಿದ್ದಾನೆ! ತಾವು ಹಾಡಿದಾಗ ಎಷ್ಟುಸಲ ನಾವು ಮೈಮರೆತು ಹೋಗಿದ್ದೇವೆ. ಉಂಟೆ? ತಾವು ಅದ್ಭುತವಾಗಿ ಹಾಡುತ್ತೀರಿ. ನೀವು ಹಾಡಬೇಕಾಗಿಲ್ಲ. ಆ ಶ್ರುತಿಯಲ್ಲಿ ಲೀನವಾಗುವಿರಲ್ಲ; ಆಗ ಜಗತ್ತೇ ನಾದದಲ್ಲಿ ಲೀನವಾಗುತ್ತದೆ ಬಲ್ಲಿರಾ? ಆಯಿತು. ನಮ್ಮ ಚಿನ್ನಮ್ಮನ ವಿಚಾರ ಹೇಳಿ" ಎಂದರು.

"ಚಿನ್ನಮ್ಮನ ವಿಚಾರವೇ? ಈಕೆ ನಮ್ಮ ಮಗಳು ಹೇಗೋ ಹಾಗೆ. ನಿಜವಾಗಿ ಈಕೆಗೆ ನಾವು ನಮಸ್ಕಾರಮಾಡಬೇಕು. ಚಿನ್ನಮ್ಮ ಹೆಣ್ಣು; ತಾವು ಗಂಡು. ಗಂಡಿನ ಸಂಗೀತ ಎಷ್ಟಾದರೂ ಬೆಟ್ಟದ ಮೇಲಿಂದ ಧುಮುಕುವ ನೀರಿನ ಹಾಗೆ, ಹೆಣ್ಣಿನ ಸಂಗೀತವು ಹೂವಿನ ಗಮನದ ಹಾಗೆ. ತಮ್ಮ ವಿದ್ಯೆಯೆಲ್ಲ ಇದೆ; ಜೊತೆಗೆ ಅಲ್ಲಾ ಕೊಟ್ಟಿರುವ ಗಲ್ಲಾ ಇದೆ. ತಾವು ಮಾತ್ರ ಈಕೆ ಕರೆದುಕೊಂಡು ಒಂದು ಸಲ ನಮ್ಮ ಬೀದರ್‌ಗೆ ಬಂದರೆ, ಓಹೋಹೋ? ಏನು ಹೇಳೋಣ, ನಮ್ಮ ನವಾಬರು ಏನು ಖುಷ್ ಆಗಿ ಹೋಗುತಾರೋ? ಈ ಸಾರೇದುನಿಯಕ್ಕೆ ಸವಾಲ್. ಇಂತಹ ಸಂಗೀತ, ಈ ಅಭಿನಯ, ನಾವು ನೋಡಿಲ್ಲ."

ಹೀಗೆಯೇ ಎಷ್ಟೋ ಮಾತುಗಳಾಯಿತು. ಅವರಿಗೆ ಇನ್ನು ಕೆಲವು ದಿನದಲ್ಲಿ ಆಚಾರ್ಯರು ಹೋಗುವರಲ್ಲ ಎಂದು ಬಹಳ ಚಿಂತೆ. ಕೊನೆಗೆ, ಆಚಾರ್ಯರ ದರ್ಶನಕ್ಕೆ ಗವಾಯ್ ಸಾಹೇಬರು ಬರುವ ಚೈತ್ರಮಾಸದಲ್ಲಿ ಬರಬೇಕು. ರಾಮನವರಾತ್ರಿಯಲ್ಲಿ ಹಾಡಬೇಕೆಂದು ಗೊತ್ತಾಯಿತು. ಗವಾಯ್‌ಗಳು ಬಹು ಸಂತೋಷವಾಗಿ ಒಪ್ಪಿಕೊಂಡರು. "ನಾವು ಕಾಜಾ ಸಾಹೇಬರ ಬಳಿ ಹಾಡಿದಾಗ ಎಷ್ಟು ಸಂತೋಷವಾಗಿ ಹಾಡಿದೆವೋ ಅಷ್ಟೇ ಸಂತೋಷವಾಗಿ ಹಾಡುತ್ತೇವೆ" ಎಂದರು.

ಈಗ ಆಚಾರ್ಯರ ಬಿಡಾರಕ್ಕೆ ಸೆಟ್ಟರು ಪದೇಪದೇ ಬರುತ್ತಾರೆ. ಅವರಿಗೂ ಆಚಾರ್ಯರ ವಿಚಾರವಾಗಿ ಅಪಾರ ಗೌರವ. ವಿಜಯನಗರದಲ್ಲಿ ಇಷ್ಟು ಸಮೀಪವಾಗಿ ಒಬ್ಬರನ್ನೊಬ್ಬರು ನೋಡುವುದಕ್ಕೆ ಅವಕಾಶವಿರಲಿಲ್ಲ. ಅಲ್ಲಿ ಇಲ್ಲದ ಅವಕಾಶವು ಇಲ್ಲಿ ದೊರೆತು ಇಬ್ಬರಿಗೂ ದೃಢವಾದ ಸ್ನೇಹವೇರ್ಪ

ಟ್ಟಿದೆ. ಜೊತೆಗೆ ಗೋಪಾಲರಾಯರ ಮೇಲೆ ಅವರಿಗಿದ್ದ ಸಂಶಯವು ದೂರವಾಗಿದೆ. ನಿರಾಧಾರವಾದ ಸಂಶಯವು ತಮಗೆ ಬಂದಿತ್ತಲ್ಲಾ ಎಂದು ತಾವೇನೋ ಪಾಪ ಮಾಡಿರುವಂತೆ, ಅದಕ್ಕಾಗಿ ಅವರಲ್ಲಿ ವಾಚಾ ಕ್ಷಮಾಯಾಚನ ಮಾಡದಿದ್ದರೂ ಕೃತಿಯಿಂದ ನಿರ್ವಹಿಸುವಂತೆ, ರಾಯರಲ್ಲಿ ಸೆಟ್ಟರು ಅಕೃತ್ರಿಮವಾದ ಸ್ನೇಹವನ್ನು ದೃಢವಾಗಿ ಬೆಳೆಸಲು ಯತ್ನಿಸುತ್ತಿದ್ದಾರೆ. ದೃಢವಾದ ರಾಜಭಕ್ತಿಯುಳ್ಳ ಸೆಟ್ಟರಿಗೆ ಅಂದು ಚಕ್ರವರ್ತಿಗಳ ಸಮ್ಮುಖದಲ್ಲಿ ರಾಯರ ಸಾಹಸವನ್ನು ಚಕ್ರವರ್ತಿಗಳ ಮುಖದಿಂದಲೇ ಕೇಳಿದ ದಿನ ಹುಟ್ಟಿದ ಸೌಹಾರ್ದವು ಗೋಲ್ಕೊಂಡದಲ್ಲಿ ಪಕ್ವವಾಗಿ ಸ್ನೇಹವಾಗಿದೆ.

ಆದರೆ ಒಂದು ವಿಚಾರದಲ್ಲಿ ಮಾತ್ರ ಅವರಿಗೆ ಇನ್ನೂ ಸಂದೇಹ. ಅಕ್ಕ ತಂಗಿಯರಿಬ್ಬರೂ ಒಟ್ಟಾಗಿ ಬಂದು ನಿಂತುಕೊಂಡರೆ, ಅದರಲ್ಲಿ ರಾಯರ ಸ್ವತ್ತು ಯಾವುದು ? ತಮ್ಮದು ಯಾವುದು ? ಎಂಬುದನ್ನು ವಿಂಗಡಿಸಲಾರರು. ಆದರೆ ಅದರಿಂದ ಅವರ ಸಂತೋಷಕ್ಕೆ ಹಾನಿಯಾಗಿರಲಿಲ್ಲ.

ಸುಲ್ತಾನರ ಅಪ್ಪಣೆಯಂತೆ ವಿಜಯನಗರದ ಸಂಗೀತಗಾರರು ಅರಮನೆಗೆ ಬಂದರು. ಸುಲ್ತಾನರು ತಮಗಾದ ಆನಂದವನ್ನು ಬಾಯಿಬಿಟ್ಟು ಹೇಳಿದರು. ಖಿಲ್ಲತ್ತುಗಳ ಮೇಲೆ ಖಿಲ್ಲತ್ತುಗಳನ್ನು ಕೊಟ್ಟು, ತಮ್ಮ ವರ್ಧಂತಿಯ ವೇಳೆಗೆ ಮತ್ತೆ ಬರಬೇಕು ಎಂದು ಆಹ್ವಾನಿಸಿದರು. "ತಮ್ಮೆಲ್ಲರಿಗೂ ಒಬ್ಬೊಬ್ಬರಿಗೆ ಒಂದೊಂದು ಬಿರುದು ಕೊಡಬೇಕು ಎಂದು ಗೊತ್ತುಮಾಡಿದ್ದೇವೆ. ಆದರೆ ಏನೋ ರಾಜಕೀಯದಿಂದ ಈಗ ಸಧ್ಯದಲ್ಲಿ ನಾವು ಆ ಕೆಲಸ ಮಾಡುವ ಹಾಗಿಲ್ಲ. ಅದು ಮಾಡದೆ ಇದ್ದರೆ ನಾವು ಸುಲ್ತಾನರು, ಸಂಗೀತಪ್ರೇಮಿಗಳು ಎನ್ನಿಸಿಕೊಂಡು ಫಲವೇನು ? ಅದರಿಂದ ಬರುವ ವರ್ಧಂತಿಯ ವೇಳೆಗೆ ತಾವೆಲ್ಲರೂ ದಯಮಾಡಿಸಬೇಕು. ನಮ್ಮ ದರ್ಬಾರಿನಲ್ಲಿ ಬಿರುದುಗಳನ್ನು ಪಡೆದುಕೊಂಡು ನಮ್ಮ ಮೇಲೆ ವಿಶ್ವಾಸವಿಟ್ಟುಕೊಂಡಿರಬೇಕು" ಎಂದು ದಿವಾನರ ಮುಖವಾಗಿ ಹೇಳಿಸಿದರು.

ಆಚಾರ್ಯರಿಗೆ ಒಂದು ವಜ್ರದ ಕಂಠಿ, ರಾಯರಿಗೆ ಒಂದು ಘೋಡಾ, ಕೊಟ್ಟು ಚಿನ್ನಾಸಾನಿ ಸೋದರಿಯರಿಗೆ ಮೈತುಂಬಾ ವಜ್ರಗಳನ್ನು ಕೆತ್ತಿರುವ ಕುಂದಣದ ಬೊಂಬೆಯನ್ನು ಕೊಟ್ಟರು. ನಗದಾಗಿ ಅವರಿಗೆಲ್ಲ ಸೇರಿ ಕೊಟ್ಟುದು ಎಂಟುಲಕ್ಷ ಎಂದು ಅವೊತ್ತಿನ ಭಂಡಾರಿಯ ಲೆಕ್ಕದಲ್ಲಿ ಬರೆದಿತ್ತು.

ಇನ್ನೊಂದು ದಿನ ಮತ್ತೆ ಚಿನ್ನಾಸಾನಿಯ ಬೈಠಕ್ ಕಚೇರಿ ನಡೆಯಿತು. ಸುಲ್ತಾನರ ಕೋರಿಕೆಯಂತೆ ಮೊದಲಿನಿಂದ ಕೊನೆಯವರೆಗೂ ಕ್ಷೇತ್ರಯ್ಯನವರ ಪದಗಳು ಆದುವು. ಮರುದಿನ ಆಚಾರ್ಯರ ಸಂಗೀತವಾಯಿತು. ಅಂದು ಕೇವಲ ದಾಸರ ಪದಗಳೇ ಆದುವು. ಮೂರನೆಯದಿನ ರಾಯರ ಕಾವ್ಯವಾಚನ ವಾಯಿತು.

ಸುಲ್ತಾನರು ಇಷ್ಟವಿಲ್ಲದೆ, ಇಷ್ಟವಿಲ್ಲದೆ ಅಪ್ಪಣೆಕೊಟ್ಟರು. ಸೆಟ್ಟರನ್ನು ಕರೆಯಿಸಿಕೊಂಡು "ಸೆಟ್ಟಿ ಸಾಹೆಬ್, ತಾವು ಗೋಲ್ಕೊಂಡ, ವಿಜಯನಗರ ರಾಜ್ಯಗಳಿಗೆ ಸ್ನೇಹಮಾಡಿಸಿದಿರಿ. ಇದು ಭದ್ರವಾಗಿರುವಂತೆ ವರ್ಷವರ್ಷವೂ ಇವರನ್ನು ಕರೆದು ತರುವುದು ತಮಗೆ ಸೇರಿದ್ದು" ಎಂದು ವಜ್ರದ ಕಂಠೀ ಹಾರವನ್ನು ಅವರಿಗೆ ಹಾಕಿದರು.

ಆಚಾರ್ಯರು ಶ್ರೀಶೈಲದ ಕಡೆ ಹೋಗಿ ಮತ್ತೆ ಗೋಲ್ಕೊಂಡದ ಗಡಿ ಸೇರುವವರೆಗೆ ತಮ್ಮ ಅಂಗರಕ್ಷಕ ದಳವೊಂದು ಅವರ ಜೊತೆಯಲ್ಲಿಯೇ ಇರತಕ್ಕದು. ಆಚಾರ್ಯರು ತಮ್ಮ ದೇಶದಲ್ಲಿ ಇರುವವರೆಗೂ ತಮ್ಮ ದರ್ಬಾರಿನ ಪ್ರಥಮ ವರ್ಗದ ಅಮೀರರಿಗೆ ಸಲ್ಲುವಮರ್ಯಾದೆಗಳು ಅವರಿಗೆ ಸಲ್ಲತಕ್ಕದು. ಅವರ ಬಿಡಾರಕ್ಕೆ ಬೇಕಾಗುವ ಸಮಸ್ತವೂ ತಮ್ಮ ಸರಕಾರದಿಂದ ಸರಬರಾಜು ಆಗಬೇಕು ಎಂದು ನಿರೂಪವು ಹೊರಟಿತು.

ವಿಜಯನಗರದ ರಾಯಭಾರಿಯು ಗೋಲ್ಕೊಂಡವಲ್ಲಿ ನಡೆದುದೆಲ್ಲವನ್ನೂ ರಾಜಧಾನಿಗೆ ವರದಿ ಕಳುಹಿಸಿದನು. ಆದರೆ ಸೆಟ್ಟರಿಗೂ ಸಂಗೀತಗಾರರಿಗೂ ಬಹಳ ಹತ್ತಿರದ ಸಂಬಂಧ ಬೆಳೆದಿದೆಯೆಂಬ ಸುದ್ದಿ ತಮಗೆ ಖಚಿತವಾಗಿ ಗೊತ್ತಿದ್ದರೂ ಬರೆಯಲಿಲ್ಲ.

# ಅಧ್ಯಾಯ ಹದಿನೈದು

ಆಚಾರ್ಯರು ಪರಿವಾರದೊಡನೆ ಶ್ರೀಶೈಲವನ್ನು ತಲಪಿದರು. ದಾರಿಯಲ್ಲಿ ಪರಿವಾರದವರಿಗೆ ಯಾರಿಗೂ ಕುಡಿದ ನೀರು ಅಲ್ಲಾಡಲಿಲ್ಲ; ತಲೆಯ ಕೂದಲು ಚುಳ್ ಎನ್ನಲಿಲ್ಲ. ಪರ್ವತದ ಬುಡದಲ್ಲಿ ರಾಜಾಧಿಕಾರಿಗಳು ಆಚಾರ್ಯ ಪರಿವಾರವನ್ನು ಎದುರುಗೊಂಡರು. ಆ ರಾತ್ರಿ ಅಲ್ಲಿಯೇ ಬಿಡಾರವಾಯಿತು. ಮರುದಿನ ಬೆಳಗಿನ ಝಾವದಲ್ಲಿ ಪಲ್ಲಕ್ಕಿಗಳಲ್ಲಿ ಕುಳಿತು ಎಲ್ಲರೂ ಪರ್ವತಾರೋಹಣಮಾಡಿದರು.

ಶ್ರೀಶೈಲದಲ್ಲಿಯೂ ದೇವಸ್ಥಾನಕ್ಕೆ ಬಹು ಸಮೀಪವಾಗಿಯೇ ಆಚಾರ್ಯರ ಬಿಡಾರವು ಸಿದ್ಧವಾಗಿತ್ತು. ಅಲ್ಲಿ ಮೂರುದಿನ ಇದ್ದು ಮಲ್ಲಿಕಾರ್ಜುನನ ಸೇವೆಯನ್ನು ಪೂರೈಸಿಕೊಂಡು ರಾಜಧಾನಿಗೆ ಪ್ರಯಾಣ ಮಾಡುವುದು ಎಂದು ಗೊತ್ತಾಗಿತ್ತು. ಏಕೋ ಚಿನ್ನಳಿಗೆ ಅಲ್ಲಿಂದ ಹೊರಡುವುದಕ್ಕೇ ಮನಸ್ಸಿಲ್ಲ. ಇನ್ನೂ ಅಷ್ಟು ದಿನ ಅಲ್ಲಿರಬೇಕೆಂದುಕೊಂಡಳು. ಅವಳು ಬೇಕು ಎಂದರೆ ಬೇಡ ಎನ್ನುವವರು ಯಾರೂ ಇರಲಿಲ್ಲ.

ದಿನವೂ ಸಂಜೆಯಾಗುವ ವೇಳೆಗೆ ಎಲ್ಲರೂ ಸ್ನಾನ ಮಾಡಿ ಮಡಿಯುಟ್ಟು ದೇವರ ದರ್ಶನಕ್ಕೆ ಬರುವರು. ದಿನವೂ ಸ್ವಾಮಿಗೂ, ಅಮ್ಮನವರಿಗೂ ಸುವರ್ಣ ಸರಹಗಳಿಂದ ಸಹಸ್ರನಾಮವು ನಡೆಯುವುದು. ಗುರುಶಿಷ್ಯರಲ್ಲಿ ಯಾರಾದರೂ ದೇವರ ಮುಂದೆ ಭಜನೆಯನ್ನು ಮಾಡುವರು. ಮೊದಲನೆಯ ಝಾವವು ಮುಗಿಯುವವರೆಗೂ ದೇವಸ್ಥಾನದಲ್ಲಿದ್ದು ಎಲ್ಲರೂ ಹಿಂತಿರುಗಿ ಬರುವರು.

ಚಿನ್ನಳಿಗೆ ಆ ಬೆಟ್ಟಗಾಡುಗಳಲ್ಲಿ ರಾಯನೊಡನೆ ತಿರುಗಬೇಕೆಂದು ಆಸೆ. ಆದರೆ ರಾ ಜಾ ಧಿ ಕಾ ರಿ ಗ ಳು ದೇವಸ್ಥಾನದಿಂದ ಕೊಂಚ ದೂರ ಹೋದರೆ ಹಗಲೇ ಹುಲಿಗಳು ಅಡ್ಡಗಟ್ಟುವುವು ಎಂದು ಹೆದರಿಸಿದ್ದರು. ಅಲ್ಲದೆ, "ಹೋಗಕೂಡದು. ತಾವು ಅತ್ತಕಡೆ ಹೋಗಿ, ಅಲ್ಲೇನಾದರೂ ಅಪಾಯ ಸಂಭವಿಸಿದರೆ ನಮ್ಮ ಪ್ರಾಣಕ್ಕೆ ಬರುವುದು" ಎಂದು ಅಧಿಕಾರಿಯು ಖಂಡಿತವಾಗಿ ಹೇಳಿದ್ದನು.

ಆದರೂ ಚಿನ್ನಳಿಗೆ ತನ್ನ ಆಸೆಯನ್ನು ವಿರೋಧಿಸುವುದು ಆಗಲಿಲ್ಲ.

ರಾಯರಿಗೆ ಹೇಳಿದಳು. ರಾಯರು ಆಗಲೇಳು. ಅದಕ್ಕೇನು ಎಂದು ಒಂದು ದಿನ ಕಾಡಿಗೆ ಹೋಗಿ ಬರುವುದು ಎಂದು ಗೊತ್ತುಮಾಡಿದರು. ಸುಮಾರು ನೂರು ಗಜ ದೂರದಲ್ಲಿ ಇಬ್ಬರು ಆಯುಧಧಾರಿಗಳು ಮುಂದೆ ಹಿಂದೆ ಇರುವುದು. ತಾವೂ ಆಯುಧಧಾರಿಗಳಾಗಿ ಹೋಗುವುದು ಎಂದು ಗೊತ್ತಾಯಿತು. ಆಚಾರ್ಯರೂ, ರನ್ನಳೂ ಹಿಂದೆಯೇ ಉಳಿದರು

ಪ್ರೇಮಿಗಳಿಬ್ಬರೂ ಕಾಡಿಗೆ ನುಗ್ಗಿದರು. ಯಾವುದೋ ಹೂವು, ಯಾವುದೋ ಚಿಗುರು, ಚಿನ್ನಳಿಗೆ ಬೇಕೆನ್ನಿಸುವುದು. ರಾಯನು ಲಕ್ಷ್ಯವಿಲ್ಲದೆ ನುಗ್ಗಿ ತರುವನು. ಏನೋ ಹರಟೆ, ಏನೋ ಮಾತು, ಏನೋ ಚೇಷ್ಟೆ, ತಮ್ಮನ್ನು ಕೇಳುವವರು ಯಾರೂ ಇಲ್ಲವೆಂದು ಮನವರಿಕೆಯಾದಾಗ ಇಬ್ಬರೂ ಮಕ್ಕಳು ಕುಣಿದಾಡುವಂತೆ ಸಂತೋಷದಿಂದ ಅಪೊತ್ತಿನ ಸಂಜೆಯವರೆಗೂ ಅವರಿಬ್ಬರೂ ಆ ಕಾಡಿನಲ್ಲಿ ಅಲೆದರು.

ಅಪೊತ್ತು ಚಿನ್ನಳಿಗೆ ಸಂತೋಷವೋ ಸಂತೋಷ. ವಿಜಯನಗರದಲ್ಲಿ ಭಾರಿಯ ಭವನದಲ್ಲಿದ್ದರೂ ಪಂಜರದಲ್ಲಿನ ಹಕ್ಕಿಯಂತೆ ಮರೆಯಲ್ಲಿದ್ದವಳು ಇಂದು ಸ್ವೇಚ್ಛೆಯಾಗಿ ತಿರುಗುತ್ತಿದ್ದಾಳೆ. ಅಂಕೆ ಶಂಕೆಯಿಲ್ಲದೆ ತಾನೇ ತನ್ನ ಮನೋಹರನೊಡನೆ ಏಕಾಕಿಯಾಗಿ ತಿರುಗುತ್ತಿರುವುದೇ ಅವಳಿಗೆ ಸ್ವರ್ಗಕ್ಕೆ ಹೋಗಿಬಂದಷ್ಟು ಸಂತೋಷವಾಗಿದೆ.

ಬಿಸಿಲು ಹೊತ್ತಾಯಿತು. ಹೊತ್ತು ನೆತ್ತಿಗೆ ಬರುತ್ತಿರುವಾಗ ಎಲ್ಲಿಯೋ ಯಾವುದೋ ಮರದಬುಡದಲ್ಲಿ, ತಾವು ತಂದಿದ್ದ ಬುತ್ತಿಯನ್ನು ಇಬ್ಬರೂ ತಿಂದಿದ್ದಾರೆ. ಜೊತೆಯಲ್ಲಿ ತಂದಿದ್ದ ನೀರು ಕುಡಿದಿದ್ದಾರೆ. ಈವರೆಗೆ ಚಿನ್ನಳು ಎಂಜಲು ಎತ್ತಿದವಳಲ್ಲ. ಎಂಜಲು ಎಲೆ ತೆಗೆದು ತಾನೇ ಬಿಸಾಟರೆ ಅವಳಿಗೆ ಏನೋ ಸಂತೋಷ. ಎಷ್ಟೋದಿನ ತೊಳೆದಿರುವ ರಾಯನ ಕೈಯನ್ನು ತಾನೇ ತೊಳೆದಿದ್ದಾಳೆ. ಆದರೆ ಈ ದಿನ ಆಗಿರುವ ಸಂತೋಷ ಇದುವರೆಗೆ ಆಗಿರಲಿಲ್ಲ.

ಆ ಸಂತೋಷದಲ್ಲಿ ಇಬ್ಬರೂ ಅಡಕೆಲೆ ಹಾಕಿಕೊಳ್ಳುತ್ತ ಕುಳಿತು ಕೊಂಡರು. ಚಿನ್ನಳು ಕೇಳಿದಳು. “ಗೋಪಾಲ, ನಿನಗೊಂದು ಗುಟ್ಟು ಬೇಕೇನೋ ?”

" ನೀನು ಹೇಳುವುದೆಲ್ಲ ಗುಟ್ಟೆ? ನಿನ್ನ ಗುಟ್ಟು ನಾನು ಕಾಣೆನೆ? ರಾಯರ ಅಂತರಂಗ ಮೂರು ಬೆಳ್ಳುಳ್ಳಿ ಗಡ್ಡೆ, ಅಷ್ಟೇ ತಾನೇ?"

" ನಾನು ಹೇಳಬೇಕೆಂದಿರುವುದು ರಾಯರ ಅಂತರಂಗ. ಹೌದು. ಆದರೆ ಅದು ಮೂರು ಬೆಳ್ಳುಳ್ಳಿ ಗಡ್ಡೆ ಅಲ್ಲ. ಅಷ್ಟೆ!"

" ನೀನು ಏನು ಹೇಳಿದರೂ ಕೇಳುವುದಕ್ಕೆ ಸಿದ್ಧವಾಗಿದ್ದೇನೆ. ಅದೇನು ಇಷ್ಟವಸರ? ಆ ಗುಟ್ಟು ಹೇಳುವುದಕ್ಕೇ ಶ್ರೀಶೈಲಕ್ಕೆ ಕರೆದುಕೊಂಡು ಬಂದೆಯೇನು?"

" ನಿಜವಾಗಿ, ಗೋಪಾಲ, ಈ ಶ್ರೀಶೈಲಕ್ಕೆ ಬಂದಾಗಲಿಂದ ನನಗೆ ಏನೋ ಇಲ್ಲಿಂದ ನಾನು ಹಿಂತಿರುಗಿ ಹೋಗುವುದಿಲ್ಲ ಎನ್ನಿಸಿಬಿಟ್ಟಿದೆ. ಅದರಿಂದಲೇ ಇಪ್ಪೊತ್ತು ನಿನಗೆ ಆ ಮಾತು ಹೇಳಬೇಕು ಎಂತಲೇ ಈ ಕಾಡಿಗೆ ನಿನ್ನನ್ನು ಎಳಕೊಂಡು ಬಂದೆ."

" ಹಾಗೆಂದರೆ?"

" ನಿಜವಾಗಿ ಕಣೋ, ನಾನಿನ್ನು ಬಹಳ ದಿನ ಬದುಕುವುದಿಲ್ಲ. ಹಾಗೆ ನಾನು ಹೋದರೂ ನಿನ್ನ ಸೌಭಾಗ್ಯ ಎಷ್ಟು ದೊಡ್ಡದು ಎನ್ನುವುದು ನಿನಗೆ ಗೊತ್ತಿರಲಿ ಎಂದು ಇಪ್ಪೊತ್ತು ಹೇಳುತ್ತೇನೆ."

ರಾಯನು ನಡುವೆ ಏನೋ ಮಾತನಾಡುವುದಕ್ಕೆ ಹೊರಟನು. ಚಿನ್ನಳು ಮೆತ್ತಗೆ ಬಾಯಮೇಲೆ ಒಂದೇಟು ಹೊಡೆದು, "ಬಾಯಿಮುಚ್ಚಿಕೊಂಡು ಕೇಳೋ ಎಂದರೆ?" ಎಂದಳು. ರಾಯನೂ ಒಪ್ಪಿಕೊಂಡನು.

" ನಾವು ಗೋಲ್ಕೊಂಡಕ್ಕೆ ಹೋಗಬೇಕು ಎಂದು ಅರಮನೆಯಲ್ಲಿ ಅಪ್ಪಣೆಯಾಯಿತಲ್ಲ. ಅಪ್ಪೊತ್ತು ನಾನು ಎರಡನೆಯ ಸಲ ತಿರುಗಿಹೋಗಿ ರಾಯರನ್ನು ಕಂಡು ಶ್ರೀಶೈಲಕ್ಕೆ ಹೋಗಿಬರಲು ಅಪ್ಪಣೆಯನ್ನು ಕೇಳಿಕೊಂಡು ಬಂದೆನಲ್ಲ. ಅಪ್ಪೊತ್ತೇನಾಯಿತು ಗೊತ್ತೇ?"

" ಗೊತ್ತಿಲ್ಲದೆ ಏನು? ಚಿನ್ನಾಸಾನಿಯವರು ರಾಯರ ವಿಶೇಷಾನುಗ್ರಹಕ್ಕೆ ಪಾತ್ರರಾದರು. ಅಷ್ಟೇ ತಾನೇ?"

" ಹೋಗೋ! ಅದೊಂದು ದೊಡ್ಡ ಗುಟ್ಟೇನೋ? ಅದಕ್ಕೆ ಮುಂಚೆ ರಾಯರೊಂದು ಮಾತನಾಡಿದರು."

" ಏನು?"

"ನಾನು ರಾಯರ ಅಪ್ಪಣೆಯನ್ನು ಕೇಳಲು ಹೋದವಳು, ಅವರ ಪಾದ ಮುಟ್ಟಿ ಕಣ್ಣಿಗೊತ್ತಿಕೊಂಡು, 'ನನ್ನ ದೇವರ ಅಪ್ಪಣೆಯಾದರೆ ಶ್ರೀಶೈಲದ ದೇವರ ದರ್ಶನಮಾಡಿಬರುತ್ತೇನೆ' ಎಂದು ಕೈಮುಗಿದೆ. ಆಗ ಅವರು ಏನು ಮಾಡಿದರು ಬಲ್ಲೆಯಾ?"

"ಹೇಳು."

"ಆ ಮೊಕ ಕೆಂಪಗೆ ಮಾಡಿಕೊಂಡು, ಒಳಗಿದ್ದ ಹೊಟ್ಟೆಯಕಿಚ್ಚನ್ನೆಲ್ಲಾ ಮೊಕದಿಂದ ಅಲ್ಲ, ಕಣ್ಣಿನಿಂದಲೇ ಕಾರುತ್ತ, 'ದೇವರು, ದೇವರು, ಆವರೆ ನಿನ್ನ ಪೂಜೆಯೆಲ್ಲಾ ಇನ್ನಾವುದೋ ದೇವರಿಗೆ' ಎಂದುಬಿಟ್ಟರು."

ರಾಯನು ಗಹಗಹಿಸಿ ನಕ್ಕನು. ಚಿನ್ನಳು, "ನೋಡಿದೆಯೇನೋ? ವಿಜಯನಗರದ ಚಕ್ರವರ್ತಿಗಳು ಬೇಕುಬೇಕು ಎನ್ನುವ ಹೆಣ್ಣು ನಿನ್ನ ಚರಣ ದಾಸಿ. ಆದರೂ ನಿನಗೆ ಅವಳ ಮೇಲೆ ಅಭಿಮಾನವಿಲ್ಲ. ಲೋ, ಗೋಪು, ಈ ಜನ್ಮದಲ್ಲಿಯೂ ನಿನಗೆ ಹೆಂಡತಿಯಾಗಿ ನಿನ್ನ ಜೊತೆಯಲ್ಲಿ ಸಂಸಾರಮಾಡಿ ಕೊಂಡಿರುವ ಭಾಗ್ಯ ಇಲ್ಲದೆ ಹೋಯಿತು. ಇನ್ನೊಂದು ಜನ್ಮಕ್ಕಾದರೂ ಬರಲಿ ಕಣೋ. ಆ ಭಾಗ್ಯ ಕೊಡೋ" ಎಂದು ಅವನಿಗೆ ತೆಕ್ಕೆಬಿದ್ದಳು.

ರಾಯನು ಕಣ್ಣುತುಂಬಾ ನೀರಿಟ್ಟುಕೊಂಡು ಅವಳ ಮುಖದ ತುಂಬಾ ಮುತ್ತಿಡುತ್ತ "ಚಿನ್ನಾ, ನೀನು ತಪ್ಪು ತಿಳಿದುಕೊಂಡೆ. ನಿನ್ನ ಮೇಲಿರುವ ಅಭಿಮಾನದಲ್ಲಿ ನೂರರಲ್ಲಿ ಒಂದು ಪಾಲು ಹೆಂಡತಿಯ ಮೇಲೆ ಇಲ್ಲ. ಆದರೂ ಕೈ ಹಿಡಿದವಳು. ಅದರಿಂದ ಅವಳಿಗೆ ದ್ರೋಹಮಾಡಲಾರದೆ ಇದ್ದೇನೆ. ಇವೊತ್ತು ನಾನೂ ಒಂದು ಗುಟ್ಟು ನಿನಗೆ ಹೇಳುತ್ತೇನೆ ಕೇಳು. ನೀನು ನಿನ್ನ ರವಿಕೆಯ ಗಂಟಿನಲ್ಲಿ ಕಟ್ಟಿದ್ದೀಯಲ್ಲಾ ಆ ಗಂಧವಬಿಲ್ಲೆ. ನಾನು ಅದಾಗಬೇಕು. ಯಾವಾಗಲೂ ನಿನ್ನ ಎದೆಯ ಮಗ್ಗುಲಲ್ಲಿ ಸ್ತನಗಳ ನಡುವೆ ಇದ್ದುಬಿಡಬೇಕು ಎಂದು ನನ್ನ ಆಸೆ. ನಾನು ಮನೆಯಲ್ಲಿ ಹೆಂಡತಿಯೊಡನಿದ್ದರೂ ನನ್ನ ಹೃದಯ ವನ್ನು ಬಿಚ್ಚಿದರೆ ಅಲ್ಲಿ ಕಾಣುವುದೇನು ಬಲ್ಲೆಯಾ? ನಿನ್ನ ಮೂರ್ತಿ. ನಮಗೆ ಕುಲದೇವರು, ಇಷ್ಟದೇವರು, ಎಂದು ಇಲ್ಲವೆ? ಕುಲದೇವರಿಗೆ ಮೊದಲನೆಯ ಪೂಜೆಯಾದರೂ ಉಪಚಾರಾದಿಗಳೆಲ್ಲ ಯಾರಿಗೆ? ಇಷ್ಟ ದೈವಕ್ಕಲ್ಲವೇ? ಹಾಗೆ ಚಿನ್ನಾ, ನನ್ನ ಹೆಂಡತಿ ಕುಲದೈವ, ನೀನು ಇಷ್ಟದೈವ. ನೀನು ಇನ್ನೊಂದು ಜನ್ಮಕ್ಕಾದರೂ ಹೆಂಡತಿಯಾಗಬೇಕೆಂದೆ. ಇನ್ನೊಂದು ಜನ್ಮದ

ವರೆಗೂ ಏಕೆ? ಇವೋ ಇಂದೇ, ಪ್ರಮಾಣ ಮಾಡುವೆನು. ಇಗೋ ಈ ಆಕಾಶ, ಈ ಭೂಮಿ, ಈ ವನದೇವತೆ ಎಲ್ಲರೂ ನಾನಾಡುವ ಮಾತಿಗೆ ಸಾಕ್ಷಿಯಾಗಿರಲಿ. ಇನ್ನು ಮುಂದೆ ನಿನ್ನಲ್ಲಿ ಮದುವೆಯಾದ ಹೆಂಡತಿಯಲ್ಲಿ ಹೇಗಿರಬೇಕೋ ಹಾಗಿರುವೆನು. ಇದಕ್ಕೆ ತಪ್ಪಿದರೆ ನೀನಿಟ್ಟ ಆಣೆ."

ಚಿನ್ನಳು ಏನೋ ಒಂದು ದುರ್ಭರವಾದ ದುಃಖದಿಂದ ಭಾರಿಯ ನಿಟ್ಟುಸಿರು ಬಿಟ್ಟು ಹೇಳಿದಳು. "ಇಲ್ಲಪ್ಪ, ಈ ಜನ್ಮ ಎನ್ನಬೇಡ, ಇದು ಸೂಳೆಯ ಜನ್ಮ. ಅರಮನೆಯ ಉಪ್ಪು ತಲೆತಲಾಂತರದಿಂದ ತಿಂದು ಇಂದು ರಾಯರಿಗೆ ಸೆರಗು ಹಾಸದಿದ್ದರೆ ಆದೀತೆ? ಇನ್ನೊಬ್ಬನಿಗೆ ಹಾಸಿ ಎಂಜಲಾದ ಸೆರಗು ನಿನಗೆ ಹಾಸಿ, ನೀನು ನನಗೆ ಮೀಸಲಾಗಿರು ಎಂದರೆ ಎಲ್ಲಿಯ ನ್ಯಾಯ? ನೀನು ಗಂಡು, ಗಂಡು ಮೀಸಲಾದರೆ ಹೆಣ್ಣಿಗೆ ಸಂತೋಷ. ಆದರೂ ನನಗೆ ಮೀಸಲಾಗಬೇಕು ಎನ್ನುವುದು ನಾನು ನಿನಗೇ ಹೊರತು ನೀನು ನನಗಲ್ಲ. ದೇವರಿಗೆ ಮಡಿಯಲ್ಲಿ ಮಾಡುವ ನೈವೇದ್ಯದ ಅಡುಗೆಯಂತೆ ನಾನು ಒಂದು ಜನ್ಮವಾದರೂ ನಿನಗೆ ಮೀಸಲು ಮಾಡಬೇಕು ಗೋಪಾಲ. ಅದಕ್ಕಾಗಿ ಏನು ಮಾಡಬೇಕಾದರೂ ಮಾಡಲು ಸಿದ್ಧವಾಗಿದ್ದೇನೆ."

"ಚಿನ್ನಾ ನಾನೇನಾದರೂ, ಪುಣ್ಯ ಮಾಡಿದ್ದರೆ ನಿನ್ನ ಇಚ್ಛೆ ಫಲಿಸುತ್ತದೆ. ಈ ಜನ್ಮದಲ್ಲಿಯೇ ನಿನ್ನನ್ನು ಹೆಂಡತಿಯೆಂದು ಒಪ್ಪಿಕೊಳ್ಳುವುದಕ್ಕೆ ಸಿದ್ಧವಾಗಿರುವೆನು. ನೀನು ಇನ್ನೂ ಶುದ್ಧಳಾಗಿ ಬರುವೆನೆಂದರೆ ಬೇಡವೆನ್ನುವೆನೆ? ಇಗೋ, ಈ ಪ್ರಮಾಣದಿಂದ ನಿನಗೆ ತೃಪ್ತಿಯಾಗುವಹಾಗಿದ್ದರೆ, ತಕೋ, ನೀನು ಹೆಂಡತಿಯಾದರೆ ಅನನ್ಯಲಭ್ಯನಾಗುವ ಪತಿಯಾಗಿ ಸಂತೋಷವಾಗಿ ನಿನ್ನೊಡನೆ ಬಾಳುವ ಭಾಗ್ಯ ನನಗಾಗಲಿ" ಎಂದು ಕೈಯಲ್ಲಿ ಕೈಯಿಟ್ಟನು.

ಚಿನ್ನಳು ರಾಯನನ್ನು ತಬ್ಬಿಕೊಂಡಳು. ಮುತ್ತಿಟ್ಟುಕೊಂಡಳು. ಆ ಪ್ರೌಢಾಂಗನೆಯ ವಿಶ್ವಾಸದ ಚೇಷ್ಟೆಗಳಲ್ಲಿ ರಾಯನು ಶುದ್ಧವಾಗಿ ಕರಗಿ ಹೋದನು. ಅವಳು ಒಂದು ಗಳಿಗೆ ಆ ಗಾಢಾಲಿಂಗನದ ಸೌಖ್ಯವನ್ನು ಅನುಭವಿಸಿ "ಗೋಪಾಲ, ಈ ಜನ್ಮ ಇಲ್ಲಿಗೆ ಸಾಕು ಕಣೊ. ಹೀಗೇ ನಿನ್ನನ್ನು ತಬ್ಬಿಕೊಂಡು ನಿನ್ನ ತೋಳು ತೆಕ್ಕೆಯಲ್ಲಿ ಪ್ರಾಣಬಿಟ್ಟರೆ ನನ್ನಂಥಾ ಪುಣ್ಯವಂತಳಿಲ್ಲ" ಎಂದಳು.

"ಏಕೆ ಹಾಗೆ ಹೇಳುತ್ತೀ? ಇನ್ನು ಮುಂದೆ ನಿನ್ನ ಜೀವನ ಬಹಳ

ಸುಖ, ಚಿನ್ನಾ. ಅಂತಹ ಸುಖದಿಂದ ವಂಚಿತಳಾಗಬೇಕೆಂದು ಮೃತ್ಯುವನ್ನು ಕೋರುತ್ತಿದ್ದೀಯಾ ? ”

“ ಇಲ್ಲ. ಗೋಪಾಲ, ನಾನು ಮೃತ್ಯುವನ್ನು ಕೋರುತ್ತಿಲ್ಲ. ತಾನಾಗಿ ಬಂದಿದೆ. ಸ್ವಾಮಿಕಾರ್ಯವಾಯಿತು. ಸ್ವಕಾರ್ಯವಾಯಿತು. ಇನ್ನೆಷ್ಟು ದಿನ ಇದ್ದರೂ ಚರ್ವಿತಚರ್ವಣ.......”

ಚಿನ್ನಳು ಏನು ಹೇಳಬೇಕೆಂದಿದ್ದಳೋ ? ಅಷ್ಟರಲ್ಲಿ ಆವುಗೆಯ ಸದ್ದು ಕೇಳಿಸಿತು. ಮೈಮರೆತು ಬಿದ್ದಿದ್ದ ಅವರಿಗೆ ಕೂಡ ಕೇಳಿಸಿ, ಅವರು ಥಟ್ಟನೆದ್ದರು. ಇಬ್ಬರಿಗೂ ಮೈಮೇಲೆ ಬಟ್ಟೆಗಳು ಜಾರಿವೆ. ಎದ್ದು ಬಟ್ಟೆಗಳನ್ನು ಎಳೆದುಕೊಳ್ಳುವುದರೊಳಗಾಗಿ ಯಾರೋ ಯತಿಗಳು ಬಂದು ಎದುರು ನಿಂತಿದ್ದರು.

ಇಬ್ಬರೂ ನಮಸ್ಕಾರ ಮಾಡಿದರು. ಯತಿಗಳಿಗೆ ಅವರ ಮೇಲೆ ಲಕ್ಷ್ಯವೇ ಇಲ್ಲ. ಕಾಲಿಂದ ತಲೆಯವರೆಗೆ ದುರದುರನೆ ನೋಡುತ್ತಿದ್ದರೂ ಅವರಿಗೆ ಚಿನ್ನಳ ಸ್ತ್ರೀತ್ವದ ಮೇಲೆ ಅಷ್ಟು ಲಕ್ಷ್ಯವಿದ್ದಂತೆ ತೋರಲಿಲ್ಲ. ಯತಿಗಳು ಸಂತೋಷ ನಿರ್ಭರಚಿತ್ತರಾಗಿ, ಭಕ್ತಿಯ ಆವೇಶದಿಂದ “ ಜಯಸರ್ವಗತೇ ದೇವಿನಾರಾಯಣಿ ನಮೋಽಸ್ತುತೇ ” ಎಂದು ನಮಸ್ಕಾರ ಮಾಡಿದರು. ಅವರಿಗೆ ಮಗ್ಗುಲಲ್ಲಿ ನಿಂತಿರುವ ಗೋಪಾಲರಾಯನ ಇರವಿನ ಅರಿವೇ ಇರಲಿಲ್ಲ.

ಚಿನ್ನಳಿಗೆ ಬಲು ನಾಚಿಕೆಯಾಯಿತು. ಎಷ್ಟಾದರೂ ತಾನು ಸೂಳೆ. ತನಗೀ ಯತಿಯು ನಮಸ್ಕಾರ ಮಾಡಿದನಲ್ಲಾ ಎಂದು ಬಹಳ ಸಂಕೋಚವಾಗಿ, “ ದೇವ, ಮನ್ನಿಸಬೇಕು, ಈ ದಾಸಿಯು ನಮಸ್ಕಾರಕ್ಕೆ ಅರ್ಹಳಲ್ಲ” ಎಂದಳು.

“ ದೇವಿ, ಹಾಗೆನ್ನದಿರು. ನೀನು ಜನ್ಮದಿಂದ ಏನೇ ಆಗಿರಲೊಲ್ಲೆಯೇಕೆ? ನಿನ್ನೆಯ ರಾತ್ರಿ ನನ್ನ ಇಷ್ಟದೇವತೆಯು ಕನಸಿನಲ್ಲಿ ಬಂದು ನಾನು ಇಲ್ಲಿರುವೆನು ಎಂದು ವಚನವನ್ನು ಕೊಟ್ಟಳು. ನಾನು ಅದರಂತೆ ಬಂದೆ. ಇದೋ, ಇದೇ ಹಲಸಿನ ಮರ. ನೋಡು. ಅಗೋ ಅಲ್ಲಿ ಕಾಣುತ್ತಿರುವ ಆಲದ ಮರ. ಇದೋ ಕೆಳಗೆ ಹರಿಯುತ್ತಿರುವ ನಿರ್ಝರಿಣಿ. ಅಗೋ ಅಲ್ಲಿ ಗುಹೆಯ ಮಗ್ಗುಲಲ್ಲಿರುವ ಬಂಡೆ. ಆ ಗುಹೆಗೆ ಹುಲಿಯ ಗುಹೆ ಎಂದು ಹೆಸರು. ಅಲ್ಲಿ ಯಾವಾಗಲೂ ಹುಲಿಗಳು ಇದ್ದೇ ಇರುತ್ತವೆ. ಅಗೋ ನೋಡು. ಅಲ್ಲೊಂದು

ಹುಲಿಯು ಬಂದು ಆ ಬಂಡೆಯ ಮೇಲೆ ನಿಂತುಕೊಂಡು ಆಕಳಿಸುತ್ತಿದೆ. ಹೆದರಬೇಡ. ಈ ಜಂತು ಇಲ್ಲಿರುವಾಗ ಯಾವ ವನ್ಯಜಂತುವೂ ನಿಮಗೆ ಏನೂ ಮಾಡುವುದಿಲ್ಲ. ಬೇಕಾದರೆ, ಅದು ಬಂದು ನಿನ್ನನ್ನು ಬೆನ್ನಿನಮೇಲೆ ಕೂರಿಸಿಕೊಂಡು ಹೋಗಿ, ಬಿಡಾರಕ್ಕೆ ಬಿಟ್ಟುಬರುವುದು. ಅದಿರಲಿ, ಇಗೋ ನನ್ನ ಮಾತು ಕೇಳು. ತಾಯೀ, ಜಗನ್ಮಾತೆ, ನೀನು ಯಾರೇ ಆಗಿದ್ದರೂ ದಿವ್ಯಾಂಶ ಸಂಭೂತಳು. ಇಲ್ಲದಿದ್ದರೆ, ನನ್ನ ತಾಯಿಯು ಇಂದು ನಿನ್ನ ರೂಪದಲ್ಲಿ ನನಗೆ ದರ್ಶನ ಕೊಡುತ್ತಿರಲಿಲ್ಲ. ನಾನು ತಾಯಿಯ ಅಪ್ಪಣೆ ಯಿಂದ ತಾಯಿಯನ್ನು ಕಾಣುವುದಕ್ಕೆ ಬಂದಿದ್ದೇನೆ. ನನ್ನ ತಾಯಿಯು ಹೇಳಿದ ಲಕ್ಷಣಗಳೆಲ್ಲ ನಿನ್ನಲ್ಲಿವೆಯಾಗಿ ನೀನೇ ನನಗೆ ಜಗನ್ಮಾತೆಯ ಸ್ವರೂಪಳು. ನೀನು ಬಂದು ನನ್ನ ಪೂಜೆಯನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡು. ಮಹಾದೇವಿ, ಶಿವವಲ್ಲಭೆ, ಇನ್ನು ಉಳಿದಿರುವ ಈ ಮೂರು ದಿನಗಳಲ್ಲಿ ದಿನವೂ ಪೂಜೆಯನ್ನು ತೆಗೆದುಕೊಂಡು ನನ್ನ ಜನ್ಮವು ಸಾರ್ಥಕವಾಗುವಂತೆ ಅನುಗ್ರಹಿಸು. ಇಲ್ಲವೆನ್ನಬೇಡ. ತೇಜೋಮಯಿ ಯಾಗಿ, ತೇಜೋದೇಹಿಯಾದ ನಿನ್ನನ್ನು ಪೂಜೆ ಮಾಡುವ ಭಾಗ್ಯವನ್ನು ಕೊಟ್ಟಿರುವ ಹೇ ಲಲಿತಾಮಾತೆ, ನನ್ನ ಬಾಲ್ಯದಲ್ಲಿ ಮಾಡಿದ್ದ ಸಂಕಲ್ಪವೂ ಫಲಿಸಿಹೋಗಲಿ. ಮತ್ತೊಂದು ಜನ್ಮಕ್ಕೆ ಶೇಷವುಳಿಯುವಂತೆ ಈಗಲೇ ರಕ್ತ ಮಾಂಸದ ದೇಹದಲ್ಲಿ ಬಂದು, ಪಾರ್ಥಿವದೇಹದಲ್ಲಿ ಪೂಜೆಗೊಂಡು ಅನುಗ್ರಹ ಮಾಡು" ಎಂದು ಮತ್ತೆ ನಮಸ್ಕಾರ ಮಾಡಿದರು.

ಚಿನ್ನಳಿಗೆ ಮೈಮೇಲೆ ಪ್ರಜ್ಞೆ ತಪ್ಪಿತು. ಏನೋ ಆವೇಶಬಂದವಳಂತೆ ದಿಟ್ಟವಾಗಿ ನಿಂತಳು. ಮಾನವಿಯರಿಗೆ ಸಾಧ್ಯವಲ್ಲದ ಅನುಗ್ರಹಭಾವವೊಂದು ಆಕೆಯ ಮುಖದ ಮೇಲೆ ವಿರಾಜಿಸಿತು. ಮನೋಹರವಾದ ದೃಢವಾಗಿ ಗಂಭೀರವಾದ ಸಣ್ಣ ಗುಡುಗಿನಂತಹ ದನಿಯಿಂದ ಮಾತನಾಡಿದಳು. ಗೋಪಾಲರಾಯನಿಗೆ ಚಿನ್ನಳು ಅಂತಹ ದನಿಯಿಂದ ಮಾತನಾಡಿದ ನೆನಪೇ ಇಲ್ಲ.

"ಎಚ್ಚರಿಕೆ, ಯತೀಂದ್ರ, ಈ ದೇಹ ಸೂಳೆಯದು. ಇವಳು ಯಾರು ಎಂಬುದನ್ನು ಈ ಬೆಟ್ಟದಲ್ಲಿರುವವರೆಲ್ಲ ಬಲ್ಲರು. ಇಂಥವಳಿಗೆ ಪೂಜೆಯನ್ನು ಮಾಡಿದರೆ ಎಲ್ಲರೂ ನಿನ್ನನ್ನು ತೆಗಳುವರು. ಎಲ್ಲರ ಬಾಯಿಗೂ ಗುರಿಯಾಗು

ವೆಯಾ ? ನೀನು ಆಜನ್ಮವೂ ಮಾಡಿದ ತಪಸ್ಸನ್ನೆಲ್ಲ ಈ ವ್ಯಭಿಚಾರಿಣಿಯ ಪೂಜೆಯಿಂದ ಕಳೆದುಕೊಳ್ಳುವೆಯಾ ? ಪಾರ್ಥಿವ ದೇಹಕ್ಕೆ ಪೂಜೆ ಮಾಡ ಬೇಕೆಂಬ ಹಂಬಲದಿಂದ ಅಪೂಜ್ಯವಸ್ತುವನ್ನು ಪೂಜಿಸಿ ಮೋಘಕರ್ಮನಾಗು ವೆಯಾ ? ಯೋಚಿಸಿ ನೋಡು."

ಯತಿಗಳು ನಿಶ್ಚಲರಾಗಿ ನುಡಿದರು. "ದೇವಿ, ಅಹರ್ನಿಶಿಯಿರಲಿ, ಶ್ವಾಸ ಶ್ವಾಸಗಳಲ್ಲಿಯೂ ಈ ದೇಹದಲ್ಲಿ ನಿಂತು ಪೂಜೆಯನ್ನು ತೆಗೆದುಕೊಳ್ಳುತ್ತಿರುವ ನೀನು, ನಿನ್ನೆಯ ಕನಸಿನಲ್ಲಿ ಅಪ್ಪಣೆ ಕೊಟ್ಟೆ. ಅದರಂತೆ ನಾನು ಇಲ್ಲಿಗೆ ಬಂದೆ. ನೀನು ಯಾವ ರೂಪಿನಿಂದ ದರ್ಶನ ಕೊಡುವೆಯೆಂದು ಅಪ್ಪಣೆ ಮಾಡಿದೆಯೋ ಅದೇ ರೂಪಿನಲ್ಲಿಯೇ ದರ್ಶನ ಕೊಟ್ಟಿರುವೆ. ಆ ದೇಹವು ಯಾರದು ಎಂಬ ಯೋಚನೆ ನನಗೇಕೆ ? ಇದರ ಮೇಲೆ ಅಣುರೇಣುತೃಣಕಾಷ್ಟಗಳಲ್ಲಿಯೂ ನೀನೇ ಅಲ್ಲವೆ ಇರುವವಳು ? ನೀನಿರುವೆಡೆ ಪಾಪವಾಗಲಿ, ಪುಣ್ಯವಾಗಲಿ, ಅದು ನನಗೆ ಪರಮಪವಿತ್ರ. ಇದು ವ್ಯಭಿಚಾರಿಣಿಯ ದೇಹವೆಂದೆ. ಅಲ್ಲಿರುವ ನಿನಗೆ ನನ್ನ ಪೂಜೆ, ತಾಯಿ. ಅವನ್ನೇ ಒಪ್ಪಿಕೋ. ನನಗೆ ಮಾಯೆಯನ್ನು ಹಾಕಬೇಡ. ಕೃಪೆಮಾಡು" ಎಂದು ಮತ್ತೆ ನಮಸ್ಕಾರ ಮಾಡಿದರು.

ತಾಯಿಯು "ಆಗಲಿ. ನಿನ್ನ ಭಕ್ತಿಯು ನಿನಗೆ ಫಲವಾಗಲಿ" ಎಂದಳು. ಚಿನ್ನಳು ಜ್ಞಾನತಪ್ಪಿ ಬಿದ್ದು ಹೋದಳು. ರಾಯನೂ ಯತಿಗಳೂ ಉಪಚಾರ ಮಾಡಿದರು. ಒಂದು ಅಷ್ಟು ಹೊತ್ತು ಆದಮೇಲೆ ಮತ್ತೆ ಪ್ರಜ್ಞೆ ಬಂತು. ಅವಳು ಕಣ್ಣುಬಿಟ್ಟಳು. ಆ ವೇಳೆಗೆ ಕಾವಲಿನವರು ಬಂದಿದ್ದರು. ಅಲ್ಲಿ ಇದ್ದ ಮರಗಳ ಕೊಂಬೆಗಳನ್ನು ಕಡಿದು ಸಣ್ಣದೊಂದು ಪಲ್ಲಕ್ಕಿಯ ಹಾಗೆ ಮಾಡಿಕೊಂಡು ಚಿನ್ನಳನ್ನು ಅದರಲ್ಲಿ ಮಲಗಿಸಿ ರಾಯನು ಯತಿಗಳ ಆಶ್ರಮಕ್ಕೆ ಕರೆದುಕೊಂಡು ಹೋದನು.

# ಅಧ್ಯಾಯ ಹದಿನಾರು

ಆಚಾರ್ಯರೂ, ರನ್ನಳೂ ಸುದ್ದಿಯನ್ನು ತಿಳಿದು ಗಾಬರಿಗಾಬರಿಯಾಗಿ ಆಶ್ರಮಕ್ಕೆ ಓಡಿಬಂದರು. ಆಚಾರ್ಯರು ನೋಡುತ್ತಾರೆ. ಯತಿ ಇನ್ನಾರೂ ಅಲ್ಲ. ಶಾಂಭವಾನಂದ.

ಅಲ್ಲಿ ಆಚಾರ್ಯರನ್ನು ಕಂಡು ಅವರಿಗೂ ಆಶ್ಚರ್ಯವಾಯಿತು. "ಇದೇನು ಶಾಮಣ್ಣ ; ಇಲ್ಲಿ ಬಂದಿರುವೆ ?" ಎಂದು ವಿಶ್ವಾಸದಿಂದ ಕೇಳಿದರು. ಆ ವೇಳೆಗೆ ಚಿನ್ನಳು ಎದ್ದು ಕುಳಿತಿರುವುದನ್ನು ಕಂಡು ಧೈರ್ಯಗೊಂಡು ಹೇಳಿದರು. "ನೀನು ಹೇಳಿದ್ದ ಹಾಗೆ ಗೋಲ್ಕೊಂಡದವರಿಗೂ, ವಿಜಯನಗರದವರಿಗೂ ಸಂಧಿಯಾಗಿದೆ. ಆ ಸಂಧಿಯನ್ನು ಸಾಧಿಸುವುದಕ್ಕಾಗಿ ನಾವೆಲ್ಲ ಗೋಲ್ಕೊಂಡಕ್ಕೆ ಹೋಗಿದ್ದೆವು."

"ಹಾಗಾದರೆ ಈಕೆ ?"

"ನಮ್ಮ ಚಿನ್ನಮ್ಮ."

ಶಾಂಭವಾನಂದರು ಕಣ್ಮುಚ್ಚಿಕೊಂಡು ಒಂದುಗಳಿಗೆ ಕುಳಿತುಕೊಂಡಿದ್ದು ಗಹಗಹಿಸಿ ನಕ್ಕುಬಿಟ್ಟರು ; ಹುಚ್ಚರಹಾಗೆ ಎದ್ದು ಕುಣಿದಾಡಿದರು. ಯಾರಿಗೂ ಇದು ಏಕೆ ಎಂಬುದು ಅರ್ಥವಾಗಲೊಲ್ಲದು.

ಹಾಗೆ ಆನಂದೋನ್ಮತ್ತರಾಗಿ ಒಂದುಗಳಿಗೆಯಿದ್ದು, "ಚಿನ್ನಮ್ಮನೇ ?" ಎನ್ನುತ್ತ, "ಶಾಮಣ್ಣ, ಇನ್ನು ಮೇಲೆ ಈಕೆ ಚಿನ್ನಮ್ಮನಲ್ಲ. ತಾಯಮ್ಮ! ನೀನೂ ತಾಯಮ್ಮ ಎಂದೇ ಕರೆ. ಈಕೆಯು ಎಂತಹ ಅದ್ಭುತಕಾರ್ಯವನ್ನು ಸಾಧಿಸುವಳೋ ನೋಡುವೆ. ತಾಯಮ್ಮ, ಇದೋ, ಈ ಭಸ್ಮವನ್ನು ಬಾಯಿಗೆ ಹಾಕಿಕೊಂಡು ಈ ಕುಂಕುಮವನ್ನು ಹಣೆಗೆ ಹಚ್ಚಿಕೊ. ನಿನಗೆ ಮೊದಲಿನಂತೆ ಶಕ್ತಿಯು ಬರುವುದು ಈಗ ಎಲ್ಲರೂ ಮಂಗಳಾರತಿ ಮಾಡಿಕೊಂಡು ಹೋಗಿ. ಅಲ್ಲಿ ಮಲ್ಲಿಕಾರ್ಜುನನು ನಿಮ್ಮ ಪೂಜೆಗೆ ಕಾದಿರುವನು. ಇನ್ನು ಮೂರುದಿನ ಮಲ್ಲಿಕಾರ್ಜುನನ ಪೂಜೆಯನ್ನು ಮನಸಾರ ಮಾಡಿಬಿಡಿ. ಆ ದೇವನು ನಿಮಗೆ ಒಲಿದಿರುವನು. ಹೋಗಿಬನ್ನಿ. ನಾಳೆಯ ದಿನ ಬೆಳಿಗ್ಗೆ ಒಂದು ಝಾವದ ಹೊತ್ತಿಗೆ, ಶಾಮಣ್ಣ, ಇವರನ್ನೆಲ್ಲ ಇಲ್ಲಿಗೆ ಪೂಜೆಗೆ ಕರೆದು

ಕೊಂಡು ಬಾ. ನೀವಿರುವ ಮೂರುದಿನವೂ ನಿತ್ಯವೂ ಪೂಜೆಗೆ ಬನ್ನಿ" ಎಂದರು.

ಆಚಾರ್ಯರಿಗೂ, ರನ್ನಳಿಗೂ ಆಶ್ಚರ್ಯವಾಯಿತು. ಅವರು ಇನ್ನು ಮೂರುದಿನ ಇಲ್ಲಿದ್ದು ಪೂಜೆಯನ್ನು ಮುಗಿಸಿಕೊಂಡು ರಾಜಧಾನಿಗೆ ಪ್ರಯಾಣ ಮಾಡಬೇಕು ಎಂದು ಮಾತನಾಡಿಕೊಂಡಿದ್ದರು.

ಚಿನ್ನಮ್ಮನು ಪ್ರಕೃತಿಸ್ಥಳಾಗಿದ್ದಳು. ಯತಿಗಳು ಪೂಜೆಮಾಡಿ ಮಂಗಳಾರತಿ ಮಾಡಿದರು. ಚಿನ್ನಮ್ಮನನ್ನು ತಾವು ಕುಳಿತಿದ್ದ ಆಸನದಲ್ಲಿ ಕುಳ್ಳಿರಿಸಿ ಬೇಕಾದಹಾಗೆ ಅರಿಸಿನ ಕುಂಕುಮಗಳಿಂದ ಪೂಜೆಮಾಡಿ, "ತಾಯೀ, ಈ ದಿನ ಇಷ್ಟುಸಾಕು. ನಾಳೆಯಿಂದ ಮೂರುದಿನ ತಪ್ಪದೆ ಬಂದು ಪೂಜೆಯನ್ನೊಪ್ಪಿಸಿಕೊಂಡು ನನ್ನನ್ನು ಕೃತಾರ್ಥನನ್ನು ಮಾಡು" ಎಂದು ನಮಸ್ಕಾರಮಾಡಿ, ಅಷ್ಟುದೂರ ಬಂದು ಕಳುಹಿಸಿಕೊಟ್ಟರು.

ಆಚಾರ್ಯರು ಸಪರಿವಾರರಾಗಿ ಶಿಬಿರಕ್ಕೆ ಬಂದರು. ಬರುತ್ತಿದ್ದಹಾಗೆಯೇ ಮತ್ತೆ ಚಿನ್ನಳಮೇಲೆ ದೇವಿಯ ಸಂಚಾರವಾಯಿತು, ಆಚಾರ್ಯರು ಬಂದು ನಿಂತುಕೊಳ್ಳುತ್ತಿದ್ದಹಾಗೆಯೇ ಹಿಂದೆ ಅವಳ ದೇವರ ಮನೆಯಲ್ಲಿ ಆದಂತೆ ದೇವೀದರ್ಶನವಾಯಿತು. ಚಿನ್ನಮ್ಮನ ಬಾಯಿಂದ "ಶಾಮಣ್ಣಾ, ನಾಳಿಸಿಂದ ಶಂಭುವಿನ ಆಶ್ರಮದಲ್ಲಿ ಸಹಸ್ರ ಸುವಾಸಿನೀ ಪೂಜೆಮಾಡಿಸು. ಮಾಡಿ ಸುತ್ತೀಯಷ್ಟೆ ?" ಎಂದು ವಾಣಿಯು ಬಂತು. ಆಚಾರ್ಯರು ಆಗಬಹುದೆಂದು ಮಾತುಕೊಟ್ಟರು. ಹೋಗಿ ಸುವಾಸಿನಿಯರನ್ನು ಕರೆದುಕೊಂಡು ಬರುವವರು ಯಾರು? ತಾವು ಇರುವುದು ಜನವಸತಿಯಿಂದ ದೂರವಾದ ದುರ್ಗಮಪ್ರದೇಶ ದಲ್ಲಿ ಎಂಬುದು ಅವರಿಗೆ ಹೊಳೆಯಲಿಲ್ಲ. ದೇವಿಯೂ ಹೇಳಲಿಲ್ಲ.

ದೇವಿಯು ಎಲ್ಲರನ್ನೂ ಹೊರಗೆ ಕಳುಹಿಸಿದಳು. ರಾಯನನ್ನು ಮಾತ್ರ ಕರೆದು, "ನಾನು ಇವಳಲ್ಲಿ ಸಂಚಾರಮಾಡಿದೆನೆಂದು ನೀನು ಇವಳಿಗೆ ದೂರ ನಾಗಕೂಡದು. ಚಿನ್ನಳು ಹೆಂಡತಿಯೆಂದು ಒಪ್ಪಿಕೊಂಡಿರುವುದನ್ನು ಮರೆಯ ಬೇಡ. ಪೂಜೆಯಹೊತ್ತು ಅಷ್ಟುಮಾತ್ರ ಬಿಟ್ಟು ಮಿಕ್ಕ ಹೊತ್ತಿನಲ್ಲೆಲ್ಲ ನೀನು ಇವಳನ್ನು ಸಾಯುವವರೆಗೂ ಬಿಟ್ಟಗಲಕೂಡದು. ಹಾಗೆ ಅಗಲಿದರೆ ನನ್ನ ಆಣೆ" ಎಂದು ದೇವಿಯು ಹೊರಟೇಹೋದಳು. ಆಗ ಚಿನ್ನಳಿಗೆ ಆಯಾಸ ವಾಗಲಿಲ್ಲ. ಇನ್ನು ಅಷ್ಟುಹೊತ್ತಿನೊಳಗಾಗಿ ಆಕೆಯು ಪ್ರಕೃತಿಸ್ಥಳಾದಳು.

ಆಚಾರ್ಯರು ಒಂದು ಗಳಿಗೆ ಯೋಚಿಸಿದರು. "ನಾಳಿನಿಂದ ಸಹಸ್ರ ಸುವಾಸಿನೀ ಪೂಜೆಯಾಗಬೇಕು. ಎಲ್ಲಿಂದ ಕರೆಸುವುದು? ಏನು ಮಾಡಿಸುವುದು?" ಎಂದು ಯೋಚಿಸುತ್ತಿರುವಾಗಲೇ ರಾಜಾಧಿಕಾರಿಯು ಬಂದು ಕಾಣಿಸಿಕೊಂಡನು. ಆಚಾರ್ಯರು ಏನು ಎಂದು ವಿಚಾರಿಸಿದರು. "ಸಾವಿರಾರು ಜನರು ಜಾತ್ರೆಯೆಂದು ಬರುತ್ತಿದ್ದಾರೆ. ಅವರನ್ನು ಕೇಳಿದರೆ 'ಇಲ್ಲಿ ವಿಜಯನಗರದಿಂದ ಯಾರೋ ಬಂದು ಮಲ್ಲಿಕಾರ್ಜುನನಿಗೆ ಜಾತ್ರೆ ಮಾಡಿಸುತ್ತಿದ್ದಾರೆ. ಬನ್ನಿ ಎಂದು ಹೇಳಿದರು. ಅದರಂತೆ ಬಂದಿದ್ದೇವೆ' ಎನ್ನುತ್ತಾರೆ. ತಾವೇನಾದರೂ ಹೇಳಿಕಳುಹಿಸಿದ್ದೀರಾ? ಎಂದು ಕೇಳಲು ಬಂದೆ" ಎಂದು ರಾಜಪುರುಷನು ಅರಿಕೆಮಾಡಿದನು. ಅವರೂ ಯಾವುದೋ ಜ್ಞಾನದಲ್ಲಿ ಹೇಳಿದರು. "ಹೌದು, ನಾಳೆಯಿಂದ ಮೂರು ದಿವಸ ಜಾತ್ರೆ ನಡೆಯಲಿ. ಅಲ್ಲಿ ಆ ಯತೀಶ್ವರರು ಇರುವುದನ್ನು ಬಲ್ಲೆಯೋ?"

"ಕೇಳಿಬಲ್ಲೆ."

"ಅಲ್ಲಿ ಇನ್ನೂ ಮೂರುದಿನ, ದಿನದಿನವೂ ಸಹಸ್ರ ಸುವಾಸಿನಿಯರಿಗೆ ಸುವಾಸನೀ ಪೂಜೆಯನ್ನು ಕೊಡಬೇಕು. ಸಮಾರಾಧನೆ ಚೆನ್ನಾಗಿ ನಡೆಯಲಿ. ಇದನ್ನು ಸರ್ಕಾರಕ್ಕೆ ಖರ್ಚು ಹಾಕಬೇಡಿ. ಇದೋ ತೆಗೆದುಕೊಳ್ಳಿ. ಇದಿಷ್ಟು ಸರ್ವ ಪ್ರಕಾರದಿಂದಲೂ ಏನಾದರೂ ಮಾಡಿ ತೀರಿಸಿಬಿಡಿ. ಮತ್ತೆ ಸಾಲದು ಎಂದು ಬರುವ ಹಾಗೆ ಖರ್ಚುಮಾಡಿ" ಎಂದು ಹೇಳಿ ಒಂದು ಲಕ್ಷ ರೂಪಾಯಿ ಕೊಟ್ಟರು.

ಆ ವೇಳೆಗೆ ಸಂಜೆಯಾಗಿ ಹೋಗಿತ್ತು. ಮಲ್ಲಿಕಾರ್ಜುನನ ದೇವಾಲಯದಿಂದ "ಪೂಜೆಯೆಲ್ಲ ನಡೆದಿದೆ. ಮಂಗಳಾರತಿಗೆಂದು ಕಾಯಲಾಗಿದೆ" ಎಂದು ಸುದ್ದಿ ಬಂತು. ಚಿನ್ನಳು ತಂಗಿಯನ್ನು ಏಕಾಂತವಾಗಿಕರೆದು "ರನ್ನಾ, ಇವೊತ್ತು ಸ್ವಾಮಿಗೆ ಒಂದು ಲಕ್ಷ ರೂಪಾಯಿ ಒಪ್ಪಿಸಿಬಿಡಲೇನೇ?" ಎಂದಳು. ರನ್ನಳು "ಅಕ್ಕಾ ನೀನು ದೊಡ್ಡವಳು. ತಾಯಿತಂದೆ ಎಲ್ಲವೂ ನೀನೆ. ನೀನು ನನ್ನನ್ನು ಕೇಳಬೇಕೆ?" ಎಂದಳು. ತಂಗಿಯನ್ನು ತಬ್ಬಿಕೊಂಡು ಮುತ್ತಿಟ್ಟುಕೊಂಡು "ತಂಗಮ್ಮ, ನೀನು ಹೆಸರಿಗೆ ಮಾತ್ರ ರನ್ನಳಲ್ಲ. ನಾನು ಚಿನ್ನ, ನೀನು ರನ್ನ. ಏನೋ ಆಸೆಯಾಗಿದೆ. ಈ ಗೋಲ್ಕೊಂಡದಲ್ಲಿ ಬಂದುದೆಲ್ಲಾ ಶ್ರೀಶೈಲಕ್ಕೆ ಆಗಿ ಹೋಗಲಿ. ತಪ್ಪಿಲ್ಲವಲ್ಲಾ!" ಎಂದಳು. ತಂಗಿಯು ಒಪ್ಪಿದಳು.

ಆ ವೇಳೆಗೆ ರಾಯನು ಅಲ್ಲಿಗೆ ಬಂದು ಆ ಮಾತುಗಳನ್ನು ಕೇಳಿ "ನನ್ನ ಪಾಲೂ ಸೇರಿದೆ ತಾನೇ ?" ಎಂದು ಕೇಳಿದನು. ಚಿನ್ನಳು ತಂಗಿಯಿರುವುದನ್ನೂ ಲಕ್ಷಿಸದೆ, ಅವನ ಕಪಾಳವನ್ನು ಕೈಯಿಂದ ಹಾಗೆಂದು "ಯಜಮಾನ ಎಂದ ಮೇಲೆ ನಿಂತುಕೊಂಡು ಎಲ್ಲವನ್ನೂ ನೀನೇ ಖರ್ಚುಮಾಡು" ಎಂದು ತಂಗಿಯ ಮುಖವನ್ನು ನೋಡಿದಳು. ತಂಗಿಯು ಸರಿಸರಿ ಎನ್ನುವಂತೆ ಮುಸಿಮುಸಿ ನಕ್ಕಳು.

ಇವರು ದೇವಸ್ಥಾನಕ್ಕೆ ಹೊರಡಬೇಕು ಎನ್ನುವುದರೊಳಗಾಗಿ ಯಜಮಾನ್ ಸೆಟ್ಟರು ಬಂದಿರುವರು ಎಂದು ವರ್ತಮಾನ ತಿಳಿಯಿತು. ಅಕ್ಕನು ತಂಗಿಯನ್ನು ಕರೆದು, "ಗೋಪಾಲ, ರನ್ನಳಿಗೆ ದಿಕ್ಕಿಲ್ಲವಲ್ಲ. ನಾನು ಕಣ್ಮುಚ್ಚಿಕೊಂಡರೆ ನನ್ನ ಕಂದಮ್ಮನನ್ನು ಕಾಯುವವರಿಲ್ಲವಲ್ಲ ಎಂದು ಸಂಕಟಪಡುತ್ತಿದ್ದೆ. ಅಂತಹ ಕಾಲ ಬಂದರೆ ನಿನ್ನ ಕೈಯಲ್ಲಿಟ್ಟು ಪ್ರಾಣ ಬಿಡುವುದು ಎಂದಿದ್ದೆ. ಈ ಸೆಟ್ಟಿ ಇಲ್ಲಿಗೆ ಬಂದನೆಂದಮೇಲೆ ಮನಸ್ಸು ನಿರಾಳವಾಯಿತು. ಮಲ್ಲಿಕಾರ್ಜುನನೇ ಅವರನ್ನು ಕರೆತಂದ" ಎಂದಳು.

ರಾಯನಿಗೆ ಇದೇಕೆ ಇವಳು ಹೀಗೆ ಪ್ರಾಣಬಿಡುವ ಯೋಚನೆಯಲ್ಲಿದ್ದಾಳೆ ಎಂದು ಯೋಚನೆಯಾಯಿತು. ಆದರೂ ಮರ್ಮವನ್ನು ಬಿಡದೆ, "ಇರಲಿ. ಗೃಹಕೃತ್ಯಗಳನ್ನೆಲ್ಲ ನಿಧಾನವಾಗಿ ಮಾತನಾಡಿಕೊಳ್ಳೋಣ. ಮೊದಲು ದೇವಸ್ಥಾನಕ್ಕೆ ಹೋಗಿಬರೋಣ" ಎಂದು ಹೊರಟರು.

ಅಂದು ಮಲ್ಲಿಕಾರ್ಜುನನಿಗೆ ಚಿನ್ನಾಸಾನಿಯು ತನ್ನ ಭಕ್ತಿಯ ಕಾಣಿಕೆಯೆಂದು ಒಂದುಲಕ್ಷವನ್ನು ಅರ್ಪಿಸಿದಳು. ಮರುದಿನದಿಂದ ಒಂದು ಜಾತ್ರೆಯು ನಡೆಯುವುದೆಂದು ಏರ್ಪಾಡಾಯಿತು. ಆದಿನ ಅಲ್ಲಿ ಚಿನ್ನಾಸಾನಿಯ ಸ್ತೋತ್ರಪಾಠವನ್ನು ಕೇಳುವುದಕ್ಕೆ ನೂರಾರು ಜನರು ಸೇರಿದ್ದರು.

ಮರುದಿನ ಬೆಳಿಗ್ಗೆ ಆಚಾರ್ಯರು ಸಶಿಷ್ಯರಾಗಿ ಶಾಂಭವಾನಂದರ ಆಶ್ರಮಕ್ಕೆಬಂದರು. ಯತಿಗಳು ಎಲ್ಲರನ್ನೂ ವಿಶ್ವಾಸದಿಂದ ಬರಮಾಡಿಕೊಂಡರು. ಅವರಿಗೂ ದೇವಿಯು ಆಚಾರ್ಯರಿಗೆ ತಾನು ಮಾಡಿರುವ ಅಪ್ಪಣೆಯನ್ನು ತಿಳಿಸಿದ್ದಳು. ಅವರು ಚಿನ್ನಮ್ಮ, ಅಲ್ಲ, ತಾಯಮ್ಮನನ್ನು ಕೂರಿಸಿ ಸಹಸ್ರನಾಮಗಳಿಂದ ಪೂಜೆಮಾಡಿದರು. ಆ ವೇಳೆಗೆ ಆಗಲೇ ಅಲ್ಲಿ ಸಾವಿರಾರು ಜನರು ನೆರೆದಿದ್ದಾರೆ. ರಾಜಪುರುಷರು ಬಂದು ಅವರನ್ನೆಲ್ಲ

ಕ್ರಮವಾಗಿ ಸಾಲುಸಾಲಾಗಿ ಕುಳ್ಳಿರಿಸಿವರು. ಶಾಂಭವಾನಂದರು ತಾಯಮ್ಮ ನನ್ನು ಮುಂದೆಮಾಡಿಕೊಂಡು ಹೊರಟರು. ಪ್ರತಿಯೊಬ್ಬ ಸುವಾಸಿನಿಗೂ ಒಂದೊಂದು ಸೀರೆ, ಒಂದೊಂದು ರವಿಕೆಯಕಣ, ಮೊರದ ಬಾಗಿನವೊಂದು, ಹತ್ತುರೂಪಾಯಿ ದಕ್ಷಿಣೆ, ಎಂದು ಗೊತ್ತುಮಾಡಿ, ಒಬ್ಬೊಬ್ಬರಿಗೂ ಕ್ರಮವಾಗಿ ಪೂಜೆಮಾಡಿದರು. ಇತ್ತ ಶಾಂಭವಾನಂದರು ಅರಿಶಿನಕುಂಕುಮದ ತಟ್ಟೆಯನ್ನು ಹಿಡಿದುಕೊಂಡಿದ್ದಾರೆ. ಆಚಾರ್ಯರು ಹೂವುಗಂಧಗಳನ್ನೊಪ್ಪಿಸುತ್ತಿದ್ದಾರೆ. ಅತ್ತ ಸೆಟ್ಟರು ಹಣದಚೀಲ ಇಟ್ಟುಕೊಂಡು ದಕ್ಷಿಣಾ ದ್ರವ್ಯವನ್ನು ಕೊಡು ತ್ತಿದ್ದಾರೆ. ರನ್ನಮ್ಮನು ಮೊರದ ಬಾಗಿನಗಳನ್ನು ತೆಗೆದುಕೊಡುತ್ತಿದ್ದಾಳೆ. ಗೋಪಾಲರಾಯನು ಸೀರೆ ರವಿಕೆಕಣಗಳನ್ನು ಒಪ್ಪಿಸುತ್ತಿದ್ದಾನೆ. ಲಲಿತಾಸಹಸ್ರನಾಮದ ನಾಮ ಒಂದಕ್ಕೆ ಒಬ್ಬರಂತೆ, ಸಹಸ್ರನಾಮಗಳಿಗೂ ಸುವಾಸಿನೀಸಹಸ್ರಕ್ಕೆ ಪೂಜೆಯು ನಡೆದಿದೆ. ಎಲ್ಲವೂ ಆದಮೇಲೆ ಸಮೂಹಕ್ಕೆ ಸಮೂಹಕ್ಕೇ ಭೋಜನದ ಆಹ್ವಾನವಾಯಿತು. ಅಂದು ಸುವಾಸಿನಿಯರಿಗೆ ಮಾತ್ರವಲ್ಲ. ಸರ್ವತ್ರ ರಾಜಭೋಜನ.

ಸಂಜೆಯಲ್ಲಿ ಮಲ್ಲಿಕಾರ್ಜುನನಿಗೆ ರುದ್ರಾಕ್ಷ ಮಂಟಪದ ಉತ್ಸವವಾ ಯಿತು. ಆಚಾರ್ಯರು ಸಶಿಷ್ಯರಾಗಿ ತಂಬೂರಿಯನ್ನು ತೆಗೆದುಕೊಂಡು ಉತ್ಸವ ದಲ್ಲಿ ಭಜನೆ ಮಾಡುತ್ತ ಹೊರಟರು. ಚಿನ್ನರನ್ನೆಯರು ತಾಳವನ್ನು ತೆಗೆದು ಕೊಂಡರು. ರಾಯನು ಮೃದಂಗವನ್ನು ತೆಗೆದುಕೊಂಡನು. ಸೆಟ್ಟರು ಧೂಪ ದೀಪಗಳ ಮೇಲ್ವಿಚಾರಣೆ ನೋಡುತ್ತಿದ್ದಾರೆ. ನೋಡುವವರು ತಮ್ಮ ಕಣ್ಣನ್ನು ನಂಬಲಾರರು. ಸ್ವಾಮಿಯ ಹಿಂದೆ ಮುಂದೆ ಆಗುತ್ತಿರುವ ವೇದ ಘೋಷಗಳೇನು? ಅದ್ಭುತವಾಗಿದೆ. ಎಷ್ಟೋ ವರ್ಷಗಳಿಂದ ಆ ಬೆಟ್ಟಕ್ಕೆ ದೊಡ್ಡ ಜಾತ್ರೆಗೆ ಬರುತ್ತಿದ್ದವರು. "ನಾವು ನಮ್ಮ ಜನ್ಮದಲ್ಲಿ ಇಂತಹ ವೈಭವವನ್ನು ಕಂಡಿಲ್ಲ. ಇಂದು ದೇವಾದಿ ದೇವತೆಗಳೆಲ್ಲರೂ ಬಂದಿರಬೇಕು. ಈ ಪರ್ವತದಲ್ಲಿ ತಪಸ್ಸುಮಾಡಿಕೊಂಡಿರುವ ಋಷಿಮಹರ್ಷಿಗಳೆಲ್ಲರೂ ಬಂದಿರ ಬೇಕು. ಪರಶಿವನೇ ಈ ಜಾತ್ರೆಯನ್ನು ಮಾಡಿಸಿಕೊಳ್ಳಬೇಕೆಂದು ಮನಸ್ಸು ಮಾಡಿರಬೇಕು" ಎಂದು ಆನಂದತುಂದಿಲರಾಗಿ ಯಥೇಚ್ಛವಾಗಿ ಹೊಗಳು ತ್ತಿದ್ದಾರೆ.

ಮೂರುದಿನವೂ ಹಾಗೆಯೇ ನಡೆಯಿತು. ಮೂರನೆಯ ದಿನ

ಶಾಂಭವಾನಂದರು ಹೇಳಿದರು. "ಶಾಮಣ್ಣ, ಇಂದು ರಾತ್ರಿ ಮೊದಲನೆಯ ಝಾವವಾದಮೇಲೆ ನಾನು ಒಂದು ಪೂರ್ಣಾಹುತಿ ಮಾಡಬೇಕಾಗಿದೆ. ಇಷ್ಟವಿದ್ದರೆ ನೀನು ಬರಬಹುದು. ತಾಯಮ್ಮನಂತೂ ಬಂದೇಬರಬೇಕು. ಆಕೆಯು ಪೂರ್ಣಾಹುತಿಕಾಲದಲ್ಲಿ ಇರುವುದಕ್ಕೆ ಇಷ್ಟಪಟ್ಟರೆ ಬಹಳಸಂತೋಷ. ಇಲ್ಲದಿದ್ದರೆ ಪೂಜೆಯಾದ ಮೇಲೆ ಹೊರಟು ಹೋಗಲಿ" ಎಂದರು. ಆಚಾರ್ಯರು ಪೂರ್ಣಾಹುತಿಯ ವಿಚಾರವಾಗಿ ಏನೋ ಕೇಳಹೋದರು. ಅವರು ನಗು ನಗುತ್ತ, "ನೀನು ಏನೂ ಕೇಳಬೇಡ. ನಿನಗೆ ಇಷ್ಟವಿದ್ದರೆ ಬರಬಹುದು. ಇಲ್ಲದಿದ್ದರೆ ಇಲ್ಲ" ಎಂದು ಅಷ್ಟುಮಾತ್ರ ಹೇಳಿ ಹಲ್ಲುಬಿಟ್ಟರು. ಹಿಂದಿನ ಪೂರ್ಣಾಹುತಿಯ ನೆನಪಾಗಿ, ಆಚಾರ್ಯರಿಗೆ ಮುಂದೆ ಕೇಳುವ ಧೈರ್ಯ ವಾಗಲಿಲ್ಲ. ಆದರೂ ಬಹು ಧೈರ್ಯಮಾಡಿ, "ಅಲ್ಲಿ ಸ್ವಾಮಿಗೆ ಉತ್ಸವವಾದ ಮೇಲೆ ತಾನೇ?" ಎಂದರು.

"ಹೌದು, ಹೌದು. ಪೂರ್ಣಾಹುತಿಗೆ ಬರುವವರು ಊಟಮಾಡದೆ ಬನ್ನಿ. ಇಲ್ಲಿ ಪ್ರಸಾದ ಪೂರ್ಣವಾಗಿ ಸಿಕ್ಕುತ್ತದೆ" ಎಂದು ಉತ್ತರ ಬಂತು.

# ಅಧ್ಯಾಯ ಹದಿನೇಳು

ಅಂದಿನ ದಿನದ ಸಮಾರಾಧನೆಯನ್ನು ಹೊಗಳದವರಿಲ್ಲ. ಎಲ್ಲರೂ ಯಥೇಚ್ಛವಾಗಿ ಊಟಮಾಡಿ ತೃಪ್ತಿಯನ್ನು ಹೊಂದಿದ್ದಾರೆ. ತೃಪ್ತಿಯನ್ನು ಹೊಂದಿರುವುದು ಕೇವಲ ಮಾನವಗಣ ಮಾತ್ರವಲ್ಲ. ರಾತ್ರಿಂಚರರಾಗಿ ಅಲ್ಲಿಗೆ ಬರಬಹುದಾದ ವನ್ಯಮೃಗಗಳಿಗೂ ತೃಪ್ತಿಯಾಗುವಷ್ಟು ಎಲೆಗಳಲ್ಲಿ ಬಿಟ್ಟಿದ್ದಾರೆ. ಕಾಗೆ, ಹದ್ದು ಮೊದಲಾದ ಖೇಚರಗಳಂತೂ ತಿಂದು ತಿಂದು ತೃಪ್ತಿಯಾಗಿ ಬಿಟ್ಟು ಹೋಗುತ್ತಿವೆ. ನಾಯಿಗಳೂ ಕಟ್ಟರೆಯಾಗುವಷ್ಟು ತಿಂದು ಮೇಲಕ್ಕೆದ್ದು ಹೋಗಲಾರದೆ ಅಲ್ಲಿಯೇ ಮಲಗಿಬಿಟ್ಟಿವೆ.

ಅಂದಿನ ರಾತ್ರಿ ಉತ್ಸವವೂ ಅಷ್ಟೆ! ಸ್ವಾಮಿಯನ್ನು ನೋಡಿದರೆ ಮಾತನಾಡಿಸುವವರಿದ್ದರೆ ಮಾತನಾಡುವುದಕ್ಕೆ ಸಿದ್ಧವಾಗಿದ್ದೇನೆಯೆಂದು ಹೇಳುವಂತೆ ಸ್ವಾಮಿಯು ನಗುನಗುವಂತಿವೆ. ಇನ್ನೂ ಕಣ್ಣಿಟ್ಟು ನೋಡಿದರೆ ಉತ್ಸವಮೂರ್ತಿಗಳು ಎರಡೂ ಪಾರ್ವತಿಪರಮೇಶ್ವರರಿಬ್ಬರೂ ಏನೋ ಪರಸ್ಪರ ಮಾತನಾಡಿಕೊಳ್ಳುವಂತಿದೆ. ಅರ್ಚಕನಿಗೆ ಆಶ್ಚರ್ಯ. “ಇವೊತ್ತು ಮೂರ್ತಿಗಳು ಇಷ್ಟು ಸೊಗಸಾಗಿ ಕಾಣುತ್ತಿದ್ದಾರೆ. ಎಷ್ಟು ಜನರ ಕಣ್ಣು ತಗಲುವುದೋ? ಹೋಗುತ್ತಲೂ ಎರಡು ಸಲ ಕುಂಭಾರತಿ ಮಾಡಿಸಬೇಕು” ಎಂದು ಯೋಚನೆ ಮಾಡುತ್ತಿದ್ದಾನೆ.

ಭಜನೆಯಂತೂ ಅದ್ಭುತವಾಗಿದೆ. ಗ್ರಾಮಾಂತರಗಳಿಂದ ಬಂದಿರುವ ಜನ ಅಷ್ಟರಷ್ಟು ಕಲಾಪ್ರೌಢರಲ್ಲ. ಆದರೂ ಅವರಿಗೆ ಏನೋ ಒಂದು ಅಭೂತಪೂರ್ವವಾದ ಆನಂದ. ಎಲ್ಲೂ ಇಲ್ಲದ ಉತ್ಸಾಹ. ಭಜನೆ ಮಾಡುತ್ತಿರುವವರಿಗೆಲ್ಲ ಎಲ್ಲೂ ಇಲ್ಲದ ಭಕ್ತಿ. ಎಂದೂ ಇಲ್ಲದ ಸಂಭ್ರಮ. ಆಚಾರ್ಯರೇ ಮನಸ್ಸಿನಲ್ಲಿ ಅಂದುಕೊಳ್ಳುತ್ತಾರೆ. “ಇದೇನು, ಈ ಅಪರೂಪ! ನನ್ನ ಬಾಯಲ್ಲಿ ಯಾವೊತ್ತೂ ನುಡಿದಿರಲಿಲ್ಲವಲ್ಲ” ಎಂದು ತಾವೇ ಆಶ್ಚರ್ಯ ಪಡುತ್ತಾರೆ. ಅದೇ ಆಶ್ಚರ್ಯಭಾವ ರಾಯನಿಗೂ, ರನ್ನಳಿಗೂ ಇದೆ.

ಚಿನ್ನಮ್ಮನಿಗೆ ಅರ್ಧಅರ್ಧ ಜ್ಞಾನ. ಯಾವುದೋ ಕನಸು ಕಾಣುತ್ತಿರುವಂತಿದೆ. ಆ ಕನಸಿನಲ್ಲಿ ಚಕ್ರವರ್ತಿಗಳು ಬಂದಿದ್ದಾರೆ. ತಾನೆಲ್ಲಿಗೋ ಪ್ರಯಾಣ

ಹೊರಟಿದ್ದಾಳೆ. ಚಕ್ರವರ್ತಿಗಳನ್ನು ಹೋಗಿಬರಲು ಅಪ್ಪಣೆಕೊಡಬೇಕೆಂದು ಕೇಳುತ್ತಾಳೆ. ಅವರು, "ನನ್ನನ್ನು ಬಿಟ್ಟುಹೋಗುವುದೆಲ್ಲಿಗೆ ? ಅದೆಲ್ಲ ನಡೆಯದ ಮಾತು" ಎನ್ನುತ್ತಾರೆ. ಇವಳು ಹತ್ತಿರಹೋಗಿ ಸೋಟಿ ತಿವಿದು "ಅಯ್ಯೋ ಪೆದ್ದಂಭಟ್ಟ. ಹೋಗಬೇಕು ಎನ್ನುವವರು ಬೇಡ ಅಂದರೆ ನಿಲ್ಲುತ್ತಾರೆಯೇ ? ಹೋಗುತ್ತೇವೆ ಎಂದರೆ ಹೋಗಿ ಎನ್ನಬೇಕು" ಎನ್ನುತ್ತಾಳೆ. ಮಗ್ಗುಲಲ್ಲಿ ತಿರುಗಿದರೆ ಮಲ್ಲಿಕಾರ್ಜುನನು ಬಂದಿದ್ದಾನೆ. ಇಷ್ಟು ದಿವಸವೂ ತಾನು ಅಖಂಡಭಕ್ತಿಯಿಂದ ಸೇವಿಸಿದ ಪಂಪಾನಾಥನೂ ಮಗ್ಗುಲಲ್ಲಿ ನಿಂತಿದ್ದಾನೆ. ಅವರ ಮಗ್ಗುಲಲ್ಲಿ ಒಂದು ವಿಚಿತ್ರವಾಗಿ ಅಲಂಕೃತವಾಗಿರುವ ಪುಷ್ಪರಥ ವೊಂದಿದೆ. ಪಂಪಾಪತಿ, ಮಲ್ಲಿಕಾರ್ಜುನ ಇಬ್ಬರೂ ತನಗೆ ಹಸ್ತಲಾಘವವನ್ನು ಕೊಟ್ಟು ಪುಷ್ಪರಥಕ್ಕೆ ಹತ್ತಿಸುತ್ತಾರೆ. ಹತ್ತಿಹೋದರೆ ಅಲ್ಲಿ ಭುವನೇಶ್ವರಿಯು ಕುಳಿತಿದ್ದಾಳೆ. "ಬಾರೆ ತಾಯಿ. ನೀನು ಬರಲಿ ಎಂದು ಕಾದಿದ್ದೆ. ನಡೆ, ನಾವೆಲ್ಲರೂ ಹೊರಡೋಣ" ಎನ್ನುತ್ತಾಳೆ. ಹಾಗೇ ನೋಡಿದರೆ ಆಕೆ ಭ್ರಮರಾಂಭೆಯಾಗಿದ್ದಾಳೆ. "ನಿನ್ನ ಮೂರು ದಿನದ ಪೂಜೆ ನನ್ನ ಮನಸ್ಸಿಗೆ ಬಂತು. ಬಹು ಸಂತೋಷವಾಯಿತು. ಬಾ. ತಾಯಿ" ಎನ್ನುತ್ತಾಳೆ. ಆಕೆಯು ಆಲಿಂಗನವನ್ನು ಕೊಡುತ್ತಾಳೆ. ಆಲಿಂಗನದ ಭಾರದಿಂದ ಆದ ಸಂತೋಷದಲ್ಲಿ ಯಾರು ಎಂದು ನೋಡಿದರೆ ಗೋಪಾಲ. "ಗೋಪಾಲ, ನೋಡಿದೆಯೋ ? ನಿನಗೆ ಹೇಳದೆ ಹೊರಟುಹೋಗುತ್ತಿದ್ದೆನಲ್ಲ. ಹೋಗಿಬರಲೆ ?" ಎಂದು ತಾನು ಆಲಿಂಗಿಸುತ್ತಾಳೆ. ಅವಳ ನೀಡಿದ ಕೈಗಳು ಮುಂದೆ ಇದ್ದ ರನ್ನಳನ್ನು ಹಿಡಿದು ಕೊಂಡವು. ಅವಳು ಹಿಂತಿರುಗಿ ನೋಡಿದಳು. ಆ ವೇಳೆಗೆ ಅವಳಿಗೂ ಎಚ್ಚರವಾಯಿತು. ಏನಕ್ಕ ಎಂದು ಕೇಳಿದಳು. ನಾಚಿಕೆಗೊಂಡು ನಗುತ್ತಾ, ಇನ್ನೂ ಸ್ವಪ್ನವೃತ್ತಿಯಿದ್ದರೂ ಅದನ್ನು ಮುಚ್ಚಿಕೊಳ್ಳುತ್ತಾ, ಕಾಲು ಎಡವಿತು ಅಷ್ಟೇ ಎಂದಳು.

ಆ ವೇಳೆಗೆ ಉತ್ಸವವು ದೇವಸ್ಥಾನದ ಹತ್ತಿರಕ್ಕೆ ಬಂದಿತ್ತು. ಸ್ವಾಮಿ ಯನ್ನು ಎಲ್ಲರೂ ಸೇರಿ ಯಥಾಸ್ಥಾನವನ್ನು ಸೇರಿಸಿದರು.

ಆಚಾರ್ಯರಿಗೆ ಆಯಾಸವಾಗಿತ್ತು. ಒಂದು ಗಳಿಗೆ ಕುಳಿತು ವಿಶ್ರಮಿಸಿ ಕೊಂಡರು. ಎಲ್ಲರೂ ಆಯಾಸಪಟ್ಟಿದ್ದರೂ ಉತ್ಸಾಹವು ಮಾತ್ರ ಕುಂದಿರಲಿಲ್ಲ. ಎಲ್ಲರೂ ಶಾಂಭವಾನಂದರ ಆಶ್ರಮದ ಕಡೆ ಹೊರಟರು.

ಯತಿಗಳು ನಿರೀಕ್ಷೆಯಲ್ಲಿದ್ದರು. ಬರುತ್ತಿದ್ದ ಹಾಗೆಯೇ ದೇವಿಗೆ ಮಂಗಳಾರತಿಮಾಡಿ ಎಲ್ಲರಿಗೂ ಮಂಗಳಾರತಿಕೊಟ್ಟರು. "ಇದೇ ಕೊನೆಯ ಪೂಜೆ. ಇಂದು ತಾಯಮ್ಮನಲ್ಲದೆ ಇನ್ನು ಯಾರೂ ಇರುವಂತಿಲ್ಲ. ಬೇಕಾದರೆ ಆಚಾರ್ಯರು ಒಬ್ಬರು ಇರಬಹುದು" ಎಂದರು. ಎಲ್ಲರೂ ಬಂದು ಆಶ್ರಮದಿಂದ ಅಷ್ಟುದೂರದಲ್ಲಿ ನಿಂತರು. ಆಚಾರ್ಯರು, ಚಿನ್ನಮ್ಮ ಮಾತ್ರ ಆಶ್ರಮದಲ್ಲಿ ನಿಂತರು.

ಶಾಂಭವಾನಂದರು ನಗುನಗುತ್ತ, ಇಮ್ಮಡಿಸಿದ ಆನಂದ, ಉತ್ಸಾಹ ಸಂಭ್ರಮಗಳಿಂದ ಮಾತೃಪೂಜೆಯನ್ನು ನೆರವೇರಿಸಿದರು. "ಜಗನ್ಮಾತೆ, ನಿನ್ನ ಇಷ್ಟದಂತೆ ಇದುವರೆಗೆ ನಡೆದಿದೆ. ಇನ್ನು ಮುಂದೆ ನಡೆಯಬೇಕಾದುದು ನಿನಗೆ ಸೇರಿದುದು" ಎಂದು ನಮಸ್ಕಾರಮಾಡಿದರು. ತಾಯಮ್ಮನ ಮೇಲೆ ತಾಯಿಯು ಬಂದು "ಧನ್ಯ, ಧನ್ಯ, ಶಂಭು, ಧನ್ಯ" ಎಂದು ಆಚಾರ್ಯರ ಕಡೆ ತಿರುಗಿ, "ಶಾಮಣ್ಣ, ನಿನಗೇನು ಬೇಕು ಕೇಳಿಕೊ" ಎಂದಳು. ಆ ವೇಳೆಗೆ ಆ ಪೂಜಾದರ್ಶನದಿಂದಲೇ ಅರ್ಧಾರ್ಧವಾಗಿ ಸಮಾಧಿಯನ್ನು ಪಡೆದಿದ್ದ ಆಚಾರ್ಯರು "ತಾಯೆ, ನಿನ್ನ ಚರಣಾರವಿಂದಕ್ಕೆ ಸೇರಿಸಿಕೊ. ಇನ್ನು ಏನೂ ಬೇಡ" ಎಂದರು.

ತಾಯಿಯುನಕ್ಕಳು! "ಭಕ್ತ, ಇಲ್ಲಿ ಕೊಡು. ಆ ಮಾರ್ಜನಪಾತ್ರೆಯನ್ನು ಇತ್ತತಾ" ಎಂದಳು. ಯತಿಗಳು ಒಪ್ಪಿಸಿದರು. ಪದ್ಮಾಸನವನ್ನು ಹಾಕಿಕೊಂಡು ಕುಳಿತರು. ತಾಯಿಯು ಎಲ್ಲೆಲ್ಲಿಯೂ ಮಂತ್ರೋದಕವನ್ನು ಚಿಮುಕಿಸಿದಳು. ಪೂರ್ಣಾಹುತಿಯ ಪಾತ್ರವನ್ನು ಎತ್ತಿ ಅದರಲ್ಲಿದ್ದ ಆಜ್ಯವನ್ನು ಪೂರ್ಣವಾಗಿ ಅಗ್ನಿಕುಂಡಕ್ಕೆ ಆಹುತಿಮಾಡಿದಳು. ಯಜ್ಞೇಶ್ವರನು ಧಗಧಗಾಯಮಾನವಾಗಿ ಪ್ರಜ್ವಲಿಸಿದನು. ಆಕೆಯುಟ್ಟಿದ್ದ ಸೀರೆಯನ್ನೂ ಮುಟ್ಟಿಕೊಂಡು ಗುಡಿಸಲಿನ ಛಾವಣಿಯವರೆಗೂ ನೆಗೆದನು. ಗುಡಿಸಲು ಹತ್ತಿಕೊಂಡು ಉರಿಯು ಕಾಣಿಸಿತು. ತಾಯಿಯು ತನ್ನ ಸೀರೆಯು ಬೇಯುತ್ತಿರುವುದರ ಅರಿವೇ ಇಲ್ಲದೆ, ನೇರವಾಗಿ ಏನೂ ಆಗದಿದ್ದವಳಂತೆ ಗುಡಿಸಲಿನ ಬಾಗಿಲಿನಕಡೆಗೆ ಬಂದು ಹೊರಕ್ಕೆ ಬಂದು, ಬಾಗಿಲನ್ನು ಸೇರಿಸಿಕೊಂಡು ಈಚೆಗೆ ಬಂದಳು.

ದೂರದಲ್ಲಿದ್ದ ರಾಯ ಮೊದಲಾದವರು ಅಲ್ಲಿಂದ ಓಡಿಬಂದರು.

ಉರಿಯುತ್ತಿದ್ದ ಸೀರೆಯಲ್ಲಿ ನಿದಾನವಾಗಿ ನಡೆದುಬರುತ್ತಿರುವ ಚಿನ್ನಳನ್ನು ಕಂಡು ಅಯ್ಯೋ ! ಅಯ್ಯೋ ಎಂದು ಅತ್ತ ಕಡೆ ಓಡಿದರು. ಅವರು ಓಡುವುದ ರೊಳಗಾಗಿ ಸೀರೆ ಉರಿದೇಹೋಯಿತು. ಚಿನ್ನಳು ಕೆಳಕ್ಕೆ ಬಿದ್ದಳು. ರಾಯನು ತನಗೆ ಬರುವ ಆಪತ್ತಿನ ಲಕ್ಷ್ಯವೂ ಇಲ್ಲದೆ ಹೋಗಿ ಅವಳನ್ನು ಹಿಡಿದುಕೊಂಡನು. ಅವಳ ಆಸೆ ಪೂರ್ಣವಾಗಿ ನೆರವೇರಿತು.

